## ಈ ಲೇಖಕರ ಇತರ ಕೃತಿಗಳು

**ಕಾದಂಬರಿ :**

ಮಲ್ಲಮ್ಮನ ಪವಾಡ
ನಾಟ್ಯ ಮೋಹಿನಿ
ಮೃಣಾಳಿನಿ

**ನಾಟಕ :**

ಕುರುಕ್ಷೇತ್ರ
ಅಕ್ಕಮಹಾದೇವಿ
ಯಾಜ್ಞಸೇನಿ
ಸತೀತುಲಸಿ
ಗೌತಮ ಬುದ್ಧ
ಷಾಜಹಾನ್
ಪ್ರಚಂಡ ಚಾಣಕ್ಯ
ಪ್ರಭುದೇವ
ಅಭಿನೇತ್ರಿ

ಇತ್ಯಾದಿ.

# ಅಭಿಸಾರಿಕೆ

ಬಿ. ಪುಟ್ಟಸ್ವಾಮಯ್ಯ

ಪ್ರತಿಭಾಪ್ರಕಾಶನ

೬೧೪, ಅರಳೇಪೇಟೆ, ಬೆಂಗಳೂರು ೨.

ಪ್ರಥಮ ಮುದ್ರಣ

ಶಕ ೧೮೭೬ ಜಯ ಸಂವತ್ಸರ ಶ್ರಾವಣ—ಆಗಸ್ಟ್—೧೯೫೪

(ಈ ಕಾದಂಬರಿಯಲ್ಲಿ ಬರುವ ಪಾತ್ರಗಳೆಲ್ಲವೂ ಕಲ್ಪಿತವಾದವು. ಜೀವಿಸಿದ್ದ ಅಥವಾ ಜೀವಂತರಾದ ವ್ಯಕ್ತಿಗಳನ್ನು ಉದ್ದೇಶಿಸಿ ಬರೆಯಲ್ಪಟ್ಟಿರುವುದಿಲ್ಲ)

Sri Sujatha Printing Works,

E 117, M. P. Lane, Cottonpet, Bangalore-2.

# ವಾಚಕರಲ್ಲಿ ವಿನಂತಿ

ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಒಂದು ಲಘು ರೂಪ, ವಿರಾಮ ಕಾಲದಲ್ಲಿ ಮನೋರಂಜನೆಗಾಗಿ ಓದಬಹುದಾದದ್ದು ಕಾದಂಬರಿ ರಚನೆಯೂ ಅಷ್ಟೇ ಲಘುತ್ವ ನಿರುದ್ದೇಶಗಳಿಂದ ನಡೆದರೆ ಮಾತ್ರವೇ ರಚನೆ ಜನಪ್ರಿಯ ವಾಗುವುದೆಂಬುದು ಅನುಭವ ಸಿದ್ಧವಾಗಿದೆ

ಹಾಗಲ್ಲದೆ ಕಾದಂಬರಿ ರಚನೆಯಲ್ಲಿ, ವಾಸ್ತವದಲ್ಲಿ ಸಿಕ್ಕದಿರುವ ಘನೋದ್ದೇಶಗಳನ್ನು ಕಲ್ಪಿಸಿಕೊಂಡು ಅದಕ್ಕಾಗಿ ದೀರ್ಘ ಪ್ರಸ್ತಾವನೆಗಳನ್ನು ಬರೆಯುವುದು ಆತ್ಮ ವಂಚನೆ ಅಥವಾ ಪ್ರತಿಷ್ಠೆಯ ವ್ಯಕ್ತರೂಪವೆಂದು ಈ ಲೇಖಕನು ಭಾವಿಸುತ್ತಾನೆ ಹೂವಲ್ಲಿ ಪರಿಮಳವಿದ್ದರೆ ಜನರನ್ನು ಸೆಳೆಯುತ್ತದೆ, ರೂಪವಿದ್ದರೆ ಮೆಚ್ಚಿಸುತ್ತದೆ, ಗುಣಾವಗುಣಗಳಿಗೆ ತಕ್ಕಂತೆ ಹೃದಯವನ್ನೋ ಮುಡಿಯನ್ನೋ ಕಂಠವನ್ನೊ ಕಸವನ್ನೋ ಸೇರುತ್ತದೆ. ಹೂವಿಂದ ಪಡೆಯಬಹುದಾದ ಜೀವನ ಸೌಂದರ್ಯದ ಈ ಲಘು ಪರಿಚಯಕ್ಕೆ ತಾಳಮೇಳ ತಮ್ಮಟೆಗಳ ಹುಯ್ಲು ಅನವಶ್ಯಕ

—ಅಂತೆಯೇ ಉಪೋದ್ಘಾತ, ಪೀಠಿಕೆ, ಪ್ರಸ್ತಾವನೆಗಳ ಗೊಂದಲ ವಿಲ್ಲದೆ ಈ ಕಾದಂಬರಿಯನ್ನು ಜನತೆಯ ಮುಂದಿಡಲು ಇಚ್ಛಿಸುತ್ತೇನೆ· ಮನರಂಜನೆಯ ಹೊರತಾಗಿ ಈ ಲಘುಕೃತಿಗೆ ಮತ್ತಾವ ಉದ್ದೇಶವೂ ಇರುವುದಿಲ್ಲ ಓದುಗರೂ ಅಂತಹ ಉದ್ದೇಶಗಳನ್ನು ಹುಡುಕದಿರಲೆಂದೇ ನನ್ನ ವಿಜ್ಞಾಪನೆ

ನನ್ನ ಇತರ ಕೃತಿಗಳು ಮತ್ತು ಕಾದಂಬರಿಗಳಂತೆ "ಅಭಿಸಾರಿಕೆ" ಯನ್ನು ವಾಚಕರು ಆದರದಿಂದ ಸ್ವಾಗತಿಸುವರೆಂದು ನಂಬದ್ದೇನೆ.

**ಲೇಖಕ.**

ಮಾಯೆಯ ಕೈಯಲ್ಲಿ ಓಲೆ ಕಂರವ ಕೊಟ್ಟರೆ,
ಲಘುವಿನ ವಿಘುನವ ಬರೆಯಿತ್ತು, ನೋಡಾ!
ಅರಗಿನ ಪುತ್ತಲಿಗೆ ಉರಿಯ ಸೀರೆಯನುಡಿಸಿದರೆ,
ಅದು ಸಿರಿಯ ಸಿಂಗಾರವಾಯಿತ್ತು ನೋಡಾ!
ಅಂಬರದೊಳಗಾಡುವ ಗಿಳಿ ಪಂಜರದೊಳಗಣ ಬೆಕ್ಕ ನುಂಗಿ,
ರಂಭೆಯ ತೋಳಿಂದಗಲಿತ್ತು ನೋಡಾ! ಗುಹೇಶ್ವರಾ!

**ಪ್ರಭುದೇವರ ವಚನಗಳು.**

And your body is the harp of your soul,
And it is yours to bring forth sweet music from it or confused sounds
And now you ask in your heart, "How shall we distinguish that which is good in pleasure from that which is not good ?"
Go to your fields and your gardens, and you shall learn that it is the pleasure of the bee to gather honey of the flower,
But it is also the pleasure of the flower to yield its honey to the bee
For to the bee a flower is a fountain of life,
And to the flower a bee is a messenger of love,
And to both, bee and flower, the giving and the receiving of pleasure is a need and an ecstasy
People of Orphalese, be in your pleasures like the flowers and the bees.

THE PROPHET
*Kahlil Gibran.*

## ಮೊದಲನೆಯ ತರಂಗ

— ೧ —

ಬೆಂಗಳೂರಿಂದ ಮದ್ರಾಸಿಗೆ ಹೋಗುವ ಮೈಲ್ ಗಾಡಿ ಪ್ರಾತಃಕಾಲ ಆರುಗಂಟೆಗೆ ಬೇಸಿನ್ ಬ್ರಿಡ್ಜ್ ರೈಲ್ವೆ ನಿಲ್ದಾಣಕ್ಕೆ ಬಂದಾಗ ಪ್ರಯಾಣಿಕರಲ್ಲಿ ಕೆಲವರು ಅಲ್ಲಿ ದೊರಕುತ್ತಿದ್ದ ಬಿಸಿ ಕಾಫಿಗಾಗಿ, ಕಲವರು ಪ್ರವಾಸ ಮುಗಿದದ್ದರಿಂದ ಕೆಳಗಿಳಿವರು ಮದ್ರಾಸ್ ಪಟ್ಟಣದ ಪಶ್ಚಿಮ ಭಾಗದ ವಿಸ್ತರಣಗಳಿಗೆ ಹೋಗುವ ಪ್ರಯಾಣಿಕರು ಸಾಮಾನ್ಯವಾಗಿ ಅಲ್ಲಿ ಇಳಿಯುವರು

ಭಾರತ ರಾಜಕೀಯ ಸರ್ವಪಕ್ಷ ಸಂಪತ್ತಿನ ವಾರ್ಷಿಕಾಧಿವೇಶನ ಆ ವರ್ಷ ಮದ್ರಾಸನಲ್ಲಿ ನಡೆಯಲು ಏರ್ಪಾಡಾಗಿತ್ತು ಅಧಿವೇಶನಕ್ಕೆ ಸಂಬಂಧಿಸಿದಂತೆ ಕೆಲವು ಸಾಂಸ್ಕೃತಿಕ ಮತ್ತು ಸಾಹಿತ್ಯ ಸಮ್ಮೇಳನಗಳೂ ಕರೆಯಲ್ಪಟ್ಟಿದ್ದುವು ಅದಕ್ಕಾಗಿ ಮೈಸೂರು ಪ್ರತಿನಿಧಿಗಳ ಒಂದು ತಂಡ ಮೈಲ್ ಗಾಡಿಯಲ್ಲಿ ಮದ್ರಾಸಿಗೆ ಪ್ರಯಾಣ ಮಾಡುತ್ತಿತ್ತು ಗಾಡಿಯಿಂದಿಳಿದ ಪ್ರಯಾಣಿಕರಲ್ಲಿ ಮೈಸೂರಿನವರೂ ಇದ್ದರು

ಪ್ರತಿನಿಧಿಗಳಲ್ಲಿ ಕೆಲವು ಮಂದಿ ಮಹಿಳೆಯರು ಅವರಿಗಾಗಿಯೇ ಒಂದು ಇಂಟರ್ ಗಾಡಿ ರಿಜರ್ವ್ ಮಾಡಲ್ಪಟ್ಟಿತ್ತು ಕಾಫಿಗಾಗಿ ಅವರು ಎದರುನೋಡುತ್ತಿದ್ದಂತೆ ಸುಮಾರು ೨೪ ವರ್ಷ ವಯಸ್ಸಿನ ತರುಣಿಯೊಬ್ಬಳು ಗಾಡಿಯಿಂದಿಳಿದು ಹಾಸಿಗೆ ಪೆಟ್ಟಿಗೆಗಳನ್ನು ಹೊರಗೆತೆಗೆದುಕೊಂಡಳು

"ಏಕೆ ಲತಾ, ಇಲ್ಲೇ ಇಳಿಯುತ್ತೀಯಾ ?"

ಗಾಡಿಯಿಂದ ಮಧ್ಯಮ ವಯಸ್ಸಿನ ಒಬ್ಬ ಮಹಿಳೆ ಕೇಳಿದಳು

"ಹೌದು ತಂಗಮ್ಮನವರೇ, ನನ್ನ ಗೆಳತಿಯೊಬ್ಬಳು ರಾಯಪುರದಲ್ಲಿದ್ದಾಳೆ ಅವಳ ಮನೆಯಲ್ಲೇ ಇಳಿದುಕೊಳ್ಳುತ್ತೇನೆ"

—ತರುಣಿ ಉತ್ತರಕೊಟ್ಟಳು

"ರಾಯಪುರದಿಂದ ಎಗ್ಮೋರಿಗೆ ದೂರವಾಗುವುದಿಲ್ಲವೆ?"

ಗಾಡಿಯಲ್ಲಿದ್ದವರಲ್ಲೊಬ್ಬಳು ಕೇಳಿದಳು

"ಮದ್ರಾಸಿನಲ್ಲಿ ದೂರವೇನು, ಸಮೀಪವೇನು? ಬೇಕಾದ ಹಾಗೆ ಟ್ಯಾಕ್ಸಿ ಬಸ್ಸುಗಳು ಸಿಕ್ಕುತ್ತವೆ"

ಗಾಡಿಯ ಮತ್ತೊಂದು ಕಡೆಯಿಂದ ಉತ್ತರ ಬಂದಿತು

"ಸ್ಟೇಷನ್ನಿಗೆ ಯಾರಾದರೂ ಬಂದಿರುವರೇ, ಲತಾ? ಬಾರದಿದ್ದರೆ ನೀನೊಬ್ಬಳೇ ಹೇಗೆ ಹೋಗುತ್ತೀಯೆ?"

ತಂಗಮ್ಮ ಆಸಕ್ತಿಯಿಂದ ಕೇಳಿದಳು

"ಕಾಗದ ಬರೆದಿದ್ದೆ ನನ್ನ ಗೆಳತಿಯೋ ಬಂದಿರಬೇಕು"

ಎಂದು ಲತಾಂಗಿ ಉತ್ತರಕೊಡುತ್ತಿದ್ದಂತೆ ಖಾದಿ ಪಾಯ್‌ಜಾಮಾ ಮತ್ತು ಕುಡ್ತಾ ಹಾಕಿಕೊಂಡಿದ್ದ ಯುವಕನೊಬ್ಬನು ಅಲ್ಲಿಗೆ ಬಂದು "ನಮಸ್ತೆ, ಲತಾದೇವಿ ನಾನು ನಿಮ್ಮನ್ನೇ ಹುಡುಕುತ್ತಿದ್ದೆ ಎಲ್ಲಿ ನಿಮ್ಮ ಸಾಮಾನು?" ಎಂದ

"ಇದೋ ನೋಡಿ ಬಂದಿದ್ದಾರೆ" ಎಂದು ಲತಾಂಗಿ ತಂಗಮ್ಮನಿಗೆ ಹೇಳಿ ಯುವಕನಕಡೆ ತಿರುಗಿ "ಚಂಪಾ ಹೇಗಿದ್ದಾಳೆ? ಅವಳೇಕೆ ಸ್ಟೇಷನ್ನಿಗೆ ಬರಲಿಲ್ಲ?" ಎಂದು ಕೇಳಿದಳು

ಯುವಕನು "ಆರೋಗ್ಯವಾಗಿದ್ದಾಳೆ" ಎಂದು ಮಾತ್ರ ಉತ್ತರ ಕೊಟ್ಟು ಬಾರದಿದ್ದ ಕಾರಣ ತಿಳಿಸಲಿಲ್ಲ

ಅಷ್ಟುಹೊತ್ತಿಗೆ ಮಾಣಿಯೊಬ್ಬನು ಕಾಫಿ ತಂದನು ಎಲ್ಲರೂ ಕುಡಿದರು ಯುವಕನನ್ನು "ರಮೇಶರಾವ್" ಎಂದು ಲತಾಂಗಿ ತಂಗಮ್ಮನವರಿಗೆ ಪರಿಚಯ ಮಾಡಿಕೊಟ್ಟಳು ಮಧ್ಯಾಹ್ನ ಅಧ್ಯಕ್ಷ ಮೆರವಣಿಗೆಗೆ ಬರುವಂತೆ ಹೇಳಿ ತಂಗಮ್ಮ ಬೀಳ್ಕೊಂಡರು ರೈಲು ಕದಲಿತು ರಮೇಶ್ ಕೂಲಿಯೊಬ್ಬನಿಂದ ಪೆಟ್ಟಿಗ ಮತ್ತು ಹಾಸಿಗೆ ಸುರುಳಿಯನ್ನು ಹೊರೆಸಿಕೊಂಡು ಲತಾಂಗಿಯ ಸಂಗಡ ನಿಲ್ದಾಣದಿಂದ ಹೊರಟನು

ಹೊರಗಡೆ ಟ್ಯಾಕ್ಸಿಯೊಂದು ಕಾದು ನಿಂತಿತ್ತು ಸಾಮಾನು ಒಳಗೆ ಹಾಕಿಸಿ ಲತಾಂಗಿ ಕುಳಿತುಕೊಂಡ ಮೇಲೆ ರಮೇಶ್ ತಾನೂ ಕುಳಿತುಕೊಂಡ.

ಟ್ಯಾಕ್ಸಿ ಕದಲಿತು ಪ್ರಯಾಣದ ಪರಿಶ್ರಮದಿಂದ ಬಳಲಿದ್ದ ಲತಾಂಗಿ ರಮೇಶ ತನ್ನನ್ನು ರಹಸ್ಯಪೂರ್ಣವಾದ ವಿಚಿತ್ರ ದೃಷ್ಟಿಯಿಂದ ನೋಡಿದು ದನ್ನು ಗಮನಿಸಲಿಲ್ಲ

ಮದ್ರಾಸಿನ ಒಂದು ದೊಡ್ಡ ಆಮದು ರಫ್ತು ವಾಣಿಜ್ಯ ಸಂಸ್ಥೆಯಲ್ಲಿ ರಮೇಶ್ ಮ್ಯಾನೇಜರಾಗಿದ್ದ ರಾಯಪುರದಲ್ಲಿ ಜನಸಾಂದ್ರತೆಯಿಲ್ಲದೆ ಪ್ರಶಾಂತವಾದ ಸ್ಥಳದಲ್ಲಿ ಅವನ ಮನೆ ಟ್ಯಾಕ್ಸಿ ಮನೆಯ ಮುಂದೆ ಬಂದು ನಿಂತಕೂಡಲೆ ಒಳಗಿನಿಂದ ಆಳು ಬಂದು ಸಾಮಾನುಗಳನ್ನು ಒಳಗೆ ತೆಗೆದು ಕೊಂಡು ಹೋದ ಲತಾಂಗಿ ಗಾಡಿಯಿಂದಿಳಿದಳು ಮನೆಯನ್ನು ಪ್ರವೇಶಿಸುತ್ತಲೇ ಡ್ರಾಯಿಂಗ್ ರೂಂ ಚಂಪಾ ಅಲ್ಲಿ ತನಗಾಗಿ ನಿರೀಕ್ಷಿಸುವ ಳೆಂದು ಭಾವಿಸಿದ್ದ ಲತಾಂಗಿ ನಿರಾಶೆಯಿಂದ ರಮೇಶನ ಮುಖ ನೋಡಿ,

" ಚಂಪಾ ಎಲ್ಲಿ ? ಅಸ್ವಸ್ಥವೇ ?" ಎಂದು ಕೇಳಿದಳು

" ನಿಮ್ಮ ಕಾಗದ ಬಂದ ಮರುದಿನ ವ ಂಗಳೂರಿಗೆ ಹೋದಳು ಅವರ ತಂದೆ ಖಾಯಿಲೆಯೆಂದು ಟೆಲಿಗ್ರಾಂ ಬಂದಿತ್ತು''

ರಮೇಶ ಹೇಳಿದ್ದನ್ನು ಕೇಳಿ ಲತಾಂಗಿ ತೊಡಕಿನಲ್ಲಿ ಬಿದ್ದಳು ಚಂಪಾ ಮನೆಯಲ್ಲಿಲ್ಲವೆಂದು ಸ್ಟೇಷನ್ನಿನಲ್ಲೇ ತಿಳಿಸಿದ್ದರೆ ಪ್ರತಿನಿಧಿಗಳಿಗಾಗಿ ಏರ್ಪಡಿ ಸಿದ್ದ ಬಿಡಾರಕ್ಕೆ ಹೋಗಬಹುದಾಗಿತ್ತು ಆ ರೀತಿ ಮಾಡದೆ ರಮೇಶ್ ತನ್ನನ್ನು ವಂಚಿಸಿದನೆಂದು ಅವಳು ಭಾವಿಸಿದಳು ಪ್ರಕಟವಾಗಿ ಏನೂ ಹೇಳದೆ '' ಮನೆಯಲ್ಲಿ ಯಾರಿದ್ದಾರೆ?" ಎಂದು ಕೇಳಿದಳು

'' ನನ್ನ ಸೋದರತ್ತೆ, ಅಡಿಗೆಯವನು, ಕೆಲಸದವಳು ಚಂಪಾ ಇಲ್ಲವೆಂದು ನೀವು ಯೋಚನೆ ಮಾಡಬೇಕಾಗಿಲ್ಲ, ಲತಾದೇವಿ ನಿಮಗಾಗಿ ಪ್ರತ್ಯೇಕ ಕೊಟಡಿಯಿದೆ ನಿಮ್ಮ ಇಚ್ಛೆಬಂದಂತಿರಬಹುದು. ಒಂದು ವೇಳೆ ನಿಮಗೆ ಅಸಮಾಧಾನವಾಗಿದ್ದರೆ ಪ್ರತಿನಿಧಿಗಳ ಬಿಡಾರಕ್ಕೇ ಕರೆದುಕೊಂಡು ಹೋಗಿ ಬಿಟ್ಟುಬರುತ್ತೇನೆ ಟ್ಯಾಕ್ಸಿ ಇನ್ನೂ ಕಳುಹಿಸಿಲ್ಲ"

ರಮೇಶನ ಮಾತು, ಅವನ ಅನುನಯದ ಮೃದುಕಂಠ ಲತಾಂಗಿಯ ಹೃದಯದಲ್ಲಿ ವಿಶ್ವಾಸ ಹುಟ್ಟಿಸಿದವು ಬಂಗಲೆಯ ಶಾಂತಿಯುತ ಸರಳ ವಾತಾವರಣ ಇದಕ್ಕೆ ಸಹಾಯಕವಾಯಿತು ಪ್ರತಿನಿಧಿಗಳ ಬಿಡಾರದಲ್ಲಿ ಗುಂಪಿನ ಮಧ್ಯೆ ಇರುವುದಕ್ಕಿಂತ ಇಲ್ಲೇ ನಾಲ್ಕು ದಿನ ಸುಖವಾಗಿರಬಹುದ

ಲ್ಲವೇ ? ಅವಳು ಮದ್ರಾಸಿಗೆ ಬಂದಕಾರಣ, ಅಧಿವೇಶನದ ಕಾರ್ಯಕಲಾಪ ಗಳನ್ನು ವರದಿ ಮಾಡುವುದೊಂದೇ ಅಲ್ಲ, ಬೆಂಗಳೂರಲ್ಲಿ ಅನುಭವಿಸುತ್ತಿದ್ದ ಸಂಸಾರಜೀವನದ ಸಂಕಷ್ಟಗಳಿಂದ ದೂರವಾಗಿದ್ದುಕೊಂಡು ನಾಲ್ಕು ದಿನ ಗಳನ್ನು ಹಾಯಾಗಿ ಕಳೆಯುವುದು ಆ ಉದ್ದೇಶದಿಂದ ಲತಾಂಗಿ ಕೆಲಸ ಮಾಡುತ್ತಿದ್ದ, "ವಿಶ್ವಮಿತ್ರ" ಪತ್ರಿಕೆಯ ಸಂಪಾದಕ ಲೀಲಾಧರ ಜೋಷಿ ಅವ ಳನ್ನು ಪತ್ರಿಕೆಯ ಪ್ರತಿನಿಧಿಯಾಗಿ ಮದ್ರಾಸಿಗೆ ಕಳುಹಿಸಿದ್ದ ಪತ್ರಿಕೋದ್ಯಮ ಕ್ಕಿಂತ ವಿಶ್ರಾಂತಿಯೇ ಅವಳ ಪ್ರವಾಸದ ಪರಮೋದ್ದೇಶವಾಗಿತ್ತು ಲತಾಂಗಿಯ ಸಹವಿದ್ಯಾರ್ಥಿನಿ ಚಂಪಕ, ಮದ್ರಾಸಿನಲ್ಲಿರುವಳೆಂದು ತಿಳಿದ ಮೇಲಂತೂ ಜೋಷಿ ಕಛೇರಿಯ ಅಧಿಕಾರದೊಡನೆ ಆತ್ಮೀಯ ಅನುನಯ ವನ್ನೂ ಸೇರಿಸಿ ಒತ್ತಾಯದಿಂದ ಕಳುಹಿಸಿದ್ದ

ಲತಾಂಗಿ ಯೋಚಿಸುತ್ತಿದ್ದಂತೆ ರಮೇಶನ ಸೋದರತ್ತೆ ನಡುಮನೆಗೆ ಬಂದು "ಒಳಗೆ ಬನ್ನಿ ಅಮ್ಮ, ಮುಖ ತೊಳೆದುಕೊಂಡು ಕಾಫಿ ಕುಡಿಯಿರಿ" ಎಂದಳು

ರಮೇಶನ ಮನೆಯಲ್ಲಿಯೇ ನಾಲ್ಕು ದಿನ ಕಳೆಯುವುದಾಗಿ ನಿರ್ಧರಿಸಿ ಕೊಂಡು ಲತಾ ಒಳಗೆ ಹೋದಳು ಕಾಫಿ ಕುಡಿಯುತ್ತಿದ್ದಾಗ ರಮೇಶ್ ಕೇಳಿದ—

"ಈ ದಿನ ನಿಮ್ಮ ಪ್ರೋಗ್ರಾಂ ಏನು ?"

"ಹತ್ತು ಗಂಟೆಗೆ ವಿಷಯನಿಯಾಮಕ ಸಮಿತಿ ಸಭೆ ಪತ್ರಿಕಾ ಪ್ರತಿನಿಧಿಗಳಿಗೆ ಅಲ್ಲಿ ಪ್ರವೇಶವಿಲ್ಲ ಮಧ್ಯಾಹ್ನ ನಾಲ್ಕು ಗಂಟೆಗೆ ಬಹಿರಂಗಾಧಿ ವೇಶನಕ್ಕೆ ಹೋಗುತ್ತೇನೆ"

"ನನ್ನ ಹತ್ತಿರಲೂ ೨೫ ರೂಪಾಯಿ ತೆಗೆದುಕೊಂಡು ಸ್ವಾಗತ ಸಮಿತಿಗೆ ಸೇರಿಸಿಕೊಂಡಿದ್ದಾರೆ ಕಛೇರಿ ಮುಗಿಸಿಕೊಂಡು ಮೂರು ಗಂಟೆಗೆ ಬರುತ್ತೇನೆ ಅತ್ತೆ ಸಂಗಡ ಬರುತ್ತಾಳೆ ಎಲ್ಲರೂ ಒಟ್ಟಿಗೆ ಅಧಿವೇಶನಕ್ಕೆ ಹೋಗೋಣ"

ರಮೇಶನ ಸಲಹೆಗೆ ಲತಾಂಗಿ ಒಪ್ಪಿಕೊಂಡಳು

— ೨ —

ರಮೇಶನ ಮನೆಯಲ್ಲಿ ಅತಿಥಿಗಳಿಗಾಗಿ ಒಂದು ಕೊಟಡಿ ಪ್ರತ್ಯೇಕವಾಗಿ ಸಜ್ಜುಗೊಳಿಸಲ್ಪಟ್ಟಿತ್ತು ಮಂಚ, ಮೇಜು, ಪಾರ್ಶ್ವದಲ್ಲಿ ನಿಲುವುಗನ್ನಡಿ, ಒಂದೆರಡು ಕುರ್ಚಿಗಳು ಅಲ್ಲಿ ಅಚ್ಚುಕಟ್ಟಾಗಿಡಲ್ಪಟ್ಟಿದ್ದವು ರಮೇಶ್ ಕಛೇರಿಗೆ ಹೋಗುತ್ತಲೇ ಸೋದರತ್ತೆ ಸಾವಿತ್ರಮ್ಮ ಲತಾಂಗಿಯನ್ನು ಈ ಕೊಟಡಿಗೆ ಕರೆದುಕೊಂಡು ಹೋಗಿ "ನೀನು ಸ್ವಲ್ಪಹೊತ್ತು ಇಲ್ಲಿ ವಿಶ್ರಮಿಸಿಕೋ ತಾಯಿ ನಿನ್ನ ಸಾಮಾನುಗಳನ್ನು ಇಲ್ಲೇ ಇಡಿಸಿದ್ದೇನೆ ನೀಗು ಕಾದ ಮೇಲೆ ಸ್ನಾನಕ್ಕೆ ಕರೆಯುತ್ತೇನೆ" ಎಂದಳು

ಸಾವಿತ್ರಮ್ಮನ ಆದರ ಉಪಚಾರಗಳು ಲತಾಂಗಿಯನ್ನು ಒಲಿಸಿಕೊಂಡಿದ್ದುವು "ನನಗಾಗಿ ನಿಮಗೆಷ್ಟು ತೊಂದರೆ ಸಾವಿತ್ರಮ್ಮನವರೇ ನೀವು ಕುಳಿತುಕೊಳ್ಳಿ" ಎಂದು ಹೇಳಿ ಅವಳು ಸಾವಿತ್ರಮ್ಮನನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ ತಾನೂ ಕುಳಿತುಕೊಂಡಳು

"ಈಗಿನ ಹುಡುಗಿಯರಿಗೆ ಗಂಡನ ಕಷ್ಟ ಸುಖಗಳೊಂದೂ ಬೇಕಾಗುವುದಿಲ್ಲ ಚಂಪಾ ತಂದೆಯ ಮನೆಗೆ ಹೋದಾಗಿನಿಂದ ಈ ಸಂಸಾರದ ಭಾರ ನನ್ನ ಮೇಲೆ ಬಿದ್ದಿದೆ ಊರಿಗೆ ಹೋಗುವ ಆಸೆಯನ್ನೇ ಬಿಟ್ಟು ಇಲ್ಲಿ ಸಿಕ್ಕಿಕೊಂಡಿದ್ದೇನೆ''

—ಸಾವಿತ್ರಮ್ಮ ಹೇಳಿದಳು

"ಚಂಪಾ ಹೋಗಿ ಎಷ್ಟು ದಿನವಾಯಿತು ?''

"ಈಗಾಗಲೇ ಮೂರು ವಾರಗಳಿಗೆ ಮೇಲಾದರೂ ಕಾಗದ ಕೂಡಾ ಬರೆದಿಲ್ಲ ಹೆಂಡತೀನ ಕರೆಸಿಕೋ ಎಂದು ರಮೇಶನಿಗೆ ಹೇಳಿದರೆ ಅವನು ಮಾತನಾಡುವುದೇ ಇಲ್ಲ ಮದ್ರಾಸ್ ವಾಸ ನನಗೆ ಬೇಜಾರಾಗಿದೆ"

"ತಂದೆಗೆ ಸ್ವಲ್ಪ ಗುಣಮುಖವಾಗುತ್ತಲೇ ಚಂಪಾ ಬಂದುಬಿಡುತ್ತಾಳೆ"

"ತಂದೆಗೇನು ಬಂದಿದೆ ಕೇಡು! ತಂತಿ ಬಂದ ದಿನವೇ ರಮೇಶನಿಗೆ ಹೇಳಿದೆ –ಮಗಳನ್ನು ಕರೆಸಿಕೊಳ್ಳಲು ಇದೊಂದು ನೆಪ ಎಂದು"

ಸಾವಿತ್ರಮ್ಮ ಕಹಿಯಾದ ಕಂಠದಿಂದ ಈ ಮಾತು ಹೇಳಿದಳು ಅತ್ತೆ ಸೊಸೆಯರಿಗೆ ಮನಶ್ಶುದ್ಧಿಯಿಲ್ಲವೆಂದೂ ಅತ್ತೆಯ ಆಗಮನವೇ

ಸೊಸೆಯು ನಿರ್ಗಮನಕ್ಕೆ ಕಾರಣವಾಗಿರಬೇಕೆಂದೂ ಲತಾ ಭಾವಿಸಿದಳು ಗೃಹಚ್ಛಿದ್ರಕ್ಕೆ ಸಂಬಂಧಿಸಿದ ಇಂತಹ ವಿಚಾರಗಳಲ್ಲಿ ತಿಳಿದೂ ತಿಳಿಯದಂತಿರುವುದು ಕ್ಷೇಮವೆಂದು ತೋರಿತು ಸಾವಿತ್ರಮ್ಮನ ಮಾತಿಗೆ ಅವಳು ಉತ್ತರ ಕೊಡಲಿಲ್ಲ

"ನೀನೂ ಚಂಪಾ ಮಂಗಳೂರಲ್ಲಿ ಜೊತೆಯಾಗಿ ಓದುತ್ತಿದ್ದಿರಂತೆ ಹೌದೇನಮ್ಮ?"

ಸ್ವಲ್ಪ ಹೊತ್ತಾದ ಮೇಲೆ ಸಾವಿತ್ರಮ್ಮ ಕೇಳಿದಳು

"ಹೌದು ಸಾವಿತ್ರಮ್ಮನವರೇ ಆಗ ಮಂಗಳೂರಲ್ಲಿ ಹೆಂಗಸರಿಗಾಗಿ ಪ್ರತ್ಯೇಕ ಕಾಲೇಜಿರಲಿಲ್ಲ ನಾನು, ಚಂಪಾ, ರಮೇಶ್ ಎಲ್ಲಾ ಒಂದೇ ಕಡೆ ಓದುತ್ತಿದ್ದೆವು"

"ನೀನು ಬೆಂಗಳೂರಲ್ಲಿ ಏನು ಕೆಲಸ ಮಾಡುವೆಯಮ್ಮ?"

"ಪತ್ರಿಕಾ ಕಛೇರಿಯೊಂದರಲ್ಲಿ ಸಬ್ ಎಡಿಟರ್ ಆಗಿದ್ದೇನೆ"

ಸಾವಿತ್ರಮ್ಮ ಸ್ವಲ್ಪಹೊತ್ತು ಸುಮ್ಮನಿದ್ದು ಆಮೇಲೆ ಹೇಳಿದಳು "ವಿದ್ಯೆ ಕಲಿತ ಹೆಂಗಸರು ಗಂಡಸರಂತೆ ಏನಾದರೂ ಕೆಲಸ ಹುಡುಕಿಕೊಂಡರೆ ಮನೆಯಲ್ಲಿ ಜಗಳಕ್ಕೆ ಆಸ್ಪದವಿರುವುದಿಲ್ಲ ಕಾಲೇಜುಗಳಲ್ಲಿ ಹೆಂಗಸರಿಗೆ ಗೃಹಕೃತ್ಯದ ಹೊರತಾಗಿ ಇನ್ನೆಲ್ಲಾ ವಿದ್ಯೆ ಕಲಿಸಿಕೊಡುವರೆಂದು ಕಾಣುತ್ತದೆ. ಕೆಲಸವಿಲ್ಲದೆ ಮನೆಯಲ್ಲಿ ಕೂತರೆ ಅವರು ತಮ್ಮ ಬುದ್ಧಿ ಚತುರತೆಗಳನ್ನು ಗಂಡನೊಡನೆ ಜಗಳವಾಡಲು ಉಪಯೋಗಿಸುವರು"

"ನೀವು ದೊಡ್ಡವರು ಮನೆಯಲ್ಲಿದ್ದೀರಿ ಚಂಪಳಿಗೆ ಬುದ್ಧಿ ಹೇಳಬಾರದೆ ಸಾವಿತ್ರಮ್ಮನವರೇ?"

"ಈಗಿನ ಹುಡುಗಿಯರು ನಮ್ಮ ಮಾತು ಕೇಳುವರೇ ತಾಯಿ? ಎರಡುದಿನವಿದ್ದು ಹೋಗಲು ಬಂದ ನನ್ನನ್ನು ಅವಳು ಲಕ್ಷ್ಯ ಮಾಡುವಳೇ? ರಮೇಶನಿಗೆ ಹೇಳಬೇಕೆಂದಿದ್ದೇನೆ 'ನಾನಿಲ್ಲಿರುವುದು ನಿನ್ನ ಹೆಂಡತಿಗೆ ಇಷ್ಟವಿರುವಂತಿಲ್ಲ ಅದಕ್ಕೇ ಮುನಿಸಿಕೊಂಡು ತೌರು ಮನೆಗೆ ಹೋಗಿದ್ದಾಳೆ ನಾನು ಊರಿಗೆ ಹೋಗುತ್ತೇನೆ ಹೆಂಡತೀನ! ಕರೆಸಿಕೋಎಂತ"

ಚಂಪಾ ಅಸೂಯಾಪ್ರಕೃತಿಯವಳೆಂಬುದನ್ನು ಲತಾ ಚನ್ನಾಗಿ ತಿಳಿದಿದ್ದಳು ಓದುತ್ತಿದ್ದಾಗಲೂ ಹಾಗೇ ಸಹಪಾಠಿಗಳೆಲ್ಲರ ಮೇಲೂ

ಅಸೂಯೆ ಯಾರಾದರೂ ಒಳ್ಳೆ ಸೀರೆಯುಟ್ಟರೆ, ತಲೆ ಬಾಚಿ ಹೂ ಮುಡಿದು ಅಲಂಕಾರ ಮಾಡಿಕೊಂಡರೆ, ತನಗಿಂತ ಪಾರ ಚನ್ನಾಗಿ ಕಲಿತರೆ ಅಸೂಯೆಯಿಂದ ಉರಿದು ಬೀಳುವಳು ಆ ಜ್ವಾಲೆ ಲತಾಂಗಿಯನ್ನೂ ಒಂದು ಸಾರಿ ತಾಗಿತ್ತು ಲತಾಂಗಿಯು ಮಲತಮ್ಮ ಕಮಲಾಕ್ಷ ಕಾಲೇಜಲ್ಲಿ ಸಂಗಡ ಓದುತ್ತಿದ್ದ ಇಬ್ಬರೂ ಬೈಸಿಕಲ್ಲುಗಳ ಮೇಲೆ ಒಟ್ಟಿಗೆ ಬರುತ್ತಿದ್ದರು, ಒಟ್ಟಿಗೆ ಹೋಗುತ್ತಿದ್ದರು ಕಮಲಾಕ್ಷ ಭೀರು ಸ್ವಭಾವದವನಾಗಿದ್ದುದರಿಂದ ಅಕ್ಕನ ಹೊರತಾಗಿ ಕಾಲೇಜಿನ ಬೇರೆ ಹುಡುಗಿಯರ ಸಂಗಡ ಆಷ್ಟಾಗಿ ಮಾತಾಡುತ್ತಿರಲಿಲ್ಲ ಚಂಪಕಳ ದೃಷ್ಟಿ ಕಮಲಾಕ್ಷನ ಮೇಲೆ ಬಿದ್ದು, ಅವನನ್ನು ಮಾತಾಡಿಸಲು ಮಾಡಿದ ಯತ್ನವೆಲ್ಲ ನಿರರ್ಥಕವಾಗಿ ಒಂದು ದಿನ ಗೆಳತಿಯ ಸಂಗಡ ಹೇಳಿದಳು "ನಿನ್ನ ತಮ್ಮನ ಬಾಯಿಗೆ ಬೀಗ ಹಾಕಿ ಸಂಗಡ ಕರತರುವೆಯಾ, ಲತಾ ? ನಮ್ಮ ಸಂಗಡ ಅವನು ಮಾತನಾಡ ಬಾರದೆಂದು ನಿನ್ನಿಷ್ಟವೇ ? ನಿಮ್ಮ ಸ್ನೇಹದಲ್ಲಿ ನನಗೂ ಒಂದೂ ಭಾಗ ವಿರಲಮ್ಮ" ಎಂದು ಲತಾಂಗಿಗೆ ಕೋಪ ಬಂದಿತು ನಾಲ್ಕಾರು ದಿನಗಳು ಅವಳ ಸಂಗಡ ಮಾತು ನಿಲ್ಲಿಸಿದಳು ಸಾವಿತ್ರಮ್ಮ ಹೇಳಿದ್ದನ್ನು ಕೇಳಿ ಅವಳಿಗೆ ಹಿಂದಿನ ಈ ವಿಚಾರ ನೆನಪಿಗೆ ಬಂದು, ಮದುವೆಯಾದ ಮೇಲೆ ಚಂಪಳ ಸ್ವಭಾವ ಮತ್ತಷ್ಟು ಕೆಟ್ಟಿರಬೇಕೆಂದೂ, ಇಲ್ಲವೇ ಅವಳು ರಮೇಶ ಸಾವಿತ್ರಮ್ಮನವರ ಹತ್ತಿರ ಜಗಳವಾಡಿ ತವರು ಮನೆಗೆ ಹೋಗಲು ಮತ್ತೇನೋ ಕಾರಣವಿರಬೇಕೆಂದೂ ಯೋಚಿಸಿದಳು ಪ್ರಕಾಶವಾಗಿ ಹೇಳಿ ದಳು

"ನೀವು ನಾಲ್ಕು ದಿನ ತಡೆಯಿರಿ ಸಾವಿತ್ರಮ್ಮ ನಾನು ಚಂಪಳಿಗೆ ಬರೆಯುತ್ತೇನೆ ಅಲ್ಲಿಗೂ ಅವಳು ಹಿಂದುರುಗದೆ ಹೋದರೆ ಆ ಮೇಲೆ ನೋಡುವಿರಂತೆ"

"ಚಂಪಕಳಂತೆ ನೀನೂ ಕಲಿತವಳು ಸ್ವತಃ ಸಂಪಾದನೆ ಮಾಡು ತ್ತಿದ್ದೀಯೆ ನಿನ್ನ ಗುಣ ಅವಳಿಗಿದ್ದಿದ್ದರೆ—"

ಎಂದು ಅರ್ಧೋಕ್ತಿಯಲ್ಲಿ ಮಾತುಮುಗಿಸಿ ಸಾವಿತ್ರಮ್ಮ ಎದ್ದು ಅಡಿಗೆ ಮನೆಗೆ ಹೋದಳು ಲತಾ ಕುರ್ಚಿಯಿಂದೆದ್ದು ವಿಶ್ರಾಂತಿಗಾಗಿ ಮಂಚದ ಮೇಲೆ ಅರ್ಧಶಾಯಿತೆಯಾಗಿ ಮಲಗಿದಳು ಮಗ್ಗಲು ಹಾಸಿಗೆ ಮತ್ತು

ತಲೆದಿಂಬಿನ ಚೀಲಗಳು ಅಂದೇ ಹೊಸದಾಗಿ ಹಾಕಲ್ಪಟ್ಟಿದ್ದವು ತಲ್ಪದ ಮೆತ್ತನೆಯ ದಿಂಬುಗಳು ಪ್ರಣಯಿಯ ಪ್ರೇಮಾಲಿಂಗನದಂತೆ ಲತಾಂಗಿಯ ಸುಕೋಮಲ ದೇಹವನ್ನು ಕೋಮಲ ಸ್ಪರ್ಶದಿಂದ ಸ್ವಾಗತಿಸಿದವು

— ೩ —

ಸಾವಿತ್ರಮ್ಮನಿಗೆ ಸುಮಾರು ೪೫–೪೬ ವರ್ಷವಯಸ್ಸು ಪ್ರಾಪ್ತವಯಸ್ಕರಾದ ಇಬ್ಬರು ಗಂಡು ಮಕ್ಕಳು ಮತ್ತು ಮೈದುನನ ಹೊರತಾಗಿ ಅವಳಿಗೆ ಮತ್ತಾರೂ ಇರಲಿಲ್ಲ ಅವಳ ಗಂಡ ಶಿವಮೊಗ್ಗೆಯಲ್ಲಿ ಅಡಿಕೆಯ ವ್ಯಾಪಾರಿ ಹೆಂಡತಿ ಮಕ್ಕಳಿಗೆ ತಕ್ಕ ಮಟ್ಟಿಗೆ ಆಸ್ತಿ ಮಾಡಿದ್ದ ಹತ್ತು ವರ್ಷಗಳ ಹಿಂದೆ ಅವನು ಸತ್ತಮೇಲೆ ಭೂಮಿ ಕಾಣ ಹುಂಡಿಕಯಾದರೂ ವ್ಯಾಪಾರ ಮಾತ್ರ ಮೈದುನನಿಂದ ನಡೆಸಲ್ಪಡುತ್ತಿತ್ತು ಸಾವಿತ್ರಮ್ಮನ ದೊಡ್ಡ ಮಗ ಮದುವೆಯಾಗಿ ಸರ್ಕಾರಿ ಉದ್ಯೋಗದಲ್ಲಿದ್ದ ಎರಡನೆಯವನು ಬೆಂಗಳೂರಲ್ಲಿ ಓದುತ್ತಿದ್ದ ಸಾವಿತ್ರಮ್ಮ ವರ್ಷದಲ್ಲಿ ಎರಡು ತಿಂಗಳು ಶಿವಮೊಗ್ಗೆಯಲ್ಲಿ ಮೈದುನನ ಮನೆಯಲ್ಲಿದ್ದುಕೊಂಡು ಹಿಂದಿನ ವರ್ಷದ ಅಂಗಡಿಯ ಲಾಭ ಮತ್ತು ಜಮೀನಿನ ವರಮಾನವನ್ನು ವಸೂಲ್ಮಾಡಿಕೊಳ್ಳುವಳು ಈ ವರ್ಷ ಹಾಸನ ಜಿಲ್ಲೆಯ ಒಂದು ಸಣ್ಣ ಊರಿಗೆ ಮಗನು ವರ್ಗವಾಗಿದ್ದರಿಂದ ಸಂಗಡ ಹೋಗದೆ ಮದ್ರಾಸಿಗೆ ರಮೇಶನ ಮನೆಗೆ ಬಂದಿದ್ದಳು ಇದಕ್ಕೆ ಎರಡು ಕಾರಣಗಳಿದ್ದುವು ರಮೇಶ ೧೦ ವರ್ಷದ ಹುಡುಗನಾಗಿದ್ದಾಗ ಅವನ ತಾಯಿ ಸತ್ತು ಮನೆಯಲ್ಲಿ ನೋಡುವವರಿಲ್ಲದಂತಾಯಿತು ಆಗ ಸಾವಿತ್ರಮ್ಮ ಅವನನ್ನು ಕಲವು ವರ್ಷಗಳು ತನ್ನ ಬಳಿಯಲ್ಲಿಟ್ಟುಕೊಂಡು ಸಾಕಿ ಸಲಹಿದಳು ತಾನು ಸಾಕಿದ ಹುಡುಗ ಈಗ ದೊಡ್ಡವನಾಗಿ ಮದ್ರಾಸಲ್ಲಿ ದೊಡ್ಡ ಕೆಲಸದಲ್ಲಿರುವನೆಂದು ಕೇಳಿ ಸಾವಿತ್ರಮ್ಮ ಅವನನ್ನು ನೋಡಲು ಬಂದಿದ್ದಳು ರಮೇಶನ ಹೆಂಡತಿಯನ್ನು ನೋಡುವುದು ಎರಡನೆಯ ಕಾರಣ ಚಂಪಕಳೊಡನೆ ರಮೇಶನ ಮದುವೆ ಅವನ ತಂದೆಯ ಅಭಿಪ್ರಾಯಕ್ಕೆ ವಿರೋಧವಾಗಿ ನಡೆದದ್ದರಿಂದ ಬಂಧು ಬಾಂಧವರು ಮದುವೆಗೆ

ಹೋಗಿರಲಿಲ್ಲ ಅಳಿಯನನ್ನು ಮಾತಾಡಿಸಿ ಸೊಸೆಯನ್ನು ನೋಡಿ ಹೋಗಲು ಈಗ ಸಾವಿತ್ರಮ್ಮ ಬಂದಿದ್ದಳು ಬಂದ ನಾಲ್ಕು ವಾರಗಳಲ್ಲಿ ಗಂಡಹೆಂಡರಿಗೆ ವಿರಸ ಹೆಚ್ಚಿ, ಚಂಪಕ ತಾನಾಗಿ ತೌರು ಮನೆಗೆ ಹೋದದ್ದು ಅವಳ ಮನಸ್ಸಿನಲ್ಲಿ ತೀವ್ರ ಅಸಮಾಧಾನವುಂಟುಮಾಡಿತ್ತು ಹೇಳಿಕೊಳ್ಳಲು ಯಾರೂ ಇಲ್ಲದ್ದರಿಂದ ಇದುವರೆಗೆ ಸುಮ್ಮನಿದ್ದಳು ಲತಾಂಗಿ ಬಂದಾಗ ಕಟ್ಟೊಡೆದು ಮನಸ್ಸಿನ ಭಾವಗಳು ಹೊರಬಿದ್ದವು

ಲತಾಂಗಿಯ ಕೊಟಡಿಯಿಂದ ಸಾವಿತ್ರಮ್ಮ ನೆಟ್ಟಗೆ ಬಚ್ಚಲ ಮನೆಗೆ ಹೋಗಿ ನೀರು ಕಾದಿದೆಯೋ ಎಂದು ನೋಡಿಕೊಂಡು ಅಡಿಗೆಮನೆಗೆ ಬಂದಳು ಅಲ್ಲಿ ಅಡಿಗೆಯ ಅನಂತಯ್ಯ ಸಾರಿಗೆ ಒಗ್ಗರಣೆ ಹಾಕಿ ಅನ್ನದ ತಪ್ಪಲೆ ಒಲೆಯ ಮೇಲಿಟ್ಟಿದ್ದ

"ಕಾಫಿಯೇನಾದರೂ ಇಟ್ಟಿದ್ದೀಯಾ ಅನಂತಯ್ಯ'' --ಸಾವಿತ್ರಮ್ಮ ಕೇಳಿದಳು

''ಇದೆ ಅತ್ತೆ ಕೂತುಕೊಂಡರೆ ಬಿಸಿ ಮಾಡಿಕೊಡುತ್ತೇನೆ"

ಸಾವಿತ್ರಮ್ಮನ ಮುಖದಲ್ಲಿ ಅಸಮಾಧಾನದ ನೆರಿಗೆ ಇನ್ನೂ ಅಳಿಸಿರಲಿಲ್ಲ "ಏಕೆ ಹೀಗಿದ್ದೀರಿ? ಏನಾಯಿತು?'' ಅನಂತಯ್ಯ ಕೇಳಿದ

ಸಾವಿತ್ರಮ್ಮ ಉತ್ತರ ಕೊಡಲಿಲ್ಲ ಚಂಪಕ ಮುಂಗೋಪಗೊಂಡು ಹೋದ ಮೇಲೆ ಮನೆಯ ಆಡಳಿತ ಸಂಪೂರ್ಣವಾಗಿ ಅವನ ಕೈಯಲ್ಲಿತ್ತು ಒಡತಿಯನ್ನು ಮೆಚ್ಚಿಸಲು ಅನಂತಯ್ಯ ''ಬೆಳಗ್ಗೆ ಮಾಡಿದ ಇಡ್ಲಿ ಕೂಡ ಇದೆ ಕೊಡಲೆ ಅತ್ತೆ?" ಎಂದು ಹೇಳಿ ಪಾತ್ರೆಯಿಂದ ಎರಡು ಇಡ್ಲಿ ತೆಗೆದು ತಟ್ಟೆಯಲ್ಲಿಟ್ಟು ಸಾವಿತ್ರಮ್ಮನ ಮುಂದಿಟ್ಟು ಚಟ್ನಿ ಹಾಕಿ ನಾಲ್ಕು ತೊಟ್ಟು ತುಪ್ಪವನ್ನೂ ಸುರಿದ

ಸಾವಿತ್ರಮ್ಮ ಪ್ರಸನ್ನಳಾದಳು ಹಗುರವಾಗಿ ನಕ್ಕು ಬಾಡಿಹೋಗಿದ್ದ ನರಗನ್ನು ಸರಿಪಡಿಸಿಕೊಂಡು 'ಏನೂ ಇಲ್ಲಪ್ಪ ಹೊಸ ಕಡೆ ಏನಾಯಿತು ಯೋಚಿಸುತ್ತಿದ್ದೆ'' ಎಂದಳು ಅನಂತಯ್ಯ ಒಳಗೆ ಬಂಚಿಸಲ್ಲದ ಪಾತ್ರೆಯಿಂದ ಕಾಫಿಯನ್ನು ಬೆರೆಸಿ ಲೋಟಕ್ಕೆ ಸುರಿದು ಎದುರಿಗಿಟ್ಟ

ಉಪಚಾರ ಮುಗಿದ ಮೇಲೆ ಸಾವಿತ್ರಮ್ಮ 'ಊಟದ ವಿಚಾರ ರಮೇಶ್ ಏನಾದರೂ ಹೇಳಿ ಹೋದನೇ ಅನಂತಯ್ಯ''' ಎಂದಳು

"ಆಫೀಸಿಗೆ ಊಟ ಕಳುಹಿಸುವುದು ಬೇಡವಂತೆ ಎರಡು ಗಂಟೆಗೆ ಅವರೇ ಬರುತ್ತಾರಂತೆ ರಾತ್ರಿ ಬೋಂಡ ಮಾಡಬೇಕಂತೆ. ಅಂಗಡಿಯಿಂದ ಏನಾದರೂ ಸಿಹಿ ತಿಂಡಿ ತರಿಸಿಡಬೇಕಂತೆ"

ಅನಂತಯ್ಯ ಅಡಿಗೆ ಭಟ್ಟನಾಗಿ ಬರುವ ಮೊದಲು ಮದ್ರಾಸಿನ ಒಂದು ದೊಡ್ಡ ಹೋಟಲಲ್ಲಿ ಮಾಣಿಯಾಗಿದ್ದ ರಮೇಶ ಅವನಿಗೆ ಮದುವೆ ಮಾಡಿಸುವ ಆಸೆ ತೋರಿಸಿ ಮನೆಯಲ್ಲಿ ಕೆಲಸಕ್ಕೆ ತಂದಿಟ್ಟುಕೊಂಡಿದ್ದ ಈ ರಹಸ್ಯವನ್ನು ತಿಳಿದಿದ್ದ ಸಾವಿತ್ರಮ್ಮ ಈ ಸಾರಿ ಶಿವಮೊಗ್ಗೆಗೆ ಹೋದಾಗ ಹೆಣ್ಣು ಹುಡುಕುವುದಾಗಿ ಭರವಸೆ ಕೊಟ್ಟಿದ್ದಳು ಅನಂತಯ್ಯ ಹೆಚ್ಚು ಶ್ರದ್ಧೆಯಿಂದ ಮನೆಯಲ್ಲಿ ಅಡಿಗೆ ನೀರಿನ ಕೆಲಸಗಳನ್ನಲ್ಲದೆ ಮಾರುಕಟ್ಟೆಗೆ ಹೋಗಿ ಬೇಕಾದ ಸಾಮಾನು ತರುವುದು, ರಾಯರಿಗೆ ಊಟ ತೆಗೆದುಕೊಂಡು ಹೋಗುವುದು ಮುಂತಾದ ಕೆಲಸಗಳನ್ನೂ ಮಾಡುತ್ತಿದ್ದ

"ಮಧ್ಯಾಹ್ನ ಊಟ ಮುಗಿದ ಮೇಲೆ ದುಡ್ಡು ಕೊಡುತ್ತೇನೆ. ಹೋಗಿ ಸ್ವಲ್ಪ ಚಿರೋಟಿ, ಜಹಾಂಗೀರ್ ತರುವೆಯಂತೆ" ಎಂದು ಹೇಳಿ ಸಾವಿತ್ರಮ್ಮ ಎದ್ದಳು

"ಬೆಂಗಳೂರಿಂದ ಬಂದಿರುವವರು ಯಾರು ಅತ್ತೆ?"

"ನಿಮ್ಮ ಯಜಮಾನಿಯ ಸ್ನೇಹಿತೆಯಂತೆ"

"ನಾನು ಯಜಮಾನರ ಹೊಸ ಎಂದು ಭಾವಿಸಿದ್ದೆ"

ವ್ಯಂಗ್ಯದ ದನಿಯಿಂದ ಅನಂತಯ್ಯ ಹೇಳಿದ

ಸಾವಿತ್ರಮ್ಮ ಯೌವ್ವನದಲ್ಲಿ ಚಲುವೆಯಾಗಿದ್ದಳು ಚಲುವೆಗೆ ತಕ್ಕ ರಸಿಕತೆಯೂ ಇತ್ತು ಇಳಿ ವಯಸ್ಸಿನಲ್ಲಿ ಚಲುವು ಮಾಯವಾಗಿ ರಸಿಕತೆ ಮಾತ್ರ ಇಮ್ಮಡಿಯಾದ ಬೆಳಗಿನಿಂದ ಹೆಚ್ಚು ಹರಿತವಾಗಿ ಎದ್ದು ಕಾಣುತ್ತಿತ್ತು ಅವಳು ಯುವತೀಸಹಜವಾದ ಕಟಾಕ್ಷ ಬಾಣವೊಂದನ್ನು ಹಾರಿಸಿ ನಗುತ್ತಾ ಹೇಳಿದಳು "ನಿನಗೂ ನಿಮ್ಮ ರಾಯರಿಗೂ ಯಾವಾಗಲೂ ಷಿಕಾರಿ ಚಿಂತೆಯೇ? ಇಬ್ಬರೂ ಫಿತರಿ ಮಾಡಿ ಚಂಪಾನ ಓಡಿಸಿಬಿಟ್ಟರಿ. ಈಗ ನಾನು ದೂರು ಕೇ[illegible]ಬೇಕಾಗಿದೆ."

ಸಾವಿತ್ರಮ್ಮನ ಮಾತಿಗೆ ಅನಂತಯ್ಯ ಅಪ್ರತಿಭನಾದ. ಸಂಸ್ಕೃತಿ ಅನುಭವಗಳಿಲ್ಲದ್ದರಿಂದ ಕೆಲವು ಸಮಯಗಳಲ್ಲಿ ಅವಳ ವರ್ತನೆ ಅವನಿಗೆ

ಅರ್ಥವಾಗುತ್ತಿರಲಿಲ್ಲ ಈ ಗಂಡಹೆಂಡಿರ ಮನೆ ಜಗಳದಲ್ಲಿ ಸಾವಿತ್ರಮ್ಮನ ಪಾತ್ರವೇನು? ಅವಳು ಯಾರ ಪಕ್ಷ ವಹಿಸಿದ್ದಳು? ಜಗಳಕ್ಕೆ ಕಾರಣವಾದ ರಮೇಶನ ಪ್ರಣಯವ್ಯವಹಾರಗಳು ಅವಳಿಗೆ ಎಷ್ಟುಮಟ್ಟಿಗೆ ತಿಳಿದಿವೆ? ಎಂದು ಅವನು ಯೋಚಿಸಿದ

"ಸ್ನಾನಕ್ಕೆ ಸಿದ್ಧ ಮಾಡಲೆ ಅತ್ತೆ?" ಎಂದು ಪ್ರಕಾಶವಾಗಿ ಕೇಳಿದ

"ಮೊದಲು ಬಂದಿರುವವರ ಸ್ನಾನವಾಗಲಿ ಅನಂತಯ್ಯ ನೀನು ಹೋಗಿ ನೀರು ಬೆರೆಸು ನಾನು ಅವಳನ್ನು ಕರೆಯುತ್ತೇನೆ"

ಎಂದು ಹೇಳಿ ಸಾವಿತ್ರಮ್ಮ ಪುನಃ ಲತಾಂಗಿಯಿದ್ದ ಕೊಟಡಿಗೆ ಬಂದಳು. ಲತಾ ಹಾಸಿಗೆಯ ಮೇಲೆ ಪಾರ್ಶ್ವಕ್ಕೆ ತಿರುಗಿ ಮಲಗಿದ್ದಳು ಬೆಳಗಿನ ತಂಗಾಳಿಯಲ್ಲಿ ಅವಳಿಗೆ ಜೋಂಪು ಹತ್ತಿತ್ತು ಹೆಣ್ಣಿನ ಸೊಬಗನ್ನು ನೋಡಿ ಮತ್ತೊಬ್ಬ ಹೆಣ್ಣು—ಆ ಹೆಣ್ಣು ಪ್ರೌಢ ವಯಸ್ಕಳಾಗಿದ್ದರೂ–ಮೆಚ್ಚಿಗೆಯಿಂದ ಪರವಶೆಯಾಗುವುದು ಅಪರೂಪ ಲತಾಂಗಿಯನ್ನು ನೋಡಿ ಸಾವಿತ್ರಮ್ಮನಿಗೆ ಹಾಗಾಯಿತು ಲತಾಂಗಿ ಮಲಗಿದ್ದ ರೀತಿಯಿಂದ ಅವಳ ದೇಹ ಸೌಂದರ್ಯ ನೋಡುವವರಿಗೆ ಚೆನ್ನಾಗಿ ಗೋಚರವಾಗುತ್ತಿತ್ತು. ಬಟುವಾದ ತಲೆಯಲ್ಲಿ ಭ್ರಮರದಂತೆ ಕಪ್ಪಾದ ಗುಂಗುರು ಕೂದಲು, ವಿಶಾಲವಾದ ಹಣೆ, ತಿದ್ದಿದಂತೆ ಕಾಣುವ ಹುಬ್ಬುಗಳು, ಅರೆ ಮುಚ್ಚಿದ ರೆಪ್ಪೆಯ ಹಿಂದೆ ಸ್ಪಟಿಕ ಶಿಲೆಯಲ್ಲಿ ಹುದುಗಿಸಿಟ್ಟ ನೀಲ ಮಣಿಯಂತಹ ಕಣ್ಣುಗಳು, ಸಂಪಿಗೆಯಂತೆ ಎಸಳಾದ ಮೂಗು, ಗುಲಾಬಿಯ ರೇಖೆಗಳಂತೆ ನಸುಗೆಂಪಾದ ಕದಪುಗಳು, ಚುಂಬನಕ್ಕೆ ಅನುವಾದ ತುಂಬುತುಟಿ, ಶಂಖದಂತೆ ಸುರುಳುಗೂಡಿದ ಕೊರಳು, ಲತೆಯಂತೆ ಬಾಗಿಮೃಣಾಳದಂತೆ ಮೃದುವಾದ ಭುಜಗಳು,ಯೌವ್ವನವತಿಯಾದರೂ ಕಿಶೋರಿಯಂತೆ ವಿಶಾಲವಕ್ಷದಲ್ಲಿ ಕಿರಿದಾಗಿ, ದುಂಡಾಗಿ, ಧೃಡವಾಗಿ ಬೆಳೆದು ಕಂಚುಕದ ಮಧ್ಯೆ ಮುಚ್ಚಿಟ್ಟ ತಾವರೆಯ ಮೊಗ್ಗುಗಳಂತೆ ಕಾಣುವ ಸ್ತನಗಳು, ವಕ್ಷಸ್ಥಳದಿಂದ ಕುಸಿದು ನಿತಂಬವನ್ನೇರುವ ಸಣ್ಣ ನಡು, ವಿಶ್ವದ ಸೌಂದರ್ಯ ರಾಶಿಯನ್ನು ಒಡಲಲ್ಲಿ ತಳೆದು ನಿರಿಯ ಮರೆಯಲ್ಲಿ ಸುಪ್ತ ಚೈತನ್ಯದ ಪ್ರಶಸ್ತವೇದಿಕೆಯಂತಿದ್ದ ಜಘನ, ಬಾಳೆಯ ಕಂಬದಂತೆ ನೀಳವಾದ ತೊಡೆಗಳು, ಅರಳಿದ ಕೆಂದಾವರೆಯಂತಹ ಚರಣಗಳು. ಪ್ರವಾಸದಿಂದ ಬಳಲಿದ್ದ ಲತಾಂಗಿಯ ದೇಹಲತೆ ತಲ್ಪದ ಮೇಲೆ

ಹರಡಿದ ಹೂವಿನ ಹೆರವಿಯಂತೆ ಕಣ್ಮನಗಳನ್ನು ಸೆಳೆಯುತ್ತಿತ್ತು

ಸಾವಿತ್ರಮ್ಮ ಮನಶ್ಶಾಸ್ತ್ರ ನಿಪುಣೆಯಾಗಿದ್ದಿದ್ದರೆ ಅಥವಾ ತಜ್ಞ ಕಲಾ ವಿದೆಯಾಗಿದ್ದಿದ್ದರೆ ಆಗ ತನ್ನ ಅಂತರಂಗದಲ್ಲಿ ಉದಿಸಿದ ಅಭಿಲಾಷೆ ಆಧುನಿಕರ Chockolet love ಅಥವಾ Homosexuality ಅಲ್ಲವೆಂದೂ, ರೂಪ ದೆದುರಿಗೆ ರೂಪದರ್ಶಿಯ ಸಹಜಾರಾಧಾನೆಯ ಸಾಮಾನ್ಯ ಸ್ವರೂಪವೆಂದೂ ಅರಿತುಕೊಳ್ಳುತ್ತಿದ್ದಳು ಆದರೆ ಅವಳು ಎರಡೂ ಅಲ್ಲದ್ದರಿಂದ ಮನಸ್ಸಿನ ವಿಕೃತಿಗೆ ಲಜ್ಜಿತೆಯಾಗಿ ಮಂಚದ ಹತ್ತಿರ ಹೋಗಿ ನಿಂತು ಲತಾಂಗಿಯ ಮ್ಮೈ ಮುಟ್ಟಿ ಎಚ್ಚರಿಸಿ ಹೇಳಿದಳು "ಸ್ನಾನಕ್ಕೆ ನೀರು ಸಿದ್ಧವಾಗಿದೆ ಏಳಮ್ಮ, ಲತಾ"

ಲತಾ ಎದ್ದು ಕುಳಿತು "ನನಗೋಸ್ಕರ ನೀವು ಎಷ್ಟು ತೊಂದರೆ ತೆಗೆದು ಕೊಳ್ಳುತ್ತೀರಿ ಸಾವಿತ್ರಮ್ಮನವರೇ" ಎಂದಳು

"ತೊಂದರೆಯೇನಮ್ಮ ಬಂತು? ಮನೆಗೆ ಬಂದವರಿಗೆ ಅಷ್ಟೂ ಮಾಡ ಬೇಡವೇ?"

ಎಂದು ಹೇಳಿ ಸಾವಿತ್ರಮ್ಮ ಕೊಟಡಿಯಿಂದ ಹೊರಗೆ ಹೋದಳು

— ೪ —

ಲತಾಂಗಿ ಸ್ನಾನಕ್ಕಿಳಿದಳು ಸುಖೋಷ್ಣವಾದ ನೀರನ್ನು ತಂಬಿಗೆ ಯಿಂದ ಮೊಗೆದು ಮೈ ಮೇಲೆ ಸುರಿದುಕೊಳ್ಳುತ್ತಿದ್ದಂತೆ ಅವಳ ದೇಹದಲ್ಲಿ ನವಚೈತನ್ಯ ಮೂಡಿತು ತನ್ನ ಅಂಗಗಳ ಚಲುವನ್ನು ಕಂಡು ಸ್ವಯಂ ಮುಗ್ಧಳಾದಳು

ತೆಳುವಾದ ನೀಳವಾದ ಮೈಕಟ್ಟು ಸಾಮಾನ್ಯ ಸ್ತ್ರೀಯರಿಗಿಂತ ಅವಳು ಸ್ವಲ್ಪ ಎತ್ತರವಾಗಿದ್ದಳು ಕೈಶೋರ ಕಳೆದು ಯೌವ್ವನೋದಯ ವಾದ ಮೇಲೆ ನಾಲ್ಕಾರು ವರ್ಷಗಳು ಕಾಲೇಜಲ್ಲಿ ಓದುತ್ತಿದ್ದು ತರುವಾಯ ಮದುವೆಯಾದ್ದರಿಂದ ಬಾಲ್ಯ ವಿವಾಹ ಮತ್ತು ತಾಯ್ತನದ ಪರಿಣಾಮವಾಗಿ ತಲೆದೋರುವ ದೇಹ ದೌರ್ಬಲ್ಯ ಮತ್ತು ಅಕಾಲ ಪರಿಣತಿ ಅವಳಲ್ಲಿ ಕಾಣು

ತ್ತಿರಲಿಲ್ಲ ಆಗ ತಾನೆ ಪ್ರಚಾರಕ್ಕೆ ಬಂದಿದ್ದ ಆಧುನಿಕ ಪದ್ಧತಿಯಂತೆ ಅವಳ ತಂದೆ ತಾಯಿ ಮಗಳಿಗೆ ಭರತನಾಟ್ಯದಲ್ಲಿ ಶಿಕ್ಷಣ ಕೊಡಿಸಿದ್ದುದರಿಂದ ಆರೋಗ್ಯ ಸೌಂದರ್ಯಗಳೊಡನೆ ಅಪೂರ್ವ ಅಂಗಸೌಷ್ಟವವು ಬೆಳೆದು ಅಸಾಮಾನ್ಯ ಸೌಂದರ್ಯವತಿಯಾಗಿದ್ದಳು ಸಹ ವಿದ್ಯಾರ್ಥಿನಿಯರೊಡನೆ ಆಟ ಪಾಠಗಳು ಮಾತ್ರವಲ್ಲದೆ ಬ್ಯಾಡ್‌ಮಿಂಟನ್, ಸೂರ್ಯ ನಮಸ್ಕಾರ, ಬೈಸಿಕಲ್ ಸವಾರಿ, ಇವುಗಳ ಅಭ್ಯಾಸವೂ ಇದ್ದುದ್ದರಿಂದ ದೇಹಲತೆ ಸೌಂದರ್ಯ ಧೃಡತೆಗಳಿಂದ ಕೂಡಿತ್ತು ಪ್ರಕೃತಿಕ್ಕುವಾಗ ನೀಳ್ದೊಡೆಗಳ ನುಣುಪು ಅಮೃತ ಶಿಲೆಯ ಸ್ಪರ್ಶದಂತ ಅವಳ ಬೆರಳುಗಳನ್ನು ರಮಿಸಿದವು ತುಂಬಿದೆದೆಯು ಮಾರ್ದನ ಕೈಗಳನ್ನು ತಣಿಸಿತು

ಒಂದು ದಿನ ಕಛೇರಿಯಲ್ಲಿ ನಡೆದ ಘಟನೆ ಅವಳಿಗೆ ನೆನಪಾಯಿತು ಅಂದು ಅವಳು ಧರಿಸಿದ್ದ ಬಿಗಿಯಾದ ಚೋಲಿ, ಸ್ತನಗಳ ಮೋಹಕ ಆಕೃತಿಯನ್ನು ಎತ್ತಿ ತೋರಿಸುತ್ತಿತ್ತು ಜೋಷಿ ಅವಳನ್ನು ಕಛೇರಿಗೆ ಕರೆದು "ನಾಳಿನಿಂದ ಇಂತಹ ಚೋಲಿ ಹಾಕಿಕೊಳ್ಳಬೇಡ, ಲತಾ ಸುಂದರವಸ್ತುಗಳನ್ನು ಲೋಕದ ದೃಷ್ಟಿಯಿಂದ ಮುಚ್ಚಿಟ್ಟರೆ ಮೇಲು" ಎಂದು ರಹಸ್ಯವಾಗಿ ಹೇಳಿದ್ದ ಅಂದಿನಿಂದ ಅವಳು ಚೋಲಿಯ ಬದಲಾಗಿ ಜಾಕೆಟ್ ಧರಿಸಲು ಪ್ರಾರಂಭಿಸಿದಳು ಸ್ವಲ್ಪ ಚಳಿಯಾದರೂ ಮೇಲೆ ಸ್ವೆಟರ್ ಹಾಕುವಳು

ಇಂದು ಸ್ನಾನಮಾಡುತ್ತಾ ಜೋಷಿಯ ಮಾತು ಉತ್ಪ್ರೇಕ್ಷೆಯಲ್ಲವೆಂದು ಅವಳು ಭಾವಿಸಿದಳು ನಿಜವಾಗಿ ಅವು ಕಮಲ ಮುಕುಳುಗಳು ಮಾಂಸ ಪಿಂಡಗಳಲ್ಲಿ ಅಷ್ಟೊಂದು ಮಧುರತೆ, ಲಾವಣ್ಯ, ಚಿರನೂತನ ಆಕರ್ಷಣೆ ಎಲ್ಲಿಂದ ಬರಬೇಕು!

ಲತಾಂಗಿ ಸ್ನಾನ ಮುಗಿಸಿಕೊಂಡು ಪುನಃ ಕೊಟಡಿಗೆ ಬಂದಾಗ ಸಾವಿತ್ರಮ್ಮ ಮೇಜಿನ ಮುಂದೆ ನಿಂತು ಓರಣೆಯಾಗಿ ಇಟ್ಟಿದ್ದ ಸ್ನೊ, ತೈಲ, ಬಾಚಣಿಕೆ, ಕುಂಕುಮದ ಡಬ್ಬಿ ಮುಂತಾದ ಪ್ರಸಾಧನ ಸಾಮಗ್ರಿಗಳನ್ನು ನೋಡುತ್ತಾ ನಿಂತಿದ್ದಳು ಲತಾಂಗಿಯನ್ನು ಕಂಡು ಅವಳು,

"ರಮೇಶ ಕಛೇರಿಯಿಂದ ಹಿಂದಿರುಗಿಬಂದಿದ್ದಾನೆ ನಾನೂ ಸ್ನಾನ ಮುಗಿಸುತ್ತೇನೆ ಅನಂತರ ಮೂವರೂ ಒಟ್ಟಿಗೆ ಊಟ ಮಾಡೋಣ"

ಎಂದು ಹೇಳಿ ಹೊರಗೆ ಹೋದಳು

ಕಛೇರಿಯಲ್ಲಿ ಮಧ್ಯಾಹ್ನ ಒಂದು ಗಂಟೆಯ ತನಕ ಕೆಲಸ ಮಾಡಿ ಆ ಮೇಲೆ ಮನೆಗೆ ಹಿಂದಿರುಗುವುದು ರಮೇಶನ ಉದ್ದೇಶವಾಗಿತ್ತು ಆದರೆ ಹೋಗುತ್ತಲೇ ಸಂಸ್ಥೆಯ ಮಾಲಿಕ ಪರಿಷತ್ತಿನ ವಿಚಾರವನ್ನೆತ್ತಿ, "ಈ ದಿನ ಸಭೆಯಲ್ಲಿ ಅಧ್ಯಕ್ಷತೆ ವಹಿಸುವ ಮುಖಂಡ ನಮ್ಮೂರಿನವನು ಅನೇಕ ವರ್ಷಗಳಿಂದ ನನಗೆ ಪರಿಚಿತ ವ್ಯಕ್ತಿ ಬೊಂಬಾಯಿಂದ ಅವನು ಬಂದ ಸುದ್ದಿ ಕೇಳಿ ಹೋಗಿ ನೋಡಿದೆ ಅಧಿವೇಶನಕ್ಕೆ ಬರುವಂತೆ ನನ್ನನ್ನೂ ಆಹ್ವಾನಿಸಿದ್ದಾನೆ" ಎಂದು ಹೇಳಿದ

ಬೆಂಗಳೂರಿಂದ ಪರಿಷತ್ತಿಗೆ ಬಂದವರೊಬ್ಬರು ತನ್ನ ಮನೆಯಲ್ಲಿ ಬಿಡಾರ ಮಾಡಿರುವುದಾಗಿ ರಮೇಶನೂ ಪ್ರಾಸಂಗಿಕವಾಗಿ ತಿಳಿಸಿದ "ಹಾಗಾದರೆ ನೀವು ಜಾಗ್ರತೆ ಮನೆಗೆ ಹೋಗಿ ಹೇಗೂ ನಾನು ಎರಡು ಗಂಟೆವರೆಗೆ ಇಲ್ಲೇ ಇರುತ್ತೇನೆ ಹೊರಗಿನಿಂದ ಅತಿಥಿ ಅಭ್ಯಾಗತರು ಬಂದಿರುವಾಗ ಒಂದು ದಿನವನ್ನಾದರೂ ಅವರೊಡನೆ ಕಳೆಯಬೇಡವೇ ?" ಎಂದು ಮಾಲಿಕ ಸೂಚಿಸಿದ ರಮೇಶನಿಗೂ ಅದು ಬೇಕಾಗಿತ್ತು. ತನ್ನ ಕೆಲಸಗಳನ್ನು ಬೇಗ ಮುಗಿಸಿಕೊಂಡು ಹನ್ನೆರಡು ಗಂಟೆಗೆ ಮೊದಲೆ ಮನೆಗೆ ಹಿಂದಿರುಗಿದ

ಲತಾಂಗಿ ಮೇಜಿನ ಮುಂದೆ ಕುಳಿತು ಪ್ರಸಾಧನಕ್ಕೆ ಪ್ರಾರಂಭಿಸಿದಳು ಮೊದಲು ಸೀಸೆಯಿಂದ ಸುಗಂಧಿತವಾದ ಎಣ್ಣೆ ತೆಗೆದು ತಲೆಗೆ ಹಚ್ಚಿ ಕೊಂಡಳು ಭ್ರಮರದಂತೆ ನೀಲವಾದ ಗುಂಗುರು ಕೂದಲನ್ನು ಬಾಚಿ ಹೆರಳು ಹಾಕಿದಳು ನಂತರ ಮುಖಕ್ಕೆ ಸ್ನೋ ಹಚ್ಚಿಕೊಂಡು ಡಬ್ಬಿಯಿಂದ ಪೌಡರ್ ತೆಗೆದು ಬಳಿದಳು ಕೈಯಿಂದುಜ್ಜಿ ಅಸಮವಾಗಿ ಬಿದ್ದಿದ್ದ ಪೌಡರನ್ನು ಸರಿಪಡಿಸಿಕೊಳ್ಳುತ್ತಿದ್ದಂತೆ ಕನ್ನಡಿಯಲ್ಲಿ ರಮೇಶನ ನೆರಳು ಕಾಣಿಸಿತು.

ರಮೇಶ್ ಬಾಗಿಲಲ್ಲಿ ನಿಂತು "ಒಳಗೆ ಬರಬಹುದೇ ?" ಎಂದು ಕೇಳಿದ

ಲತಾ ಮುಖ ತಿರುಗಿಸಿ ಸ್ವಾಗತದ ಕಿರುನಗೆ ಬೀರಿದಳು ಕೊಟಡಿ ಯಲ್ಲಿ ಇದ್ದದ್ದು ಒಂದೇ ಕುರ್ಚಿ ರಮೇಶ್ ಒಳಗೆ ಬಂದವನು ಮಂಚದ ಮೇಲೆ ಕುಳಿತುಕೊಳ್ಳಲು ಹಿಂದು ಮುಂದು ನೋಡಿದ. ಲತಾ ಅವನ

ಮನಸ್ಸಿನ ಭಾವವನ್ನರಿತು ಕುರ್ಚಿಯಿಂದೆದ್ದು "ನೀವು ಇಲ್ಲಿ ಕುಳಿತುಕೊಳ್ಳಿ, ನಾನು ಮಂಚದ ಮೇಲೆ ಕುಳಿತುಕೊಳ್ಳುತ್ತೇನೆ" ಎಂದಳು.

"ನಾನು ಬಂದದ್ದು ನಿಮಗೆ ತೊಂದರೆಯಿಲ್ಲ ತಾನೆ? ಬೆಳಗಿನ ನನ್ನ ವರ್ತನೆಗಾಗಿ ನಿಮ್ಮ ಕ್ಷಮೆ ಬೇಡುವುದು ನನ್ನ ಉದ್ದೇಶ"

"ಯಾವ ಅಪರಾಧಕ್ಕಾಗಿ ಕ್ಷಮೆ ಬೇಡುವುದು?"

"ಬೆಳಿಗ್ಗೆ ನಾನು ಸ್ಟೇಷನ್ನಿಗೆ ಬಂದಾಗ ಚಂಪಾ ಮನೆಯಲ್ಲಿಲ್ಲವೆಂಬುದನ್ನು ತಿಳಿಸಿ ಹಿಂದಿರುಗಬೇಕೆಂದು ಯೋಚಿಸಿದ್ದೆ ನಿಮ್ಮನ್ನು ನೋಡಿದಾಗ ನನ್ನ ಉದ್ದೇಶ ಬದಲಾವಣೆಯಾಯಿತು"

"ನಿಮ್ಮ ಉದ್ದೇಶ ಬದಲಾವಣೆಯಾಗಲು ಕಾರಣ?"

"ಪ್ರತಿನಿಧಿಗಳ ಬಿಡಾರದಲ್ಲಿ ನಿಮಗೆ ತೊಂದರೆಯಾಗಬಹುದೆಂದು. ಚಂಪಳ ಗೆಳತಿಯೊಬ್ಬಳು ಮದ್ರಾಸಿಗೆ ಬಂದಿರುವಾಗ ಬೇರೆ ಕಡೆ ಕಳುಹಿಸುವುದೇ ಎಂದು ಭಾವಿಸಿದೆ"

"ಅದಕ್ಕಾಗಿ ನೀವು ನನ್ನಲ್ಲಿ ಸುಳ್ಳು ಹೇಳಿದ್ದು ಸರಿಯೆ?"

"All is fair in love and war ಎಂಬ ಇಂಗ್ಲಿಷ್ ಗಾದೆ ನೀವು ಕೇಳಿಲ್ಲವೇ? ನನ್ನ ತಪ್ಪಿಗೆ ಕ್ಷಮೆ ಬೇಡಲು ಬಂದಿದ್ದೇನೆ"

ಲತಾ ಉತ್ತರ ಕೊಡಲಿಲ್ಲ ರಮೇಶನ ದೃಷ್ಟಿ ವಿಚಿತ್ರ ತೀಕ್ಷ್ಣತೆಯಿಂದ ತನ್ನ ಮೇಲೆ ಬಿದ್ದಿರುವುದಾಗಿ ಅವಳು ಭಾವಿಸಿದಳು ಆ ನೋಟದ ವ್ಯಾಪಕತೆ ಕ್ಷಣಕಾಲ ತನ್ನನ್ನು ವಿವಸ್ತ್ರಳಾಗಿ ಮಾಡಿದಂತೆ ಅವಳಿಗೆ ಭಾಸವಾಯಿತು ಲಜ್ಜೆಯಿಂದ ಅಂಗಾಂಗಗಳು ಸಂಕುಚಿತವಾದಂತೆ ತಿಳಿದಳು. ಪುರುಷದೃಷ್ಟಿಯ ಈ ಮರ್ಮಭೇದಕ ಶಕ್ತಿಯನ್ನು ಅವಳು ಹಿಂದೆ ಕೆಲವು ಸಾರಿ ಜೋಷಿಯ ಮುಂದೆ ನಿಂತಾಗ ಅನುಭವಿಸಿದ್ದಳು ಆದರೆ ಜೋಷಿಯ ದೃಷ್ಟಿ ತಿಂಗಳಬೆಳಗಿನಂತೆ ಅಂಗಗಳನ್ನು ತಣಿಸಿ ನರಗಳ ಉದ್ರೇಕವನ್ನು ಶಾಂತಿಗೊಳಿಸುತ್ತಿದ್ದವು ರಮೇಶನ ದೃಷ್ಟಿ ಹಾಗಲ್ಲ ಸಹಸ್ರ ದೀಪಗಳ ವಿದ್ಯುತ್‌ಪ್ರಕಾಶವನ್ನು ದೇಹದ ಮೇಲೆ ಹರಿಸಿದಂತೆ ಚರ್ಮದ ಹಿಂದಿರುವ ಸೂಕ್ಷ್ಮ ಗ್ರಂಥಿಗಳು ಉದ್ರೇಕಗೊಂಡು ಮರೆಯಾಗಿದ್ದ ಪ್ರಸುಪ್ತ ಭಾವನೆಗಳನ್ನು ಎಚ್ಚರಗೊಳಿಸುತ್ತಿದ್ದುವು ಸ್ನಾನಾನಂತರ ಕೆಲವು ನಿಮಿಷಗಳು ಸ್ತ್ರೀ ದೇಹದ ಗ್ರಹಣಶಕ್ತಿ ನೂರರಷ್ಟು ಹೆಚ್ಚುತ್ತದೆಂಬುದನ್ನು ಲತಾಂಗಿ

ತಿಳಿದಿರಲಿಲ್ಲ ಸೌಂದರ್ಯದ ಆ ಅದೃಶ್ಯಶಕ್ತಿ ತನ್ನನ್ನು ಆಕರ್ಷಿಸಿ ತೆಂಬುದು ರಮೇಶನಿಗೂ ಅರಿವಾಗಲಿಲ್ಲ ಆ ಯುವಕ ಯುವತಿಯರಿಗೆ ಅಗೋಚರವಾಗಿ ಅವರ ದೇಹದ ಕಲಾ ಕಿರಣಗಳು ಆ ನಿಮಿಷದಲ್ಲಿ ಪರಸ್ಪರ ವಿನಿಮಯವಾದವು

ಸ್ವಲ್ಪಹೊತ್ತು ಇಬ್ಬರೂ ನೀರವವಾಗಿ ಕುಳಿತಿದ್ದರು ಅನಂತರ ರಮೇಶ್ ಹೇಳಿದ, "ಮತ್ತೊಂದು ವಿಚಾರ ನಾನು ನಿಮಗೆ ತಿಳಿಸಬೇಕಾಗಿದೆ ಚಂಪಾ ನನ್ನನ್ನು ಬಿಟ್ಟಳು ತಂದೆಯ ಮನೆಯಿಂದ ನೋಟೀಸ್ ಕಳುಹಿಸಿದ್ದಾಳೆ, ಮದುವೆ ರದ್ದುಪಡಿಸಬೇಕೆಂದು ಕೋರ್ಟಿನಲ್ಲಿ ಕೇಸ್ ಹಾಕುವಳಂತೆ"

"ರದ್ದುಪಡಿಸಲು ಕಾರಣ ?"

"ನನಗೆ ತಿಳಿಯದು, ಹತ್ತಾರು ಕಾರಣಗಳಿರಬಹುದು"

"ಅಥವಾ ಗಂಡನ ವರ್ತನೆ ಕಾರಣವಾಗಬಹುದು"

"ನೀವು ಚಂಪಳ ಪಕ್ಷ ವಹಿಸಿ ಹೀಗೆ ಹೇಳುತ್ತೀರಿ ನನ್ನದೇನೂ ತಪ್ಪಿಲ್ಲ"

"ನಾನು ಯಾರ ಪಕ್ಷವನ್ನೂ ವಹಿಸಿಲ್ಲ ಅನುಭವದ ಮಾತು ಹೇಳುತ್ತೇನೆ ಅಲ್ಲದೆ ಚಂಪಕಳ ಸಂಗಡ ಹೆಣಗುವುದೂ ಕಷ್ಟ"

"ನಾನು ಕಷ್ಟವೆಂದು ಭಾವಿಸಲಿಲ್ಲ ಅವಳ ಸ್ವಭಾವ ತಿಳಿದೇ ಮದುವೆಯಾದೆ ಸುಲಭವಾಗಿ ಒಲಿಯುವ ಹೆಣ್ಣಿನಲ್ಲಿ ಆಕರ್ಷಣೆಯೇನಿದೆ? ಕೇಳಿದಮಾತ್ರಕ್ಕೆ ದೊರಕುವ ವಸ್ತುವನ್ನು ಜನರು ಕಡೆಗಣಿಸುವರು ಚಂಪಕ ಹಾಗಲ್ಲವೆಂದು ತಿಳಿದೇ ಮದುವೆಯಾದೆ ನನ್ನ ಭಾವನೆ ಬರಿಯ ಭ್ರಾಂತಿಯೆಂದು ಈಗ ಗೊತ್ತಾಗುತ್ತಿದೆ"

"ಅವಳು ಹಿಂದಿರುಗುವ ಸಂಭವವಿಲ್ಲವೆ? ನಾನು ಅವಳಿಗೊಂದು ಕಾಗದ ಬರೆಯಬೇಕೆಂದು ಯೋಚಿಸಿದ್ದೇನೆ"

"ದಯಮಾಡಿ ಬರೆಯಬೇಡಿ ಅವಳು ಪುನಃ ಬರುವುದು ನನಗಿಚ್ಛೆಯಿಲ್ಲ ಕೋರ್ಟಿನಲ್ಲಿ ಕೇಸು ನಡೆದು ಮದುವೆ ರದ್ದಾಗಿ ಹೋಗಲಿ"

ಲತಾ ಮೌನವಾಗಿದ್ದಳು ರಮೇಶ್ ಅವಳ ನೀಳವಾದ ಬೆರಳುಗಳನ್ನು ನೋಡುತ್ತಿದ್ದ ಮನೆ ಕೆಲಸದಿಂದ ಮಾಸದೆ ಕಛೇರಿಯಲ್ಲಿ ಲೇಖನಿ ಹಿಡಿಯುವ ಬೆರಳುಗಳೆಂಬುದು ಒಂದುಸಾರಿ ನೋಡಿದಾಗಲೆ ವ್ಯಕ್ತವಾಗುತ್ತಿತ್ತು.

ಅವುಗಳಲ್ಲಿ ಹೆಣ್ಣಿನ ಮಾರ್ದವಕ್ಕಿಂತ ಗಂಡಿನ ಕಠಿಣತೆಯಿದೆಯೆಂದು ಅವನು ತಿಳಿದ ಚಂಪಕಳಂತೆ ಅವಳ ಗೆಳತಿಯೂ ಕಷ್ಟಸಾಧ್ಯೆ ಆದರ ಲತಾಂಗಿಯ ಅಂಗೈ ಗುಲಾಬಿಯ ರೇಖಗಳಂತೆ ಕೆಂಪಾಗಿ ಮಾಂಸಲವಾಗಿದ್ದವು ಒಲಿಸುವುದು ಕಷ್ಟವಾದರೂ ಒಲಿದ ಪುರುಷನನ್ನು ಸ್ವರ್ಗಕ್ಕೇರಿಸುವ ಪ್ರಣಯ ಚಾತುರ್ಯ ಆ ಕೈಗಳಲ್ಲಿದೆಯೆಂದು ಅವನು ಭಾವಿಸಿದ ಆದರ ಬೆರಳುಗಳ ಕಠಿಣತೆ, ಧೃಡಬಂಧನ, –ಅದನ್ನು ಬಿಡಿಸಬಲ್ಲ ಭಾಗ್ಯಶಾಲಿ ಯಾರು ? ಲತಾಂಗಿಯ ಪತಿ ಆ ಭಾಗ್ಯದಿಂದ ವಂಚಿಸಲ್ಪಟ್ಟವನೆಂದು ಅವನಿಗೆ ತೋರಿತು ಲತಾಂಗಿಯ ಮುಖವನ್ನು ದೃಷ್ಟಿಸಿ ನೋಡುತ್ತಾ ರಮೇಶ್ ಹೇಳಿದ

"ಲತಾದೇವಿ, ಕೋಪ ಮಾಡಿಕೊಳ್ಳದಿದ್ದರ ಒಂದು ಮಾತು ಹೇಳುತ್ತೇನೆ"

"ಸಂಕೋಚವಿಲ್ಲದೆ ಹೇಳಿ"

"ನೀನು ಅಸಾಮಾನ್ಯ ಹೆಂಗಸು ನಾನು ನಿನ್ನಂತಹ ಹೆಣ್ಣನ್ನು ಇದುವರೆಗೆ ಯಾವಾಗಲೂ ಎಲ್ಲಿಯೂ ನೋಡಿಲ್ಲ"

ರಮೇಶ್ ಹಠಾತ್ತಾಗಿ ''ನೀನು'' ಎಂದು ಸಂಬೋಧಿಸಿದುದು ಲತಾಂಗಿಯನ್ನು ಆಶ್ಚರ್ಯಗೊಳಿಸಲಿಲ್ಲ ಬೆಳೆಯುತ್ತಿದ್ದ ಸಲಿಗೆ ಮಾತುಗಳಲ್ಲಿ ವ್ಯಕ್ತವಾಗುವುದೆಂದು ಅವಳು ನಿರೀಕ್ಷಿಸಿದ್ದಳು ಸಹಜ ಕಂಠದಿಂದ ಉತ್ತರ ಕೊಟ್ಟಳು

''ಅದನ್ನು ಇಷ್ಟು ಬೇಗ ನೀವು ಹೇಗೆ ತಿಳಿದಿರಿ ?''

''ನನಗೆ ಸಾಮುದ್ರಿಕ ಶಾಸ್ತ್ರದ ಪರಿಚಯವಿದೆ ಚಹರ ನೋಡಿ ಮನುಷ್ಯರ ಗುಣವನ್ನು ತಿಳಿಯಬಲ್ಲೆ ನೀಳವಾದ ನಿನ್ನ ಬೆರಳುಗಳು, ಕೋಮಲ ಹಸ್ತ ಇವುಗಳನ್ನು ನೋಡುತ್ತಿದ್ದಂತೆ ನೀನು ಅಸಾಮಾನ್ಯೆಯೆಂದು ತಿಳಿದುಕೊಂಡೆ ನಿನ್ನಂತೆ ರೂಪವತಿಯೂ ಬುದ್ಧಿಮತಿಯೂ ಆದ ಹೆಂಗಸು ಪ್ರಪಂಚದಲ್ಲಿ ವಿರಳ ಆದರೆ ಒಂದು ಲೋಪವಿದೆ''

ಲತಾಂಗಿ ನಗುತ್ತಾ, ''ಲೋಪವೇನು ? ಅದನ್ನೂ ಹೇಳಿಬಿಡಿ, ಜೋಯಿಸರೇ ?''

"ನಿನ್ನ ಬೆರಳುಗಳ ಕಠಿಣತೆ ಮನಸ್ಸಿನ ದೃಢಮುಷ್ಟಿಯನ್ನು

ಸೂಚಿಸುತ್ತದೆ ಚಂಪಕಳಂತೆ ನೀನೂ ಕಷ್ಟಸಾಧ್ಯೆ ನಿನ್ನೊಡನೆ ಹೆಣಗುವುದೂ ಕಷ್ಟ"

"ನೀವೇ ಹೇಳಿದಿರಲ್ಲಾ ಸುಲಭವಾಗಿ ಒಲಿಯುವ ಹೆಣ್ಣಿನಲ್ಲಿ ಆಕರ್ಷಣೆಯೇನಿದೆ ಎಂದು ನಾನು ಬದುಕಿಗಾಗಿ ದುಡಿಯುವವಳು, ರಮೇಶ್‌ರಾವ್ ಕಛೇರಿಯಲ್ಲಿ ಗಂಡಸರ ಮಧ್ಯೆ ಕೆಲಸ ಮಾಡಬೇಕು ದೃಢ ಮುಷ್ಟಿಯಿಂದ ಮನಸ್ಸನ್ನು ಬಿಗಿ ಹಿಡಿಯದೆ ಸಲಿಗೆಗೆ ಎಡೆಗೊಟ್ಟರೆ ಪತನ ಸಿದ್ಧವಾದಂತೆಯೇ ಕೆಲಸದಲ್ಲಿ ಮಗ್ನಳಾದಾಗ ನಾನು ಹೆಂಗಸೆಂಬುದನ್ನೂ ಮರೆತುಬಿಡುತ್ತೇನೆ"

"ಅದೇ ನಿನ್ನ ಲೋಪ ಲತಾದೇವಿ ನೀನು ಹೆಣ್ಣೆಂಬುದನ್ನು ಎಲ್ಲ ಸಮಯಗಳಲ್ಲಿಯೂ ನೆನಪಿನಲ್ಲಿಟ್ಟುಕೊಂಡು ನಡೆಯಬಲ್ಲೆಯಾದರೆ ನಿನ್ನಂತಹವರು ಜಗತ್ತಿನಲ್ಲಿ ದೊರಕುವುದು ದುರ್ಲಭ"

"ಎಲ್ಲರೊಡನೆಯೂ ಎಲ್ಲ ಸಮಯಗಳಲ್ಲಿಯೂ ನನ್ನಂತಹವರಿಗೆ ಸಾಧ್ಯವಲ್ಲ ಅದು?"

ಮಾತನಾಡುತ್ತಿದ್ದಂತೆ ಲತಾ ತಲೆ ತಗ್ಗಿಸಿದಳು

"ಮನಸ್ಸಿನಲ್ಲಿ ಪ್ರೇಮ ಉದಯವಾದಾಗ ಅದು ಸಾಧ್ಯವಾಗುವುದು, ಲತಾ ಪ್ರೇಮಸೂರ್ಯನ ಕಿರಣಗಳಿಂದ ನಿನ್ನ ಹೃದಯದ ದೃಢ ಮುಷ್ಟಿ ಬೆಳಗಿನ ತಾವರೆಯ ದಳಗಳಂತೆ ಸಡಿಲವಾಗಿ ಅರಳುವುದು ಮನಸಾರೆ ಪ್ರೀತಿಸಿದಾಗ ನಿನ್ನಂತಹ ಹೆಣ್ಣಿನ ಪರವಶತೆ ಪುರುಷನ ಮೈ ಮರೆಸಿ ಸ್ವರ್ಗ ಸುಖವನ್ನು ಕೊಡಬಲ್ಲುದು"

ಈ ಮಾತುಗಳನ್ನು ಹೇಳುತ್ತಿದ್ದಂತೆ ರಮೇಶನ ಕಂಠ ಕೋಗಿಲೆಯ ಕರೆಯಂತೆ ಮೃದುವಾಗಿ ಪಂಚಮದಲ್ಲಿ ಮಿಡಿಯಿತು ಲತಾಂಗಿ ಅರೆ ಮುಚ್ಚಿದ ಕಣ್ಣುಗಳಿಂದ ಪ್ರೇಮತತ್ವದ ಈ ವಿವರಣೆಯನ್ನು ಕೇಳಿದಳು ಅಂತಃಕರಣದಲ್ಲಿ ರಕ್ಷಣೆಗಾಗಿ ನಿರ್ಮಿತವಾಗಿದ್ದ ಕೋಟೆಯ ಗೋಡೆಗಳನ್ನು ಭೇದಿಸಿ ಅದು ಅವಳ ಅಂತರಾತ್ಮದಲ್ಲಿ ಪ್ರತಿಧ್ವನಿತವಾಯಿತು ಅವನ ಮಾತು ತನ್ನ ನಿಜ ಸ್ವರೂಪವನ್ನು ತನಗೆ ಬಿಚ್ಚಿ ತೋರುತ್ತಿದ್ದಂತೆ ನೆನೆಸಿದಳು. ಅವಳ ತುಟಿಗಳಲ್ಲಿ ಅಸ್ಫುಟ ಮಂದಹಾಸದ ಬೆಳಗು ಮೂಡಿತು ಸ್ತಬ್ಧಳಂತೆ ಹಾಸಿಗೆಯ ಮೇಲೆ ಕುಳಿತಳು. ನೀಳವಾದ ಕೈಗಳು ತೊಡೆಯಮೇಲಿದ್ದವು. ರಮೇಶನ ಪಾರದರ್ಶಕ ದೃಷ್ಟಿ ಆಪಾದಮಸ್ತಕ ತನ್ನ ಮೇಲೆ ಬಿದ್ದುದನ್ನು

ಅರೆ ಮುಚ್ಚಿದ ಕಣ್ಣುಗಳಿಂದ ಅವಳು ಕಂಡಳು

ಲತಾಂಗಿಯ ತುಟಿಗಳ ಮೋಹಕ ಆಕೃತಿಯನ್ನು ರಮೇಶ್ ಬಹಳ ಹೊತ್ತು ನೋಡುತ್ತಿದ್ದ ಮೇಲಿನ ತುಟಿ ಹವಳದಿಂದ ಕಡೆದಂತೆ ಅಂದ ವಾಗಿ ಕಾಣುತ್ತಿತ್ತು ಕೆಳಗಿನ ತುಟಿ ದುಂಡಾಗಿ ಸಣ್ಣದಾಗಿ ಕೋಮಲ ವಾಗಿತ್ತು—"ಚುಂಬನದೊಡನೆ ವಿದ್ಯುತ್ ಪ್ರವಾಹನನ್ನು ಹರಿಸಬಲ್ಲವು ಇವು" ಎಂದು ಅವನು ಭಾವಿಸಿದ

ಲತಾಂಗಿ ತಲೆ ತಗ್ಗಿಸಿಕೊಂಡು ಸ್ತಬ್ಧಳಂತೆ ·ನಿಶ್ಚೇಷ್ಟಿತೆಯಾಗಿ ಕುಳಿ ತಿದ್ದಳು ಬೊಂಬೆಯೊಂದನ್ನು ಅಲಂಕರಿಸಿ ಹಾಸಿಗೆಯ ಮೇಲೆ ಕುಳ್ಳಿರಿಸಿ ದ್ದಂತೆ ಅವನಿಗೆ ಬೋಧೆಯಾಯಿತು ಎದ್ದು ಸಮೀಪಕ್ಕೆ ಹೋದ ಅಂಗೈಯಿಂದ ಹಣೆಯನ್ನು ಮುಟ್ಟಿ ಮುಖವನ್ನು ಸ್ವಲ್ಪ ಹಿಂದೆ ತಳ್ಳಿ ಅರೆ ಮುಚ್ಚಿದ ಕಣ್ಣುಗಳನ್ನು ನೋಡಿದ ಕಣ್ಣಾಲಿಗಳು ದೃಷ್ಟಿ ಶೂನ್ಯವಾಗಿ ಕಂಡವು ತುಟಿಗಳು ಸ್ಫುರಿಸಿದವು ಆಗ ರಮೇಶ್ ನಿದ್ರಿತ ಕಮಲಗಳನ್ನು ಎಚ್ಚರಿಸುವಂತೆ ಅವಳ ಅಧರಗಳನ್ನು ಚುಂಬಿಸಿದ

ಲತಾಂಗಿ ಕಣ್ಣುಗಳನ್ನು ತೆರೆದಳು ದೃಷ್ಟಿ ಮಿಂಚಿನಂತೆ ತೀವ್ರ ವಾಯಿತು ರಮೇಶನನ್ನು ಹಿಂದಕ್ಕೆ ತಳ್ಳಿ ಕೈಗಳಿಂದ ಮುಖ ಮುಚ್ಚಿ ಕೊಂಡಳು

ಸ್ನಾನ ಮುಗಿಸಿಕೊಂಡು ಬಾಗಿಲ ಹತ್ತಿರ ಬಂದ ಸಾವಿತ್ರಮ್ಮ ಕ್ಷಣ ಕಾಲ ಈ ದೃಶ್ಯವನ್ನು ನೋಡಿ ಬಳಿಕ ಏನೂ ಅರಿಯದವಳಂತೆ ಒಳಗೆ ಬಂದು "ಏಳಮ್ಮ ಲತಾ, ಊಟಕ್ಕೆ ಹೋಗೋಣ" ಎಂದಳು

ರಮೇಶ್ ಅಲ್ಲಿ ನಿಲ್ಲಲಿಲ್ಲ.

—೫—

ಮೊದಲೇ ತಿಳಿಸಿದ್ದಂತೆ ಮೂರು ಗಂಟೆಗೆ ಸರಿಯಾಗಿ ಟ್ಯಾಕ್ಸಿ ಮನೆಯ ಮುಂದೆ ಬಂದು ನಿಂತಿತು. ಲತಾಂಗಿ, ರಮೇಶ್, ಸಾವಿತ್ರಮ್ಮ ಅಧಿವೇಶನಕ್ಕೆ ಹೊರಟರು ರಾಷ್ಟ್ರೀಯ ಕಾಂಗ್ರೆಸ್ ಮಹಾ ಸಭೆಯ

"ಕ್ವಿಟ್ ಇಂಡಿಯಾ" ಆಂದೋಳನದ ಪರಿಣಾಮವಾಗಿ ರಾಷ್ಟ್ರ ನಾಯಕರು, ಅವರ ಅನುಯಾಯಿ, ಬೆಂಬಲಿಗರು ದೇಶದ ಸೆರೆಮನೆಗಳಲ್ಲಿ ಬಂಧನದಲ್ಲಿದ್ದರಾದರೂ ಅಧಿವೇಶನ ಉತ್ಸಾಹದಿಂದ ನಡೆಯಿತು ನಾಡಿನ ಜನತಾ ಜೀವನದಲ್ಲಿ ತಲೆದೋರಿದ್ದ ರಾಜಕೀಯ ಪ್ರತಿಷ್ಟಂಭಣವನ್ನು ಕೊನೆಗಾಣಿಸಲು ಮಿತವಾದಿ ರಾಜಕೀಯ ಪಕ್ಷಗಳು ಒಂದುಗೂಡಬೇಕಾಗಿ ಅಧ್ಯಕ್ಷರು ವಿಜ್ಞಾಪಿಸಿಕೊಂಡರು ಹಲವು ಮಂದಿ ತೀವ್ರವಾದಿ ವಿದ್ಯಾರ್ಥಿಗಳು ಪರಿಷತ್ತಿನ ವಿರುದ್ಧ ನಡೆಸಿದ ಕಪ್ಪು ಬಾವುಟದ ಪ್ರದರ್ಶನ ಯಶಸ್ವಿಯಾಗಲಿಲ್ಲ ಸಭೆಯ ವಿವರಗಳು ಮದ್ರಾಸಿನ ಆಂಗ್ಲ ಮತ್ತು ದೇಶಭಾಷಾ ಪತ್ರಿಕೆಗಳಲ್ಲಿ ಪ್ರಕಟವಾದವು

ಅಧಿವೇಶನದ ತರುವಾಯ ಪ್ರತಿನಿಧಿಗಳ ಸಮಾರಾಧನೆಗಾಗಿ ಸಂಗೀತ ಕಛೇರಿ ಏರ್ಪಾಡಾಗಿತ್ತು ಮದ್ರಾಸಿನ ಒಬ್ಬ ವಿಖ್ಯಾತ ಚಲನ ಚಿತ್ರ ನಟಿ ಮೃದು ಮಧುರ ಕಂಠದಿಂದ ಎರಡು ಗಂಟೆಗಳ ಕಾಲ ಹಾಡಿ ಸಭಿಕರಿಗೆ ಕರ್ಣಾನಂದವನ್ನುಂಟುಮಾಡಿದಳು ಪರಿಷತ್ತಿನ ನೀರಸ ಚರ್ಚೆಗಳಿಂದ ಬೇಸರಗೊಂಡಿದ್ದ ಜನ ಗಾಯಕಿಯ ರಾಗಾಲಾಪನೆ, ಪಲ್ಲವಿ, ಕೀರ್ತನೆ, ಪದಗಳನ್ನು ಕೇಳಿ ಆನಂದಿಸಿದರು ಸಭೆಯಲ್ಲಿ ಹರಡಿದ್ದ ಅಪ್ರಯೋಜಕ ರಾಜಕೀಯದ ಶುಷ್ಕ ವಾತಾವರಣ ಮೃದಂಗದ ಶಬ್ದದಿಂದ ಜಾಗೃತವಾಗಿ, ತಂಬೂರಿಯ ಝೇಂಕಾರದ ಆನಂದಾನುಭವಕ್ಕೆ ಅನುವಾಯಿತು ಅಧಿವೇಶನಕ್ಕೆ ಸುದ್ದಿಗಾರರಾಗಿ ಬಂದಿದ್ದ ಪತ್ರಿಕೋದ್ಯಮಿಗಳು ಸಂಗೀತದ ಸುಖಾನುಭವದಲ್ಲಿ ತಾವು ಯೋಚಿಸಿದ್ದ ಕಟು ಟೀಕೆಗಳನ್ನು ಮರೆತರು ವಿವಿಧ ರಾಜಕೀಯ ಪಕ್ಷಗಳ ಪ್ರತಿನಿಧಿಗಳು ತಮ್ಮ ತಮ್ಮ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಅಧಿವೇಶನವನ್ನು ಯಶಸ್ವಿಯಾಗಿ ಪೂರೈಸಲು ನಿಶ್ಚಯಿಸಿದರು

ಕಛೇರಿ ಮುಗಿದಾಗ ರಾತ್ರಿ ಒಂಬತ್ತು ಗಂಟೆ ಲತಾ, ರಮೇಶ್ ಮತ್ತು ಸಾವಿತ್ರಮ್ಮ ಟ್ಯಾಕ್ಸಿಯಲ್ಲಿ ಮನೆಗೆ ಹಿಂದಿರುಗಿದರು. ಬರುವಾಗ ಲತಾಂಗಿ ಸಾವಿತ್ರಮ್ಮನ ಪಾರ್ಶ್ವದಲ್ಲಿ ಕುಳಿತಿದ್ದಳು. ಈಗ ಈ ಅನುಕ್ರಮದಲ್ಲಿ ವ್ಯತ್ಯಸ್ತವಾಗಿ ರಮೇಶ ಲತಾಂಗಿಯ ಪಕ್ಕದಲ್ಲಿ ಕುಳಿತುಕೊಂಡ. ಅವನ ಮೈ ಲತಾಂಗಿಗೆ ತಾಕುತ್ತಿತ್ತು ಹಿಂದೆ ಒರಗಿಕೊಂಡಾಗ ಭುಜಗಳು ಸ್ಪರ್ಶಿ

ಸಿದವು ಲತಾಂಗಿ ಸರಿಯುಲಿಲ್ಲ ಮಧ್ಯಾಹ್ನ ನಡೆದ ಘಟನೆ ಅವಳ ಸಂಯುವು ಸಂಕೋಚಗಳನ್ನು ಸಡಲಿಸಿದ್ದಿತು ಪ್ರಣಯದ ನೂತನ ಅನುಭವ ತನ್ನ ಮದ್ರಾಸ್ ಪ್ರವಾಸಕ್ಕೆ ಮೆರಗು ಕೊಡುವುದಾದರೆ ಏಕಾಗ ಬಾರದು ? ಎಂದು ಭಾವಿಸಿದಳು

ರಮೇಶನ ಮೈ ತನ್ನನ್ನು ಹೆಚ್ಚು ಒತ್ತಿದಾಗ ಲತಾ ರೋಮಾಂಚಿತೆಯಾದಳು "ಸ್ತ್ರೀ ಪುರುಷರ ದೇಹಗಳು ವಿದ್ಯುದುತ್ಪಾದನೆಯ ಡೈನಮೋಗಳಂತೆ ಒಂದನ್ನೊಂದು ತಾಕಿದಾಗ ವ್ಯಕ್ತಿಯ ಭಾವಾನುಗುಣವಾಗಿ ಆಕರ್ಷಕ ಅಥವಾ ವಿಕರ್ಷಕ ಕಿರಣಗಳು ಹುಟ್ಟುವವು" ಎಂದು ಜೋಷಿ ಹೇಳುತ್ತಿದ್ದುದು ಅವಳಿಗೆ ನೆನಪಾಯಿತು

ಟ್ಯಾಕ್ಸಿ ಹೋಗುತ್ತಿದ್ದಂತೆ ಸಾವಿತ್ರಮ್ಮ ಚಲನಚಿತ್ರ ನಟಿಯರ ಮಾತೆತ್ತಿ "ಒಂದೊಂದು ಚಿತ್ರಕ್ಕೆ ಅವರಿಗೆಷ್ಟು ಹಣ ಕೊಡುತ್ತಾರೆ ?" ಎಂದು ಕೇಳಿದಳು

"ಇಪ್ಪತ್ತರಿಂದ ಐವತ್ತು ಸಾವಿರದವರೆಗೆ, ಅದೃಷ್ಟವಿದ್ದಂತೆ" ಎಂದು ರಮೇಶ ಹೇಳಿದ

"ಅದೃಷ್ಟವಿದ್ದರೇ ಅಷ್ಟು ಎಲ್ಲಾ, ವರ್ಷಕ್ಕೆ ನಾಲ್ಕು ಚಿತ್ರದಲ್ಲಿ ನಟಿಸಿದರೆ ಗೌವರ್ನರ್ ಸಂಬಳವಾಯಿತು" ಎಂದಳು ಸಾವಿತ್ರಮ್ಮ

"ಎಷ್ಟು ಬಂದರೇನು ? ಹೊಲಸು ಜೀವನ ಪತ್ರಿಕೆಗಳಲ್ಲಿ ಅವರ ವಿಚಾರ ಓದಿದರೆ ಅಸಹ್ಯವಾಗುತ್ತದೆ" ಲತಾಂಗಿಯೆಂದಳು

"ಅದೇನು ನೀನು ಪತ್ರಿಕೆಯಲ್ಲಿ ಓದಿದ್ದು ?" ಸಾವಿತ್ರಮ್ಮ ಪ್ರಶ್ನಿಸಿದಳು

ಲತಾ ಉತ್ತರಕೊಡದಿದ್ದುದನ್ನು ಕಂಡು ರಮೇಶ್ ಕೆಲವು ದಿನಗಳ ಹಿಂದೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಜನರ ಮನವನ್ನು ಸೆಳೆದಿದ್ದ ಚಲನಚಿತ್ರ ಪ್ರಪಂಚದ ಕೆಲವು ಘಟನೆಗಳನ್ನು ವಿವರಿಸಿದ ಅಪ್ರಾಪ್ತ ವಯಸ್ಕಳಾದ ಸುಂದರ ನಟಿಯೊಬ್ಬಳ ಪೋಷಕ ಹಕ್ಕಿನ ವಿಚಾರವಾಗಿ ಅವಳ ತಂದೆ ತಾಯಿಗಳಿಗೆ ನಡೆಯುತ್ತಿದ್ದ ಕೋರ್ಟು ವ್ಯವಹಾರ, ಇನ್ನೊಬ್ಬ ನಟಿಯ ಅಪಹಾರ ಸಂಬಂಧದಲ್ಲಿ ನಿರ್ದೇಶಕ ನಿರ್ಮಾಪಕರ ಪಾತ್ರ, ಡ್ರೈವರೊಡನೆ ಮತ್ತೊಬ್ಬ ನಟಿಯ ಲಜ್ಜಾಸ್ಪದ ವರ್ತನೆ, ಒಂದು ಸ್ಟುಡಿಯೋದಲ್ಲಿ ಕೆಲಸಗಾರರು ಮತ್ತು ಅಭ್ಯಾಗತರ ಎದುರಿನಲ್ಲಿ ನಟಿಯೊಬ್ಬಳಿಗೂ ಮಾಲಿಕರಿಗೂ ನಡೆದ ಕಲಹ

ಇತ್ಯಾದಿ, ಇತ್ಯಾದಿ

"ಆದರೆ ಮದ್ರಾಸಲ್ಲಿರುವ ಕನ್ನಡ ನಟಿಯರಾರೂ ಇಂತಹ ಅಪವಾದ ಗಳಿಗೆ ಸಿಕ್ಕಿಲ್ಲ ವಿಖ್ಯಾತಿಯನ್ನಲ್ಲದಿದ್ದರೂ ಬೇರೆಯವರಿಗಿಂತ ಹೆಚ್ಚು ಗೌರವ ಗಳಿಸಿದ್ದಾರೆ"—ಎಂದು ರಮೇಶ್ ವಿವರಣೆಯನ್ನು ಮುಗಿಸಿದ

ಕಾರು ಚಲಿಸುತ್ತಿದ್ದಂತೆ ರಸ್ತೆಯ ವಿದ್ಯುದ್ದೀಪಗಳ ಬೆಳಕು ಒಂದೊಂದು ಸಾರಿ ಲತಾಂಗಿಯ ಮುಖದ ಮೇಲೆ ಬಿದ್ದು, ಅವಳ ಹೊಂಬ ಣ್ಣದ ಕೆನ್ನೆಗಳನ್ನೂ ರಂಗಾದ ತುಟಿಗಳನ್ನೂ ಕ್ಷಣಕಾಲ ಬೆಳಗಿ ಪುನಃ ಕತ್ತಲಾಗುತ್ತಿತ್ತು ಬೆಳಕು ಕತ್ತಲುಗಳ ಈ ಕಣ್ಣುಮುಚ್ಚಾಲೆಯಿಂದ ರಮೇಶನ ರಸಿಕತೆ ಕೆರಳಿತು ಅವನ ಕೈ ಬೆರಳುಗಳು ಮಲ್ಲಿಗೆಯಂತೆ ಕೋಮಲವಾಗಿ ಲತಾಂಗಿಯ ಭುಜಗಳನ್ನು ಮುಟ್ಟಿದವು ಆ ಸ್ಪರ್ಶದಿಂದ ಅವಳ ನಾಡಿಗಳಲ್ಲಿ ರಕ್ತದ ಗತಿ ಹೆಚ್ಚಿತು ತುಟಿಗಳು ಸ್ಫುರಿಸಿದವು ಕೆನ್ನೆ ಗಳು ಕೆಂಪಾದವು ಕಣ್ಣಿನ ಕೊನೆ ಆಕಾಂಕ್ಷೆಯಿಂದ ರಮೇಶನ ಕಡೆ ತಿರುಗಿತು. ಕತ್ತಲೆಯಲ್ಲಿ ಈ ಅನುಭಾವದ ಸ್ಫುರಣೆ ಸಾವಿತ್ರಮ್ಮನಿಗೆ ಕಾಣುವುದಿಲ್ಲವೆಂದು ಲತಾ ತನ್ನ ಕಾತರಚಿತ್ತವನ್ನು ಸಮಾಧಾನಮಾಡಿ ಕೊಂಡಳು ಮಧ್ಯಾಹ್ನ ರಮೇಶ್ ಚುಂಬಿಸಿದ್ದನ್ನು ಸಾವಿತ್ರಮ್ಮ ನೋಡಿ ದ್ದಳೆಂಬುದು ಅವಳಿಗೆ ತಿಳಿದಿರಲಿಲ್ಲ

"ಲತಾಂಗಿಯಂತಹ ವಿದ್ಯಾವತಿಯರು ನಟಿಯರಾಗಿ ಬಂದರೆ ಚಲನ ಚಿತ್ರೋದ್ಯಮ ಉತ್ತಮವಾಗುತ್ತದೆ"—ರಮೇಶ್ ಪುನಃ ಹೇಳಿದ

"ನನಗೆ ನಂಬಿಕೆಯಿಲ್ಲ ಬೊಂಬಾಯಿ ಕಲ್ಕತ್ತಾಗಳಲ್ಲಿ ವಿದ್ಯಾವತಿ ಯರಾದ ನಟಿಯರಿಲ್ಲವೇ? ಅಲ್ಲಿಯ ಸ್ಟುಡಿಯೋಗಳ ಸ್ಥಿತಿ ಮದ್ರಾಸಿಗಿಂತ ಹೊಲಸು ಎಂದು ಪತ್ರಿಕೆಗಳಲ್ಲಿ ಓದಿದ್ದೇನೆ"

"ಪತ್ರಿಕೆಗಳು ಬರೆಯುವುದೆಲ್ಲ ನಿಜವಲ್ಲ ಲತಾದೇವಿ. ಮದ್ರಾಸಂತೆ ಕಲ್ಕತ್ತಾ ಬೊಂಬಾಯಿಗಳಲ್ಲೂ ಒಳ್ಳೆ ಸ್ಟುಡಿಯೋಗಳೂ ಇವೆ, ಕೆಟ್ಟ ಸ್ಟುಡಿಯೋಗಳೂ ಇವೆ"

ಎಂದು ರಮೇಶ್ ಹೇಳುತ್ತಿದ್ದಂತೆ ಟ್ಯಾಕ್ಸಿ ಮನೆಯ ಮುಂದೆ ನಿಂತಿತು.

—೬.—

ರಮೇಶ್ ವಾಸಮಾಡುತ್ತಿದ್ದ ಬಂಗಲೆಯ ಮಾಲಿಕ ದೊಡ್ಡ ಶ್ರೀಮಂತ. ಅಂತಹ ಅನೇಕ ಮನೆಗಳು ಅವನಿಗೆ ಸೇರಿದ್ದವು ಪ್ರತಿ ತಿಂಗಳು ಸಾವಿರಾರು ರೂಪಾಯಿ ಬಾಡಿಗೆ ಬರುತ್ತಿತ್ತು ಕಾರಣ ಮನೆಯ ಹೊರಗಿನ ಬೈಲಲ್ಲಿ ಅಂಗಡಿ ಮುಂಗಟ್ಟುಗಳನ್ನು ಕಟ್ಟಿ ಇನ್ನೂ ಹೆಚ್ಚಿಗೆ ಬಾಡಿಗೆ ದುಡಿಯುವ ಪ್ರಯತ್ನ ಮಾಡದೆ ನೆರಳಿಗಾಗಿ ಮರ ಗಿಡಗಳನ್ನು ಹಾಕಿಸಿದ್ದ ಅವುಗಳಲ್ಲಿ ಒಂದು ನಾಗಸಂಪಿಗೆಯ ಮರವೂ, ರಾತ್ರಿ ರಾಣಿಯ ಕೆಲವು ಹೊದಿರುಗಳೂ ಇದ್ದವು ರಾಜಬೀದಿಯ ಪಾರ್ಶ್ವದ ಸಣ್ಣ ರಸ್ತೆಯಲ್ಲಿ ಇದ್ದದ್ದರಿಂದ ಬೀದಿಯ ಗಲಭೆಗಳೊಂದೂ ಇಲ್ಲದೆ ಮನೆ ಶಾಂತವಾಗಿತ್ತು

ಲತಾಂಗಿ ಹೊರಗಿನಿಂದ ಬೀಸುತ್ತಿದ್ದ ತಂಗಾಳಿಗೆ ಮೈಯೊಡ್ಡಿ ಕಿಟಕಿಯ ಮುಂದೆ ನಿಂತಿದ್ದಳು ತಂಬೂರಿಯ ಪಂಚಮ ಶೃತಿಯೊಡನೆ ಪ್ರತಿಮಧ್ಯಮದ ಝೇಂಕಾರ ಕಿವಿಯಲ್ಲಿ ಮಿಡಿದು ಭಾವದ ತೆರೆಗಳನ್ನು ಕೆರಳಿಸುವಂತೆ, ರಾತ್ರಿರಾಣಿಯ ಕೋಮಲ ಪರಿಮಳದೊಡನೆ ಮಿಳಿತವಾದ ನಾಗಸಂಪಿಗೆಯ ಕಟುಗಂಧ ಗಾಳಿಯೊಡನೆ ಬೆರೆತು, ಲತಾಂಗಿಯ ದೇಹವನ್ನು ತಾಕಿ ನರನಾಡಿಗಳ ಸುಪ್ತಕಾಮನೆಗಳನ್ನು ಜಾಗ್ರತಗೊಳಿಸಿದವು ರಕ್ತಚಲನೆ ತೀವ್ರವಾಗಿ ಮೈ ಕಾವೇರಿತು ಕುಪ್ಪಸದ ಗಂಟು ಬಿಗಿಯುತ್ತಿದ್ದಂತೆ ತೋರಿತು ಅನನ್ಯ ಮನಸ್ಕಳಾಗಿ ಗಂಟು ಬಿಚ್ಚಿ, ಮೇಜಿನ ಮೇಲಿದ್ದ ಡಬ್ಬಿಯಿಂದ ಪೌಡರ್ ತೆಗೆದು ಬೆವರಿಂದ ನೆನೆದಿದ ಸ್ತನಗಳ ಅಡಿಗೆ ಹಚ್ಚಿಕೊಂಡಳು ಮೈಗೆ ಅಂಟಿಕೊಂಡು ತೊಂದರೆಯಾಗಿ ಬಹುದೆಂದು ಕಪ್ಪುಸ ತೆಗೆದು ಹಾಸಿಗೆಯ ಮೇಲೆ ಬಿಸಟಳು ಆ ನಿಭೃತ ನಿಶೀಥದಲ್ಲಿ ಅವಳ ಅಂಗಗಳು ಪ್ರಣಯ ಸ್ಪರ್ಶಕ್ಕಾಗಿ ಕಾತುರಗೊಂಡಿದ್ದವು

ಕೊಟಡಿಯಲ್ಲಿ ದೀಪವನ್ನು ತಾನೇ ಆರಿಸಿದ್ದಳು ಕಿಟಕಿಯ ಹೊರಗಡೆ ಬೀದಿಯ ದೀಪಗಳ ದೂರದ ಬೆಳಕಿನಲ್ಲಿ ಮರಗಿಡಗಳು ವಿಚಿತ್ರಾಕೃತಿಯ ಹೊದಿರುಗಳಂತೆ ಕಾಣುತ್ತಿದ್ದವು ಆ ಇರುಳಿನ ತೋಟದಂತೆ ತನ್ನ ಜೀವನವೂ ವಿವರಿಸಲಾಗದ ದುಃಖದ ಹೊದಿರುಗಳಿಂದ ತುಂಬಿರುವುದಾಗಿ ಅವಳು ಭಾವಿಸಿದಳು ಮದುವೆಯಾಗಿ ಅತ್ತೆಯ ಮನೆಯಲ್ಲಿದ್ದ ಕೆಲವು

ತಿಂಗಳುಗಳ ಬಾಳು ದುಃಸ್ವಪ್ನದಂತೆ ಅವಳನ್ನು ನಡುಗಿಸಿತು. ಹೊರಗೆ ಬಂದು ಗಂಡನೊಡನೆ ಬೇರೆ ಸಂಸಾರ ಹೂಡಿದಳು ಗಂಡ ತರುತ್ತಿದ್ದ ಸಂಬಳ ತಿಂಗಳಲ್ಲಿ ಎರಡು ವಾರಕ್ಕೂ ಸಾಲುತ್ತಿರಲಿಲ್ಲವಾದ್ದರಿಂದ ತಾನೂ ಕೆಲಸ ಹುಡುಕಬೇಕಾಯಿತು ಹೆಂಡತಿ ಸಂಪಾದಿಸುವಳೆಂದೂ, ತನ್ನ ಸಹಾಯವಿಲ್ಲದೆ ಸಂಸಾರ ನಿರ್ವಹಿಸಬಲ್ಲಳೆಂದೂ ತಿಳಿದ ಮೇಲೆ ಗಂಡ ಕೊಡುತ್ತಿದ್ದ ಹಣವನ್ನು ನಿಲ್ಲಿಸಿದ ಆ ಮೇಲೆ ತಂದೆಯ ಮರಣದಿಂದ ಆಗಿಂದಾಗ್ಯೆ ದೊರಕುತ್ತಿದ್ದ ಸಹಾಯ ನಿಂತದ್ದಲ್ಲದೆ ತಾಯಿ ಮನೆಗೆ ಬಂದದ್ದು, ಅದರಿಂದ ಸಂಸಾರದಲ್ಲಾದ ಬವಲಾವಣೆ, ಪ್ರತಿನಿತ್ಯದ ಜಗಳ-ಇವುಗಳನ್ನು ನೆನಸಿಕೊಂಡಾಗ ಲತಾಂಗಿಯ ದೃಷ್ಟಿ ಸ್ತಬ್ಧವಾಯಿತು ಮನಸ್ಸು ಸುರುಗಿತು ಈ ಕಾರ್ಮೋಡದ ಮಧ್ಯ ಮಿಂಚಿನ ಕೊನೆಯೊಂದರೆ ಒಂದು ದಿನ ರಾತ್ರಿ ಜೋಷಿಯೊಡನೆ ಕಳೆದ ಕೆಲವು ಗಂಟೆಗಳು ಪ್ರೇಮದ ಆವೇಶದಲ್ಲಿ ಆಗ ಅವಳು ತನ್ನ ಮನಸ್ಸು ದೇಹಗಳ ಸೌಂದರ್ಯಗಳೆರಡನ್ನೂ ಅವನ ಮುಂದೆ ಹರಡಿದಳು ಆದರೆ ಜೋಷಿ, ಸರಳ ಹೃದಯದ ಜೋಷಿ ಸ್ನೇಹಮಯವಾದ ದೃಢಚಿತ್ತದಿಂದ ಅವಳನ್ನು ನಿರಾಕರಿಸಿದನು ಮನಸ್ಸಿನ ಕಾಮನೆ ವಿಫಲವಾಯಿತು

ಲತಾಂಗಿ ಹಾಸಿಗೆಯ ಮೇಲೆ ಮಲಗಿ ಚಿಂತಿಸುತ್ತಿದ್ದಂತೆ ಜೋಂಪು ಹತ್ತಿತು ಅರ್ಧ ನಿದ್ರೆ ಅರ್ಧ ಜಾಗ್ರದವಸ್ಥೆಯಲ್ಲಿ ಯಾರೋ ರೂಮಿನೊಳಗೆ ಬಂದಂತೆ ಭಾವಿಸಿ ಕಣ್ಣು ತೆರೆದಳು ಯಾರೂ ಇರಲಿಲ್ಲ ಮನಸ್ಸಿನ ಭ್ರಾಂತಿಯೆಂದು ತಿಳಿದು ಸುಮ್ಮನಾದಳು ರಮೇಶನಿಗಾಗಿ ಮನಸ್ಸು ಕಾತುರಗೊಂಡಿರುವುದನ್ನು ಕಂಡು ತನ್ನ ಮೇಲೆ ತಾನೇ ಕೋಪಗೊಂಡಳು

ಹೆಣ್ಣಿನ ಪ್ರಕೃತಿಯಲ್ಲಿ ಪರಸ್ಪರ ವಿಭಿನ್ನವಾದರೂ ವಿರುದ್ಧವಲ್ಲದ ಎರಡು ಪ್ರತ್ಯೇಕ ಗುಣಗಳಿರುವುದಾಗಿ ಮನಶ್ಶಾಸ್ತ್ರಜ್ಞರ ಅಭಿಪ್ರಾಯ ಒಂದು ತಾಯ್ತನದ ಅಸೀಮ ಪ್ರೇಮ, ಮತ್ತೊಂದು ವಾರಾಂಗನೆಯ ವಿಲಾಸ-ಕಾಂಕ್ಷೆ ಹೆಣ್ಣಿನ ಪ್ರತಿಯೊಂದು ಭಾವನೆಕರ್ಮಗಳೂ ವ್ಯಕ್ತಿ ಮತ್ತು ಸಮಯಗಳನ್ನು ಅನುಸರಿಸಿ ಮೇಲಿನ ಎರಡು ಗುಣಗಳಲ್ಲಿ ಯಾವುದಾದರು ಒಂದರಿಂದ, ಅಥವಾ ಎರಡರ ಸಮ್ಮಿಶ್ರಣದಿಂದ ಪ್ರಚೋದನೆ ಪಡೆಯುವುದು ಆ ದಿನ ಬೆಳಗಿನಿಂದ ನಡೆದ ಘಟನೆಗಳು ಲತಾಂಗಿಯ

ವಿಲಾಸಾಕಾಂಕ್ಷೆಯನ್ನು ಎಚ್ಚರಿಸಿ ವೈಶಿಕ ವೃತ್ತಿ ಚಲಿಸುವಂತೆ ಮಾಡಿದ್ದವು. ಸಭೆಯಲ್ಲಿ ಅಲಂಕೃತರಾದ ಸ್ತ್ರೀ ಪುರುಷರ ಸಾಮೂಹಿಕ ಸಂಮರ್ದದಿಂದ ಜಾಗ್ರತವಾದ ಸುಖಾನುಭವರೂಪವಾದ ಆನಂದ, ಟ್ಯಾಕ್ಸಿಯಲ್ಲಿ ರಮೇಶ ನಂತಹ ಯುವಾಪುರುಷನ ಸಾಮೀಪ್ಯ, ಅವನ ಚುಂಬನ ಸ್ಪರ್ಶಗಳಲ್ಲಿ ವ್ಯಕ್ತವಾಗಿದ್ದ ಪ್ರೇಮ, ಇವುಗಳಿಂದ ಲತಾಂಗಿಯ ಮನಸ್ಸೂ, ದೇಹವೂ ಬೆಳಗಿನ ಹೂಗಳಂತೆ ಅರಳುತ್ತಿದ್ದುವು ರಾತ್ರಿರಾಣಿಯ ಮೋಹಕಗಂಧದಿಂದ ಪರಿಮಳಿತವಾದ ತಂಗಾಳಿ, ಆ ಅಲರಿಕೆ ಸಹಸ್ರಮುಖವಾಗಿ ಅವಳ ಅಂಗಾಗ ಗಳನ್ನು ವ್ಯಾಪಿಸುವಂತೆ ಮಾಡಿತ್ತು ಪ್ರಣಯಿಯ ಆಲಿಂಗನಕ್ಕಾಗಿ ಅವು ಕಾತರಗೊಂಡಿದ್ದುವು

ಆದರೆ ರಮೇಶ್ ಕರೆಯದೆ ತಾನಾಗಿ ಬರುವುದಿಲ್ಲವೆಂದು ಅವಳ ಅಂತಃ ಕರಣ ಹೇಳಿತು ಮನಸ್ಸಿನ ನೀರವ ಆಘಾತಪ್ರತಿಘಾತಗಳನ್ನು ಸ್ತ್ರೀಯರು ಪುರುಷರಿಗಿಂತ ಸುಲಭವಾಗಿ ಅರಿಯಬಲ್ಲರು ರಮೇಶನ ಮನಸ್ಸಿನ ಭಾವನೆ ಗಳನ್ನು ಲತಾಂಗಿ ತೆರೆದಿಟ್ಟ ಪುಸ್ತಕದಂತೆ ಓದಿಕೊಂಡಳು. ತನ್ನ ಸೌಂದ ರ್ಯಕ್ಕೆ ಸಲ್ಲಬೇಕಾದ ಉಪಾಸನೆಯನ್ನು ಅವನು ನಿರ್ವಂಚನೆಯಿಂದ ಆಗಲೆ ಸಲ್ಲಿಸಿದ್ದಾನೆ. ಪ್ರಾತಃಕಾಲ ನಿಲ್ದಾಣದಲ್ಲಿ ಮೊದಲು ಕಂಡಾಗಿನಿಂದ ಅವನ ವರ್ತನೆ ಆ ಉಪಾಸನೆಯ ವ್ಯಕ್ತರೂಪವೆಂದೂ, ಅದರ ಮುಂದಿನ ಗತಿಯನ್ನು ಹೆಣ್ಣಿನ ಇಚ್ಛೆಗೆ ಬಿಡುವುದು ರಮೇಶನ ಉದ್ದೇಶವೆಂದೂ ಲತಾಂಗಿ ತಿಳಿದು ಕೊಂಡಳು ಪ್ರೇಮಕ್ಕಾಗಿ ಬೇಡುವುದು ಪುರುಷನಲ್ಲಿ ದೌರ್ಬಲ್ಯದ ಸೂಚನೆ ಯೆಂಬುದನ್ನು ಅವಳು ಅರಿತಿದ್ದಳು ತನ್ನ ಪತಿ ತನ್ನನ್ನು ಯಾವುದಕ್ಕಾಗಿ ಅಂಗಲಾಚಿ ಕಾಡಿಬೇಡುತ್ತಿದ್ದನೋ ಅದು ಹೂವಿನ ಅಲರಿಕೆಯಷ್ಟೇ ಸಹಜ ವಾಗಿ ಸ್ತ್ರೀ ಪುರುಷರ ಸಹವಾಸದಲ್ಲಿ ಉದಯಿಸುವ ಭಾವಪರಾಕಾಷ್ಠೆಯೆಂದು ಜೋಷಿ ಹೇಳುತ್ತಿದ್ದುದು ಅವಳಿಗೆ ನೆನಪಾಯಿತು ತಾನಾಗಿ ಮುಂದೆ ಹೆಜ್ಜೆ ಇಡದೆ ಹೋದರೆ ರಮೇಶನಲ್ಲಿ ತನ್ನ ಕಾಮನೆ ವಿಫಲವಾಗುವುದೆಂದು ಅವಳು ಭಾವಿಸಿದಳು.

ಲತಾಂಗಿ ಮಲಗಿದ್ದ ಕೊಟಡಿಯ ಪಾರ್ಶ್ವದಲ್ಲಿ ನಡುಮನೆ. ಅದರ ಮತ್ತೊಂದು ಕೊನೆಗೆ ಬೀದಿಯ ಕಡೆಗೆ ರಮೇಶನ ಕೋಣೆ ಲತಾಂಗಿ ಮಂಚದಿಂದಿಳಿದು ನಡುಮನೆಗೆ ಬಂದಳು. ಅಲ್ಲಿ ಯಾರೂ ಇರಲಿಲ್ಲ.

ಸಾವಿತ್ರಮ್ಮ ಹಿಂಭಾಗದ ವರಾಂಡದಲ್ಲಿ ಮಲಗುತ್ತಿದ್ದಳು ರಮೇಶನ ಕೊಟಡಿಯ ಬಾಗಿಲು ತೆರೆದಿತ್ತು. ಒಳಗೆ ಸಣ್ಣದಾಗಿ ದೀಪ ಉರಿಯುತ್ತಿತ್ತು. ಲತಾಂಗಿ ಮೆಲ್ಲನೆ ಹೆಜ್ಜೆಯಿಡುತ್ತಾ ನಡುಮನೆಯನ್ನು ಹಾದು ರಮೇಶನ ಕೊಟಡಿಗೆ ಹೋದಳು.

ರಮೇಶ ಮಂಚದ ಮೇಲೆ ಅರ್ಧಶಾಯಿತನಾಗಿ ಮಲಗಿ ಮಸಕಾದ ದೀಪದ ಬೆಳಕಿನಲ್ಲಿ ಯಾವುದೋ ಪುಸ್ತಕ ಓದುತ್ತಿದ್ದ ಲತಾಂಗಿಯನ್ನು ನೋಡಿ ಅವನು ಗೋಡೆಯ ಕಡೆ ಸರಿದು ಹಾಸಿಗೆಯ ಮೇಲೆ ಸ್ಥಳ ಮಾಡಿ ಕೊಟ್ಟ ಸ್ವಾಗತದ ಸಭ್ಯತಾಪೂರ್ಣವಾದ ಸಹಜ ಗೌರವದ ಹೊರತಾಗಿ ಅವನ ಕಣ್ಣುಗಳಲ್ಲಿ ಮತ್ತಾವ ಭಾವನೆಯೂ ಇರಲಿಲ್ಲ

ಲತಾಂಗಿ ಪಾರ್ಶ್ವದಲ್ಲಿ ಕುಳಿತು "ನೀವು ಬರಲಿಲ್ಲ, ನಾನೇ ಬಂದೆ" ಎಂದಳು

ಅವಳ ಮಿಂಚುವ ಕಣ್ಣುಗಳನ್ನು, ಸ್ಫುರಿಸುವ ತುಟಿಗಳನ್ನು ರಮೇಶ ತದೇಕ ದೃಷ್ಟಿಯಿಂದ ನೋಡುತ್ತಿದ್ದ. ಕಂಚುಕವಿಲ್ಲದ ಅವಳ ವಕ್ಷ, ಹಂಸ ಮಿಥುನವೊಂದು ಕ್ರೀಡಿಸುವ ತಾವರೆಯ ಕೊಳದಂತೆ ಕಂಗೊಳಿಸುತ್ತಿತ್ತು. ವಾರಾಂಗನೆಗೆ ಸಹಜವಾದ ಕೃತಕ ವಿಭ್ರಮದಿಂದ ಅವಳು ಮೈ ಕುಲಕಿಸಿ ಕಾಮನೆಯ ಲಜ್ಜಾಶೂನ್ಯ ಕಾತುರ ದೃಷ್ಟಿಯಿಂದ ರಮೇಶನ ಮುಖವನ್ನು ನೋಡಿದಳು.

"ಸ್ತ್ರೀಣಾಂ ಚ ಚಿತ್ತಂ ಪುರುಷಸ್ಯ ಭಾಗ್ಯಂ"

ಎಂದು ಹೇಳುತ್ತ ರಮೇಶ ಅವಳನ್ನು ತೋಳಸೆರೆಯಲ್ಲಿ ಬಂಧಿಸಿದ.

— ೭ —

ಅಧಿವೇಶನ ಮುಗಿದು ನಾಲ್ಕುದಿನಗಳಾದರೂ ಲತಾಂಗಿ ಮದ್ರಾಸಿಂದ ಕದಲಲಿಲ್ಲ ಏನಾದರೊಂದು ಕಾರಣದಿಂದ ಪ್ರತಿದಿನ ಪ್ರಯಾಣ ಮುಂದು ವರಿಯುತ್ತಿತ್ತು. ರಮೇಶನೊಡನೆ ಲತಾಂಗಿಯ ಗೆಳೆತನ ತಿಳಿದ ಮೇಲೆ ಸಾವಿತ್ರಮ್ಮ ಅವಳನ್ನು ಹೆಚ್ಚು ಆದರದಿಂದ ನೋಡಿದಳು ರಮೇಶ ಮತ್ತು

ಲತಾಂಗಿಯರ ಮಧ್ಯೆ ಅಂಕುರಿಸಿದ್ದ ಪ್ರೇಮಲತೆ ಸೊಂಪಾಗಿ ಬೆಳೆಯಲು ಪ್ರತ್ಯಕ್ಷವಾಗಿ ಪರೋಕ್ಷವಾಗಿ ತನ್ನಿಂದಾಗುವ ಎಲ್ಲ ಸಹಾಯವನ್ನೂ ಅವಳು ಮಾಡಿದಳು ಅನಂತಯ್ಯಕೂಡಾ ಸಾವಿತ್ರಮ್ಮನಿಗೆ ಸಹಾಯಕನಾದ ಇವರ ಆದರ ಪರಿಚರ್ಯೆಗಳಿಂದ ರಮೇಶನ ಪ್ರಣಯೋಪಾಸನೆ ಸುಲಲಿತವಾಗಿ, ಲತಾಂಗಿಯ ಮದ್ರಾಸ್ ಪ್ರವಾಸ ಆನಂದಮಯವಾಗಿ ಕಳೆಯಿತು

ಕೊನೆಗೆ ಒಂದು ವಾರದ ಮೇಲೆ ಮರುದಿನ ಮಧ್ಯಾಹ್ನದ ಎಕ್ಸ್‌ಪ್ರೆಸ್ ಗಾಡಿಗೆ ಬೆಂಗಳೂರಿಗೆ ಹೊರಡಬೇಕೆಂದು ಗೊತ್ತಾಯಿತು ಅಂದು ಸಂಜೆ ರಮೇಶ್ ಮನೆಗೆ ಬರುತ್ತಾ ತನ್ನ ಪರಿಚಿತರೊಬ್ಬರ ಅಂಗಡಿಯಿಂದ ಕೆಲವು ಸೀರೆ ಕುಪ್ಪಸಗಳನ್ನು ಸಂಗಡ ತಂದು ಬೇಕಾದನ್ನು ಆರಿಸಿಕೊಳ್ಳುವಂತೆ ಲತಾಂಗಿಗೆ ಹೇಳಿದ ಲತಾಂಗಿ ತನಗೇನೂ ಬೇಡವೆಂದರೂ ಸಾವಿತ್ರಮ್ಮ ಬಿಡಲಿಲ್ಲ "ಮನೆಗೆ ಬಂದ ಹೆಂಗಸು ಬರಿಗೈಯಲ್ಲಿ ಹೋಗುವುದೇ ?" ಎಂದು ಹೇಳಿ ಒತ್ತಾಯಪಡಿಸಿದಳು "ನಿಮ್ಮ ಅಳಿಯ ದೇವರಿಂದ ಬೇಕಾದ ಉಡುಗೊರೆ ಪಡೆದಿದ್ದೇನೆ" ಎಂದು ಲತಾ ಮನಸ್ಸಿನಲ್ಲಿ ಭಾವಿಸಿಕೊಂಡಳು ಪ್ರಕಟವಾಗಿ "ನಿಮ್ಮ ಆದರಕ್ಕಾಗಿ ನಾನು ಕೃತಜ್ಞಳು ಅತ್ತೆ" ಎಂದು ಹೇಳಿ ತಿಳಿಯಾದ ನೀಲಿ ಬಣ್ಣದ ಜಾರ್ಜೆಟ್ ಸೀರೆ ಮತ್ತು ಅಂತಹುದೇ ಕುಪ್ಪಸವೊಂದನ್ನು ಆರಿಸಿಕೊಂಡಳು

ಮಧ್ಯಾಹ್ನ ರಮೇಶ್ ತಾನೇ ರೈಲಿಗೆ ಬಂದು ಲತಾಂಗಿಯನ್ನು ಬೀಳ್ಕೊಂಡ ಅವಳಿಗಾಗಿ ಎರಡನೆ ತರಗತಿಯ ಸ್ಥಾನವೊಂದು ಕಾದಿಡಲಾಗಿತ್ತು. ಗಾಡಿಯಲ್ಲಿ ಕುಳಿತುಕೊಂಡ ಮೇಲೆ ರಮೇಶ್ ಕೈಯಲ್ಲಿದ್ದ ಪೊಟ್ಟಣವನ್ನು ಬಿಚ್ಚಿ ಲತಾಂಗಿಯ ಮುಂದಿಟ್ಟ ಚಮಕಿ ಕೆಲಸ ಮಾಡಿದ ನೀಲಿ ಬಣ್ಣದ ಚಪ್ಪಲ್! "ನೀಲಿ ಸೀರೆಗೆ ಸರಿಯಾಗುವಂತೆ ಇವುಗಳನ್ನು ತಂದೆ ಲತಾ" ಎಂದ.

"ನನಗಾಗಿ ನೀವು ಇಷ್ಟೆಲ್ಲಾ ಏಕೆ ಖರ್ಚು ಮಾಡುತ್ತೀರಿ ?"

"ನನ್ನ ಮನಸ್ಸು ನಿನ್ನದು. ನನ್ನ ಸರ್ವಸ್ವ ನಿನ್ನದು. ಒಂದು ಜೊತೆ ಚಪ್ಪಲಿ ಹೆಚ್ಚೇ ?"

ಲತಾಂಗಿಯ ಕಣ್ಣುಗಳು ಪ್ರೇಮದ ಅದೃಶ್ಯ ಕಿರಣಗಳನ್ನು ಸೂಚಿಸಿದವು. ಅಷ್ಟರಲ್ಲಿ ಮತ್ತಿಬ್ಬರು ಹೆಂಗಸರು ಗಾಡಿಯೊಳಗೆ ಬಂದರು.

ಸ್ವಲ್ಪಹೊತ್ತು ಸುಮ್ಮನಿದ್ದು ಲತಾ ಕೇಳಿದಳು “ ನೀವು ಬೆಂಗಳೂರಿಗೆ ಯಾವಾಗ ಬರುತ್ತೀರಿ ? ”

“ ಪತ್ರ ಬರೆಯುತ್ತೇನೆ  ಉತ್ತರ ಕೊಡಲು ಮರೆಯಬೇಡ ”

ಕಛೇರಿಯ ವಿಳಾಸಕ್ಕೆ ಬರೆಯುವಂತೆ ಲತಾ ಹೇಳಿದಳು

ರೈಲು ಕದಲುತ್ತಿದ್ದಂತೆ ತನ್ನ ದಾಂಪತ್ಯ ಜೀವನದ ದುಃಖದ ನೆನಪು ಲತಾಂಗಿಯನ್ನು ಚುಚ್ಚತೊಡಗಿತು

## ಎರಡನೆಯ ತರಂಗ

— ೧ —

ಲತಾಂಗಿಯ ಪತನ ವಾಸ್ತವದಲ್ಲಿ ಪ್ರಾರಂಭವಾದದ್ದು ಈಗಾಗಲೇ ವರ್ಣಿಸಲ್ಪಟ್ಟ ಘಟನೆಗಳು ನಡೆಯುವುದಕ್ಕೆ ಸುಮಾರು ಎರಡು ವರ್ಷಗಳ ಹಿಂದೆ ಮೈಸೂರಲ್ಲಿ, ಅಂಬುಜಮ್ಮನ ಮನೆಯಲ್ಲಿ

ಅಂಬುಜಮ್ಮ ಆ ಪ್ರದೇಶದ ಪಾಠಶಾಲೆಯೊಂದರಲ್ಲಿ ಪ್ರಧಾನ ಅಧ್ಯಾಪಕಿಯಾಗಿ ನಿವೃತ್ತೆಯಾಗಿದ್ದಳು ವಿಸ್ತರಣದಲ್ಲಿ ಅವಳ ಮನೆ ನಿರುದ್ಯೋಗಿಗಳಾದ ವಿದ್ಯಾವತಿ ಯುವತಿಯರು, ಕಲಾವಿಲಾಸಿನಾಟಕ ಸಂಸ್ಥೆಗಳ ನಟ, ನಟಿ, ವ್ಯವಸ್ಥಾಪಕರು, ಸಂಗೀತ ಅಭಿನಯ ಭರತನಾಟ್ಯಗಳಲ್ಲಿ ಅಭಿರುಚಿಯುಳ್ಳ ಕಲಾವಿದರು, ವಿಹಾರ ವಿಲಾಸಗಳಿಗಾಗಿ ನೀರಿನಂತೆ ಹಣ ಸುರಿಯಬಲ್ಲ ರಸಿಕ ಶ್ರೀಮಂತರು ಮುಂತಾದವರಿಗೆ ಅಂಬುಜಮ್ಮನ ಮನೆ ಸಂಕೇತ ಸ್ಥಾನವಾಗಿತ್ತು. ವಿಲಾಸಿನಿಯಾದ ವಿದ್ಯಾರ್ಥಿನಿಯೊಬ್ಬಳನ್ನು ಕಂಡಾಗ "ಇವಳು ಅಂಬುಜಮ್ಮನ ಮನೆ ಗಿರಾಕಿ" ಎಂದು ರಸಿಕ ಯುವಕರು ಹೇಳುತ್ತಿದ್ದರು ಈ ಆಕರ್ಷಣೆಯಿದ್ದದ್ದರಿಂದ ಪ್ರತಿದಿನ ಸಂಜೆ ಮನೆಯಮುಂದೆ ನಾಲ್ಕಾರು ಮೋಟಾರ್ ವಾಹನಗಳು ನಿಂತಿರುತ್ತಿದ್ದವು ಅಂತಸ್ತು ಗೌರವಗಳ ಮರೆಯಲ್ಲಿ ಗುಟ್ಟಾಗಿ ನಡೆಯುತ್ತಿದ್ದ ಈ ವ್ಯವಹಾರದಿಂದ ಅಂಬುಜಮ್ಮ ಹೆಚ್ಚು ಹಣ ಗಿಟ್ಟಿಸಿದ್ದಳೆಂಬ ಅಪವಾದವೂ ಆ ಪ್ರದೇಶದ ಜನರಲ್ಲಿ ಹರಡಿತ್ತು

ಅಂಬುಜಮ್ಮನ ಮನೆಗೆ ಬರುತ್ತಿದ್ದ ರಸಿಕ ವರ್ಗದಲ್ಲಿ ಲೀಲಾಧರ ಜೋಷಿಯೂ ಒಬ್ಬ ಪ್ರಾಂತೀಯ ಭಾಷೆಗಳ ಪ್ರಾಮುಖ್ಯತೆಯನ್ನು ಅರಿತ ಮದ್ರಾಸಿನ ಪತ್ರಿಕೋದ್ಯಮಿ ಶ್ರೀಮಂತ ಸೇಟೊಬ್ಬನು ತನ್ನ ಮಾಲಿಕತ್ವದಲ್ಲಿ ಆ ಮೊದಲೇ ನಡೆಯುತ್ತಿದ್ದ ಆಂಗ್ಲ, ತಮಿಳು, ತೆಲುಗು ಪತ್ರಿಕಾಶ್ರೇಣಿಗೆ

ಕನ್ನಡ ಪತ್ರಿಕೆಯೊಂದನ್ನೂ ಸೇರಿಸಿ ಶೃಂಖಲೆಯನ್ನು ಪೂರೈಸುವ ಉದ್ದೇಶ ದಿಂದ ಬೆಂಗಳೂರಲ್ಲಿ ಆಧುನಿಕ ಮಾದರಿಯ ಅಚ್ಚುಕೂಟವನ್ನು ಸ್ಥಾಪಿಸಿ ಜೋಷಿ ಸಂಪಾದಕತ್ವದಲ್ಲಿ "ವಿಶ್ವಮಿತ್ರ" ದೈನಂದಿನ ಪತ್ರಿಕೆಯನ್ನು ಪ್ರಾರಂಭಿಸಿದ ಜೋಷಿ ಕನ್ನಡಿಗನಾದರೂ ಕನ್ನಡ ಪತ್ರಿಕೆಯ ಸಂಪಾದಕ ನಾದದ್ದು ಅದೇ ಮೊದಲನೆಯ ಸಾರಿ ಇಪ್ಪತ್ತು ವರ್ಷಗಳ ಕಾಲ ಬೊಂಬಾಯಿನ ಆಂಗ್ಲ ದಿನಪತ್ರಿಕೆಯೊಂದರ ಪ್ರತಿನಿಧಿಯಾಗಿ ದೇಶ ವಿದೇಶ ಗಳಲ್ಲಿ ಸಂಚಾರ ಮಾಡಿ ಆಧುನಿಕ ರಾಜಕೀಯ ವಿಚಾರಗಳಲ್ಲಿ ಅವನು ಪಡೆದಿದ್ದ ಅನುಭವ ಈ ಸಂದರ್ಭದಲ್ಲಿ ಸಹಾಯಕವಾಯಿತು ಪ್ರಾರಂಭ ವಾದ ಕೆಲವು ದಿನಗಳಲ್ಲಿಯೇ "ವಿಶ್ವ ಮಿತ್ರ" ಕನ್ನಡ ನಾಡಿನ ಎಲ್ಲ ಪ್ರದೇಶ ಗಳಲ್ಲಿಯೂ ಜನಪ್ರಿಯವಾಗಿತ್ತು ಇದರಿಂದ ಉತ್ತೇಜಿತನಾದ ಶ್ರೀಮಂತ ಮಾಲಿಕ ಜೋಷಿಯ ಮಾಸಿಕ ವೇತನವನ್ನು ಆರು ತಿಂಗಳಲ್ಲಿ ಎಂಟು ನೂರರಿಂದ ಸಾವಿರ ರೂಪಾಯಿಗಳಿಗೆ ಹೆಚ್ಚಿಸಿದ ಸಂಪಾದಕತ್ವದಂತೆ ಪತ್ರಿಕೆಯ ಆಡಳಿತ ಮತ್ತು ಪ್ರಚಾರ ಕಾರ್ಯಗಳೂ ಜೋಷಿಯ ಮೇಲೆ ಬಿದ್ದದ್ದರಿಂದ ತಿಂಗಳಿಗೆ ಒಂದು ಸಾರಿಯಾದರೂ ಅವನು ಮೈಸೂರಿಗೆ ಬಂದು ಹೋಗ ಬೇಕಾಗಿತ್ತು ಈ ಸಾರಿ ಅಸೆಂಬ್ಲಿ ಅಧಿವೇಶನಕ್ಕೆ ಪ್ರಭುತ್ವದ ಅತಿಥಿಯಾಗಿ ಬಂದದ್ದರಿಂದ ಕೆಲವು ದಿನಗಳು ಹೆಚ್ಚಿಗೆ ನಿಲ್ಲುವ ಅವಶ್ಯಕತೆ ಯುಂಟಾಯಿತು

ಆದಿನ ಜೋಷಿ ಬಂದಾಗ ಅಂಬುಜಮ್ಮನ ಸಮೀಪ ಬಂಧು ರಂಗಣ್ಣನ ಹೊರತಾಗಿ ಮನೆಯಲ್ಲಿ ಮತ್ತಾರೂ ಇರಲಿಲ್ಲ. ಒಳಗೆ ಇಬ್ಬರು ಯುವತಿ ಯರು ಸುಳಿಯುತ್ತಿದ್ದುದನ್ನು ಜೋಷಿಯ ಚುರುಕಾದ ಕಣ್ಣುಗಳು ಕೆಲವು ನಿಮಿಷಗಳೊಳಗಾಗಿ ಕಂಡುಹಿಡಿದವು ಅರ್ಥಗರ್ಭಿತವಾದ ದೃಷ್ಟಿಯಿಂದ ಅವನು ಅಂಬುಜಮ್ಮನ ಮುಖ ನೋಡಿದ. ಅಂಬುಜಮ್ಮ ಏನೋ ಹೇಳು ತ್ತಿದ್ದವಳು ಮಾತು ಹೊರಳಿಸಿ ನುಡಿದಳು

"ಜೋಷಿಯವರೇ, ನೀವು ಈ ದಿನ ಬಂದದ್ದು ಒಳ್ಳೇದಾಯಿತು. ನಿಮ್ಮನ್ನೊಂದು ಮಾತು ಕೇಳಬೇಕಾಗಿದೆ ಮದುವೆಯಾದ ಗಂಡ ಅನ್ನ ಬಟ್ಟೆಕೊಡಲು ನಿರಾಕರಿಸಿದರೆ ಜೀವನ ನಿರ್ವಾಹಕ್ಕೆ ಹೆಂಡತಿಯೇನು ಮಾಡಬೇಕು? ಕನಿಷ್ಟವರ್ಗದವರು ಕೂಲಿನಾಲಿ ಮಾಡಿ ಜೀವಿಸಬಹುದು.

ಶ್ರೀಮಂತರಿಗೆ ತೌರುಮನೆಯಲ್ಲಿ ಆಶ್ರಯ ದೊರಕುತ್ತದೆ ಇಂತಹ ತೊಡಕಿನಲ್ಲಿ ಬಿದ್ದ ಮಧ್ಯಮವರ್ಗದ ವಿದ್ಯಾವತಿಯರ ಗತಿಯೇನು ? ಅವರಿಗೆ ಈಗಿನ ಸರ್ಕಾರ ಏನಾದರೂ ಕೆಲಸ ಕೊಡುತ್ತದೆಯೇ ?"

"ಕೆಲಸಗಳಿಗೇನು ಕಡಿಮೆ ? ಉಪಾಧ್ಯಾಯನಿಯೋ, ನರ್ಸೋ, ಅಥವಾ ಗುಮಾಸ್ತೆಯೋ ಆಗಬಹುದು ಅನುಕೂಲವಿದ್ದರೆ ವಿದ್ಯಾಭ್ಯಾಸ ಮುಂದುವರೆಸಿ ವೈದ್ಯ ಅಥವಾ ವಕೀಲಿ ವೃತ್ತಿಗೆ ಪ್ರಯತ್ನಿಸಬಹುದು ಸಾಕಾದಷ್ಟು ಲೇಡಿ ಡಾಕ್ಟರುಗಳು ಸಿಕ್ಕುತ್ತಿಲ್ಲವೆಂಬ ಕೂಗು ಇದ್ದೇ ಇದೆ ಈಗೀಗ ಮಹಿಳೆಯರು ವಕೀಲರಾಗಿ ಬರುತ್ತಿದ್ದಾರೆ"

"ಸಮಸ್ಯೆಯ ಒಂದು ಮುಖದ ಪರಿಹಾರ ನೀವು ಹೇಳುತ್ತೀರಿ. ಗಂಡನ ವಿಚಾರವೇನು ? ಬಿಡುವುದೇ ಅಥವಾ ಸಂಸಾರಮಾಡುವುದೇ ?"

ಅಂಬುಜಮ್ಮನ ಪ್ರಶ್ನೆಯಿಂದ ಜೋಷಿಯ ಮುಖದಲ್ಲಿ ಮಿದುನಗೆ ತಲೆದೋರಿತು ಅವನೆಂದನು "ನಿಮ್ಮ ಪ್ರಶ್ನೆಗೆ ಪುರುಷರಿಗಿಂತ ಸ್ತ್ರೀಯರು ಸರಿಯಾದ ಉತ್ತರಕೊಡಬಲ್ಲರು ಅದು ಪ್ರತಿಯೊಬ್ಬ ಹೆಂಗಸೂ ತಾನೇ ನಿರ್ಧರಿಸಿಕೊಳ್ಳಬೇಕಾದ ವಿಚಾರ ತಾವು ದುಡಿದು ಗಂಡನನ್ನು ಸಾಕುವ ಹೆಂಗಸರೂ ಇದ್ದಾರ ಬಿಡುವುದು, ಕಟ್ಟಿಕೊಳ್ಳುವುದು ಗಂಡಹೆಂಡಿರ ಪ್ರೇಮವನ್ನವಲಂಬಿಸುತ್ತದೆ."

ಜೋಷಿ ಮಾತಾಡುತ್ತಿದ್ದಂತೆ ಒಳಗಿನಿಂದ ಇಬ್ಬರು ಯುವತಿಯರು ದಿವಾನ್‌ಖಾನೆಗೆ ಬಂದು ಜೋಷಿಗೆ ವಂದನೆ ಮಾಡಿದರು "ತುಲಸಿಯ ಪರಿಚಯ ನಿಮಗಿದೆಯಷ್ಟೇ, ಮಿಸ್ಟರ್ ಜೋಷಿ ? ಈಕೆ ತುಲಸಿಯ ಅತ್ತಿಗೆ ಲತಾದೇವಿ, ಬೆಂಗಳೂರಿನಿಂದ ಬಂದಿದ್ದಾರೆ" ಎಂದು ಅಂಬುಜಮ್ಮ ಅವರ ಪರಿಚಯ ಮಾಡಿಕೊಟ್ಟಳು

ತುಲಸಿ ಸುಮಾರು ೧೮ ವರ್ಷದ ಯುವತಿ ಕನ್ನೈದಿಲೆಯಂತೆ ಶ್ಯಾಮಲವರ್ಣ ಲತಾ ಅವಳಿಗಿಂತ ಎರಡು ಮೂರು ವರ್ಷ ದೊಡ್ಡವಳು. ಗೌರಾಂಗಿ ಜೋಷಿಗೆ ತುಲಸಿ ಪೂರ್ವಪರಿಚಿತೆ ಮೈಸೂರಿನ ಆಸ್ಪತ್ರೆಯೊಂದರಲ್ಲಿ ಅವಳು ಪ್ರೊಬೇಷನರಿ ದಾದಿಯಾಗಿ ಕೆಲಸ ಮಾಡುತ್ತಿದ್ದಳು. ಒಂದು ದಿನ ಜೋಷಿ ಅವಳನ್ನು ಕಾರಲ್ಲಿ ಚಾಮರಾಜನಗರಕ್ಕೆ ಕರೆದುಕೊಂಡು ಹೋಗಿ ಮರುದಿನ ಬೆಳಿಗ್ಗೆ ಅಂಬುಜಮ್ಮನ ಮನೆಗೆ ತಂದುಬಿಟ್ಟು

"ನಿಮ್ಮ ನೀಲರತ್ನವನ್ನು ನಿಮಗೆ ಹಿಂದಿರುಗಿಸಿದ್ದೇನೆ" ಎಂದು ಹೇಳಿದ್ದ ಜೋಷಿ ಹೋದ ಮೇಲೆ ಅಂಬುಜಮ್ಮ "ಏನು ಸಮಾಚಾರ?" ಎಂದು ಕೇಳಿದಾಗ ತುಲಸಿ ಪರ್ಸಿನಿಂದ ನೂರು ರೂಪಾಯಿನ ಒಂದು ನೋಟು ತೆಗೆದು ತೋರಿಸಿದ್ದಳು ಅಧಿಕಾರವಾಣಿಯಿಂದ "ಹಣ ಕೊಡುವವರು ಯಾರು ಎಂಬುದು ಈಗಲಾದರೂ ತಿಳಿಯಿತೇ ಹುಚ್ಚು ಹುಡುಗಿ" ಎಂದಿದ್ದಳು ಅಂಬುಜಮ್ಮ ಅನುಭವದ ಈ ನುಡಿಗಳನ್ನು ಸ್ಮರಿಸಿಕೊಂಡು ತುಲಸಿಯ ಮುಖದಲ್ಲಿ ಮಿದುನಗೆ ಮೂಡಿತು ಲತಾ ಗಂಭೀರವಾಗಿ ನಿಂತಿದ್ದಳು ಅವರನ್ನು ನೋಡಿ ಜೋಷಿ ಮನಸ್ಸಿನಲ್ಲಿ "ನೀಲರತ್ನದೊಡನೆ ಪದ್ಮರಾಗ ಬೆರಸಿದಂತಿದೆ" ಎಂದುಕೊಂಡ ತುಲಸಿ ನೀಲಿಬಣ್ಣದ ಜಾರ್ಜೆಟ್ ಸೀರೆ ಅಂತಹುದೇ ಕುಪ್ಪಸ ತೊಟ್ಟಿದ್ದಳು ಲತಾ ಗುಲಾಬಿ ರಂಗಿನ ಮಲ್ ಸೀರೆ, ಹಸಿರು ರೇಷಿಮೆಯ ಚೋಳಿ ಧರಿಸಿದ್ದಳು ಇಬ್ಬರ ಮುಡಿಗಳಲ್ಲಿ ಸೀರೆಗಳಿಗೆ ತಕ್ಕಂತೆ ನೀಲಾಂಬರ ಮತ್ತು ಕನಕಾಂಬರದ ಹೂಗೊಂಡೆ

ಅಂಬುಜಮ್ಮ ಲತಾಂಗಿಯ ಕಡೆ ತಿರುಗಿ "ಕೇಳಿದೆಯಾ ಲತಾ, ಜೋಷಿಯವರು ಹೇಳುವುದನ್ನು?" ಎಂದಳು

ಲತಾ ಉತ್ತರ ಕೊಡಲಿಲ್ಲ ರಂಗಣ್ಣ ಮಧ್ಯೆ ಬಾಯಿ ಹಾಕಿ "ಅವರು ಸರಿಯಾಗಿ ಹೇಳಿದರು ಉದ್ಯೋಗ ಕೊಡಿಸುವುದು ಸಾರ್ವಜನಿಕ ವಿಚಾರ. ಗಂಡನನ್ನು ಬಿಡುವುದು ವೈಯಕ್ತಿಕ ವಿಚಾರ ಒಂದಕ್ಕೊಂದು ಸಂಬಂಧ ಏಕೆ ಕಲ್ಪಿಸಬೇಕು?"

"ನಿನ್ನ ವಕೀಲಿ ಮಾತುಗಳನ್ನು ಯಾರು ಕೇಳುವರು ರಂಗಣ್ಣ." —ಅಂಬುಜಮ್ಮ ನುಡಿದಳು "ಜನರೇನನ್ನುತ್ತಾರೆ ಗೊತ್ತೆ? ವಿದ್ಯೆ ಕಲಿತ ಹೆಣ್ಣಿನೊಡನೆ ಸಂಸಾರ ಮಾಡುವುದು ಕಷ್ಟ ಕಾಲೇಜಲ್ಲಿ ಓದಿದವಳು ಕಸ ಮುಸುರೆ ಮಾಡಿಕೊಂಡು ಮನೆಯಲ್ಲಿ ಕುಳಿತಿರುವುದು ಸಾಧ್ಯವೇ? ಎಂದು"

"ಹಾಗಾದರೆ ದೇಶದಲ್ಲಿನ ಮಹಿಳಾ ವಿದ್ಯಾಲಯಗಳನ್ನೆಲ್ಲಾ ನಾವು ಮುಚ್ಚಬೇಕಾಗುವುದು"—ಜೋಷಿ ಹೇಳಿದ

ಅಂಬುಜಮ್ಮ ಉತ್ತರ ಕೊಟ್ಟಳು .—"ನಾನು ಅಷ್ಟುದೂರ ಹೋಗುವುದಿಲ್ಲ ಮಹಿಳೆಯರ ವಿದ್ಯಾಭ್ಯಾಸಕ್ಕಾಗಿ ಸರ್ಕಾರ ಖರ್ಚುಮಾಡುತ್ತಿರುವ

ಹಣದಲ್ಲಿ ಹೆಚ್ಚು ಭಾಗ ನಿಷ್ಪ್ರಯೋಜಕವಾಗುತ್ತಿದೆ ವಿದ್ಯೆ ಕಲಿತ ಹುಡುಗಿಯರು ಮದುವೆಯಾಗಿ ಮಕ್ಕಳನ್ನು ಹೆರುವುದರ ಹೊರತಾಗಿ ಮತ್ತೇನೂ ಮಾಡುತ್ತಿಲ್ಲ ದೇಶಕ್ಕೆ ಬೇಕಾಗುವಷ್ಟು ಉಪಾಧ್ಯಾಯಿನಿಯರನ್ನು ವೈದ್ಯರನ್ನು ಒದಗಿಸುತ್ತಿಲ್ಲ ನಮ್ಮ ವಿದ್ಯಾವತಿಯರು ನೀವು ಪತ್ರಿಕೆಯಲ್ಲಿ ಈ ವಿಚಾರಗಳನ್ನು ಕುರಿತು ಬರೆಯಬಾರದೇ ಜೋಷಿಯವರೆ ?"

ನೀರಸವಾದ ಈ ರಾಜಕೀಯ ಚರ್ಚೆಯಲ್ಲಿ ಕಾಲ ಕಳೆಯುವುದು ಜೋಷಿಯ ಇಷ್ಟವಾಗಿರಲಿಲ್ಲ ಅವನು ಲತಾಂಗಿಯ ಕಡೆ ತಿರುಗಿ "ನೀವು ಮುಂದೆ ಏನು ಮಾಡಬೇಕೆಂದಿದ್ದೀರಿ ?" ಎಂದು ಪ್ರಶ್ನಿಸಿದ

ಲತಾ ಹೇಳಿದಳು "ಮದುವೆಯಾದಾಗ ಬಿ ಏ ,ಗೆ ಓದುತ್ತಿದ್ದೆ ಈಗ ಪ್ರೈವೇಟಲ್ಲಿ ವಿದ್ಯಾಭ್ಯಾಸ ಮುಂದುವರಿಸಬೇಕೆಂದು ಯೋಚನೆ. ಎಲ್ಲಾದರೂ ಹಂಗಾಮಿ ಕೆಲಸ ಸಿಕ್ಕಿದರೆ ಸಹಾಯವಾಗುವುದು "

"ನಿಮ್ಮ ಪತ್ರಿಕೆಯಲ್ಲಿ ಏನಾದರೂ ಕೆಲಸ ಕೊಡಬಾರದೆ ಮಿಸ್ಟರ್ ಜೋಷಿ ಲತಾ ಕನ್ನಡದಲ್ಲಿ ಕತೆ ಪ್ರಬಂಧಗಳನ್ನು ಬರೆಯಬಲ್ಲಳು "— ಅಂಬುಜಮ್ಮ ಹೇಳಿದಳು

ಜೋಷಿ ನಿರೀಕ್ಷಿಸುತ್ತಿದ್ದದ್ದು ಇಂತಹ ಸಲಹೆಯನ್ನೇ " ವಿಶ್ವಮಿತ್ರ ಪತ್ರಿಕೆಯಲ್ಲಿ ಮಹಿಳಾ ವಿಭಾಗ ಪ್ರಾರಂಭಿಸುವ ಯೋಚನೆಯಿದೆ ಇವರನ್ನು ಅದರ ಸಂಪಾದಕಿಯರಾಗಿ ಮಾಡಬಹುದು ಆದರೆ ಸ್ವಲ್ಪ ಅನುಭವ ಬೇಕು " ಎಂದು ಹೇಳಿದ

" ನಿಮ್ಮ ಹತ್ತಿರ ಎರಡು ದಿನ ಕೆಲಸ ಮಾಡಿದರೆ ಅನುಭವ ಪಡೆಯುತ್ತಾಳೆ"—ಎಂದು ಅಂಬುಜಮ್ಮ ಹೇಳಿದ್ದರಲ್ಲಿ ವ್ಯಂಗ್ಯದ ಸೂಚನೆಯೇನೂ ಇರಲಿಲ್ಲ.

" ಬೆಂಗಳೂರಿಗೆ ಬಂದಾಗ ನನ್ನನ್ನು ನೋಡಿ " ಎಂದು ಜೋಷಿ ಹೇಳುತ್ತಿದ್ದಂತೆ ಒಳಗಿಂದ ಕಾಫಿ ಬಂತು.

— ೨ —

ಅಂಜುಜಮ್ಮನ ಮನೆಯಲ್ಲಿ ಈ ರೀತಿ ಸರಳವಾಗಿ ಪ್ರಾರಂಭವಾದ ಪರಿಚಯ ಎರಡು ಮೂರು ದಿನಗಳಲ್ಲಿ ಸ್ನೇಹವಾಗಿ ಪರಿಣಮಿಸಿತು ಅಸೆಂಬ್ಲಿ ಅಧಿವೇಶನ ನಡೆಯುತ್ತಿದ್ದುದರಿಂದ ಜೋಷಿ ಇನ್ನೂ ಒಂದು ವಾರ ಮೈಸೂರಲ್ಲಿರಬೇಕಾಗಿತ್ತು ಪ್ರತಿದಿನ ಸಂಜೆ ಅಂಬುಜಮ್ಮನ ಮನೆಯಲ್ಲಿ ಅವನು ಒಂದೆರಡು ಗಂಟೆ ಕಳೆಯುತ್ತಿದ್ದ ಲತಾಂಗಿಯೂ ಅಲ್ಲಿಗೆ ಬರುವಳು ಆದರೆ ಮಾತಿನ ಸಲುಗೆಯು ಹೊರ್ತಾಗಿ ವ್ಯವಹಾರ ಒಂದು ಹೆಜ್ಜೆಯೂ ಮುಂದುವರಿಯದಿದ್ದುದನ್ನು ಕಂಡು ಅಂಬುಜಮ್ಮ ಅಸಮಾಧಾನಗೊಂಡಳು ಮೂರನೆಯ ದಿನ ಜೋಷಿ ಬಂದಾಗ "ಲತಾ ವಿಷಯ ಏನು ಮಾಡಿದಿರಿ?" ಎಂದು ತಾನಾಗಿ ಕೇಳಿದಳು "ಬೆಂಗಳೂರಿಗೆ ಹೋದ ಮೇಲೆ ನಿರ್ಧರಿಸುತ್ತೇನೆ" ಎಂದು ಜೋಷಿ ಉತ್ತರ ಕೊಟ್ಟ

ಅದಾದ ಮರುದಿನ ಶನಿವಾರ ಬೃಂದಾವನ ನೋಡಿಬರಲು ಏರ್ಪಾಡಾಯಿತು ಜೋಷಿ ಕಾರಲ್ಲಿ ಅಂಬುಜಮ್ಮ, ರಂಗಣ್ಣ, ರಂಗಣ್ಣನ ಇಬ್ಬರು ಮಕ್ಕಳು, ಲತಾಂಗಿ ಹೊರಟರು ಸಂಗಡ ಆನಂದಭವನದಿಂದ ೧೦–೧೨ ರೂಪಾಯಿ ತಿಂಡಿ, ಮೂರು ನಾಲ್ಕು ಪ್ಲಾಸ್ಕುಗಳಲ್ಲಿ ಬಿಸಿ ಕಾಫಿ ತೆಗೆದುಕೊಂಡು ಹೋಗಿದ್ದರು ಆದಿನ ಆಸ್ಪತ್ರೆಯಲ್ಲಿ ಡ್ಯೂಟಿ ಇದ್ದದ್ದರಿಂದ ತುಲಸಿ ಬಂದಿರಲಿಲ್ಲ

ಪಾರ್ಟಿ ಬೃಂದಾವನವನ್ನು ತಲುಪಿದಾಗ ಐದೂವರೆ ಗಂಟೆ ದೀಪೋತ್ಸವ ಪ್ರಾರಂಭವಾಗಲು ಇನ್ನೊಂದು ಗಂಟೆಯಿತ್ತು ಅನುಕೂಲವಾದ ಸ್ಥಳ ನೋಡಿ ಕುಳಿತುಕೊಂಡು ಹೋಟೆಲಿನಿಂದ ತಂದಿದ್ದ ಹಲ್ವ, ಜಹಾಂಗೀರ್, ಮೈಸೂರುಪಾಕ್, ಜಾಮೂನ್ ಮುಂತಾದ ಸಿಹಿ ತಿಂಡಿಗಳನ್ನು ತಿಂದು ಬಾಯಿ ಚಪ್ಪರಿಸಿ ಖಾರದ ಪದಾರ್ಥಗಳ ರುಚಿ ನೋಡಿ, ಕಾಫಿ ಬಸಿದುಕೊಂಡು, ತಾಂಬೂಲ ಸೇವಿಸಿ, ಲಲ್ಲೆ ಹೊಡೆಯುತ್ತಾ ಒಂದು ಗಂಟೆ ಕಳೆದರು ಇಂತಹ ಪಾರ್ಟಿಗಳಲ್ಲಿ ಮೇಲೆ ಗೌರವವಾಗಿ ಕಂಡರೂ ಒಂದು ದೃಷ್ಟಿ, ಒಂದು ಅಂಗಚಲನೆ, ಒಂದೇ ಒಂದು ಚಮತ್ಕಾರದ ಮಾತು ಇವುಗಳಿಂದ ಅಭ್ಯಾಗತರ ಮನಸ್ಸಿನಲ್ಲಿ ವಿಲಾಸದ ·ವಾತಾವರಣವನ್ನುಂಟು

ಮಾಡಬಲ್ಲ ವೈಶಿಕ ವಿದ್ಯೆ ಅಂಬುಜಮ್ಮನಿಗೆ ಕರತಲಾಮಲಕವಾಗಿತ್ತು. ವಯಸ್ಸಿನಲ್ಲಿ ಜೋಷಿ ಲತಾಂಗಿಗಿಂತ, ಹದಿನೈದು ಇಪ್ಪತ್ತು ವರ್ಷ ದೊಡ್ಡವನಾದರೂ ಈಡು ಜೋಡಿ ಯುವಕ ಯುವತಿಯರಂತೆ ಅವರ ವಿಚಾರದಲ್ಲಿ ವರ್ತಿಸುತ್ತಾ ಸಲಿಗೆ ಹೆಚ್ಚಿಸಲು ಬೇಕಾದ ಅವಕಾಶ ಸನ್ನಿವೇಶಗಳನ್ನು ಅಂಬುಜಮ್ಮ ಕಲ್ಪಿಸಿಕೊಟ್ಟಳು

ವಿದ್ಯುದ್ದೀಪಗಳ ರಂಗುರಂಗಾದ ಬೆಳಕಿನಿಂದ ಬೃಂದಾವನ ನಂದನ ಕಾನನವಾಯಿತು ಕಾರಂಜಿಗಳಿಂದ ಚಿಮ್ಮುತ್ತಿದ್ದ ನೀರು ವಿದ್ಯುತ್ ಪ್ರಕಾಶದಿಂದ ವಿವಿಧ ವರ್ಣಗಳನ್ನು ತಳೆದು ಮಾನವನ ಯಂತ್ರ ಪ್ರತಿಭೆ ಸೆರೆಹಿಡಿದು ಭೂಮಿಗೆ ತಂದ ಚಿಕ್ಕ ಚಿಕ್ಕ ಕಾಮನಬಿಲ್ಲುಗಳಂತೆ ಕಾಣುತ್ತಿದ್ದವು ಸಂಜೆಯ ತಂಗಾಳಿ ದೂರದ ಭತ್ತದ ಗದ್ದೆಗಳ ಸಮೀಪದ ಹೂ ಗಿಡಗಳ ಮಂದ ಪರಿಮಳದಿಂದ ಸುಗಂಧಿತವಾಗಿ ಬೀಸುತ್ತಿತ್ತು ಅಂಬುಜಮ್ಮನ ಪಾರ್ಟಿಯಂತೆ ವಿಹಾರಕ್ಕಾಗಿಯೇ ಅಲ್ಲಿಗೆ ಬಂದಿದ್ದ ಕೆಲವರ ಹೊರತಾಗಿ ಆ ದಿನ ಅಲ್ಲಿ ಹೆಚ್ಚು ಜನ ಜಂಗುಳಿಯಿರಲಿಲ್ಲ.

ವನದ ರಮ್ಯಪ್ರದೇಶಗಳಲ್ಲಿ ತಿರುಗಾಡುತ್ತಾ ಜೋಷಿ ಮತ್ತು ಲತಾಂಗಿ ಸ್ವಲ್ಪ ಕಾಲ ಕಳೆದರು ಅಂಬುಜಮ್ಮ, ರಂಗಣ್ಣ ಮತ್ತು ಹುಡುಗರಿಂದ ಅವರು ಪ್ರತ್ಯೇಕವಾಗಿ ಅರ್ಧ ಗಂಟೆಗೆ ಮೇಲಾಗಿತ್ತು ಈಗ ಅವರು ಗಿಡಗಳ ಮಧ್ಯೆ ಮಿರುಗುತ್ತಿದ್ದ ಬಣ್ಣದ ಕಾರಂಜಿಯೊಂದರ ಹತ್ತಿರ ನಿಂತು ಅದರ ಅಡಿಯಲ್ಲಿ ಸ್ನಾನ ಮಾಡುತ್ತಿರುವಂತೆ ನೆಲಕ್ಕೆ ಜೋಡಿಸಲ್ಪಟ್ಟಿದ್ದ ಅಪ್ಸರೆಯರ ಬೊಂಬೆಗಳನ್ನು ನೋಡುತ್ತಿದ್ದರು. ಲತಾಂಗಿ ಜರತಾರಿಯ ಹೂಗಳಿಂದ ಕೂಡಿದ ಬಿಳಿಯ ಬಣ್ಣದ ರೇಷ್ಮೆ ಸೀರೆ ಉಟ್ಟಿದ್ದಳು ವಿದ್ಯುತ್ತಿನ ಬಣ್ಣ ಬದಲಾಯಿಸುತ್ತಿದ್ದಂತೆ ಅವಳ ಉಡಿಗೆಯ ಬಣ್ಣವೂ ಬದಲಾವಣೆಯಾಗುವುದನ್ನು ನೋಡುತ್ತಿದ್ದ ಜೋಷಿ ಅವಳ ಭುಜಗಳ ಮೇಲೆ ಕೈಯಿಟ್ಟು,

"ನಿನ್ನನ್ನು ನೋಡಿದರೆ ನನಗೆ ಸಿಲೋಫೆನ್ ಕಾಗದದಿಂದ ಸುತ್ತಿದ ಗಾಜಿನ ಗೊಂಬೆಯ ನೆನಪಾಗುತ್ತದೆ, ಲತಾ 'ಮುಟ್ಟೀರಿ ಜೋಕೆ! ಮಾಸಿಹೋದೀತು' ಎಂದು ಎಚ್ಚರಿಕೆಯ ನೋಟೀಸು ಮೇಲೆ ಹೆಚ್ಚುವುದು ಅಗತ್ಯ"—ಎಂದನು.

ಲತಾಂಗಿ ಅರ್ಥಹೀನ ಕಟಾಕ್ಷವೊಂದನ್ನು ಬೀರಿ "ನಾನು ನಾಳೆ ಬೆಂಗಳೂರಿಗೆ ಹೋಗುತ್ತೇನೆ ಅಧಿವೇಶನ ಮುಗಿದು ನೀವು ಯಾವಾಗ ಹಿಂದಿರುಗುತ್ತೀರಿ ನಿಮ್ಮನ್ನು ನಾನು ಯಾವಾಗ ನೋಡಲಿ?" ಎಂದು ಪ್ರಶ್ನಿಸಿದಳು

"ನಿನ್ನ ಪ್ರಯಾಣ ಎರಡು ದಿನ ಮುಂದೆ ಹಾಕಬಾರದೆ ಲತಾ? ನಾನು ಒಂದು ವಾರ ಇಲ್ಲಿರಬೇಕಾಗುವುದು" ಎಂದು ಹೇಳುತ್ತಾ ಜೋಷಿ ಲತಾಂಗಿಯ ಕೈಹಿಡಿದ ಅವಳು ಸುಮ್ಮನಿದ್ದಳು ಜೋಷಿ ಬೆರಳುಗಳಿಂದ ಅಂಗೈಯನ್ನೊತ್ತಿದಾಗಲೂ ಅವಳ ಕೈಗಳು ಚಲಿಸಲಿಲ್ಲ ಆಗತಾನೆ ಕಿತ್ತ ಕಮಲ ಮುಕುಳಗಳಂತೆ ತಣ್ಣಗೆ ನಿಶ್ಚೇಷ್ಟಿತವಾಗಿದ್ದುವು

ಕಾರಂಜಿಯ ಹಿಂದೆ ಮರದ ಗುಂಪು ಮರಗಳ ನಡುವೆ ಅಪರೂಪವಾದ ಹೂವಿನ ಗಿಡಗಳಿಗಾಗಿ ಒಂದು ಲತಾಗೃಹ ಕಟ್ಟಲ್ಪಟ್ಟಿತ್ತು. ತೋಟದ ಕೆಲಸಕ್ಕೆ ಬೇಕಾದ ಸುರ ಮಟ್ಟಿಗಳನ್ನೂ ಇಡಲು ಅನುಕೂಲವಾಗುವಂತೆ ಅದಕ್ಕೆ ಗೋಡೆ, ಕಿಟಿಕಿ ಬಾಗಿಲುಗಳಿದ್ದುವು ಮೊದಲೇ ಜೋಷಿ ತನಗೆ ಪರಿಚಿತನಾದ ತೋಟಗಾರನೊಬ್ಬನಿಗೆ ಎರಡು ರೂಪಾಯಿ ಕೊಟ್ಟು ಬಾಗಿಲು ತೆರೆದಿಟ್ಟಿರುವಂತೆ ಹೇಳಿದ್ದ ಈಗ ಅವನು ಮಾತಾಡುತ್ತಾ ಲತಾಂಗಿಯನ್ನು ಮರದ ಗುಂಪಿನ ಹತ್ತಿರ ಕರೆದುಕೊಂಡು ಹೋದ ಅಲ್ಲಿ ಸ್ವಲ್ಪ ಕತ್ತಲು ಇಬ್ಬರೂ ಮರಗಳ ಹತ್ತಿರ ನಿಂತಿರು. ಕಾರಂಜಿ ಇದ್ದ ಕಡೆಯಿಂದ ಅವರು ಕಾಣುತ್ತಿರಲಿಲ್ಲ.

"ನೋಡಿದ ದಿನವೇ ನಾನು ನಿನ್ನವನಾದೆ ಲತಾ"

ಎಂದು ಹೇಳುತ್ತಾ ಜೋಷಿ ಅವಳನ್ನು ಆಲಿಂಗಿಸಿ ಚುಂಬಿಸಿದ. ತಾಯಿಹಕ್ಕಿ ಕೊಡುವ ಗುಟುಕಿಗೆ ಮರಿಹಕ್ಕಿ ಬಾಯಿ ತೆರೆಯುವಂತೆ ಲತಾಂಗಿ ತುಟಿಗಳನ್ನು ತೆರೆದಳು ಮಗುವಿನ ಸರಳತೆಯ ಹೊರತಾಗಿ ಯೌವನದ ಬಿಸಿ-ತಣ್ಪುಗಳೊಂದೂ ಚುಂಬನದಲ್ಲಿಲ್ಲದಿರುವುದನ್ನು ಕಂಡು ಜೋಷಿಗೆ ಆಶ್ಚರ್ಯವಾಯಿತು ಮುಚ್ಚಿದ ಕಣ್ಣುಗಳು, ಸ್ಪಂದಹೀನವಾದ ತುಟಿ, ಬಿಗಿಹಿಡಿದ ಮುಷ್ಟಿ, ಸೆಟೆ ಹಿಡಿದ ದೇಹಲತೆ ಇವುಗಳಿಂದ ಅವನು ಅರಿತುಕೊಂಡ, ತನ್ನ ತೋಳ ಸೆರೆಯಲ್ಲಿರುವುದು ಲತಾಂಗಿಯ ದೇಹ ಮಾತ್ರ, ಪ್ರಾಣವಲ್ಲ—ಎಂದು.

" ನೀನು ನನ್ನನ್ನು ಪ್ರೀತಿಸಲಾರೆಯ, ಲತಾ ? "

ಉದ್ವಿಗ್ನ ಭಾವದಿಂದ ಜೋಷಿ ಪ್ರಶ್ನಿಸಿದ

ಲತಾಂಗಿ ಉತ್ತರ ಕೊಡಲಿಲ್ಲ ಆಗ ಜೋಷಿ ಅವಳನ್ನು ಲತಾ ಗೃಹದ ಹತ್ತಿರ ಕರೆದುಕೊಂಡು ಹೋದ ಒಳಗೆ ಹೋಗಿ ಬಾಗಿಲು ಮುಚ್ಚಿ ಚಿಲುಕ ಹಾಕಿದಾಗ ಅವಳಿಗೆ ಎಚ್ಚರವಾಯಿತು ಇಬ್ಬರೂ ಒಳಗಿದ್ದ ಶಿಲಾಸನದ ಮೇಲೆ ಕುಳಿತುಕೊಂಡರು ಜೋಷಿ ಪುನಃ ಮೈ ಮುಟ್ಟಿದಾಗ ಲತಾಂಗಿಗೆ ಅರ್ಥವಾಯಿತು ಬೆಚ್ಚಿ ಆಲಿಂಗನದಿಂದ ಬಿಡಿಸಿಕೊಂಡು ಎದ್ದು ದೂರ ಸರಿದಳು

ಎಲ್ಲಕಡೆ ಕತ್ತಲು ಕಾರಂಜಿಯ ಹತ್ತಿರದ್ದ ದೀಪ ಮಾಲೆಯ ಬೆಳಕು ಮರದ ಕೊಂಬೆಗಳ ಮೇಲೆ ಹಾಯ್ದು ಛಾವಣಿಯ ಮೇಲೆ ಬಿದ್ದು ಕಂಡಿಗಳ ಮುಖಾಂತರ ಒಳಗೆ ಹೊದು ಲತಾಗೃಹದ ಒಂದುಭಾಗ ಮಾತ್ರ ಅಸ್ಪಷ್ಟವಾಗಿ ಕಾಣುತ್ತಿತ್ತು ಲತಾಂಗಿ ಆ ಬೆಳಕಿನಲ್ಲಿ ತಡವರಿಸುತ್ತಾ ಮೆಲ್ಲನೆ ಬಾಗಿಲಕಡೆ ಹೋದಳು ಸಾರ್ವಜನಿಕ ಉದ್ಯಾನದಲ್ಲಿ ಈ ಅವಸ್ಥೆ ಯಲ್ಲಿ ಜೋಷಿಯ ವರ್ತನೆ ಅನುಚಿತ, ಅಶ್ಲೀಲ ಎಂದು ಅವಳಿಗೆ ತೋರಿತು. ಮಾನವರೇನು ಪಶುಗಳೇ ಆರೀತಿ ವರ್ತಿಸಲು !

" ಲತಾ ! ಲತಾ ! " ಜೋಷಿ ಮೆಲ್ಲನೆ ಕೂಗಿದ ಅವನ ಧ್ವನಿಯಲ್ಲಿನ ಹಂಬಲ ಅವಳ ಮನಸ್ಸನ್ನು ಕರಗಿಸಿತು ಸಮೀಪಕ್ಕೆ ಹೋಗಿ ಭುಜದ ಮೇಲೆ ಕೈಯಿಟ್ಟು " ಈ ಸ್ಥಳದಲ್ಲಿ ಈರೀತಿ ಬೇಡ ಸ್ವಾಮಿ, ಬನ್ನಿ ಹೊರಗೆ ಹೋಗೋಣ " ಎಂದು ಹೇಳಿದಳು

ಜೋಷಿ ತನ್ನ ತಪ್ಪನ್ನು ತಿಳಿದುಕೊಂಡ ಪೂಜೆಗೆ ಯೋಗ್ಯವಾದ ಹೂವನ್ನು ತಿಪ್ಪೆಗೆಸೆಯುವ ಪ್ರಯತ್ನ ಮಾಡಿದೆನಲ್ಲಾ ಎಂದು ಅವನಿಗೆ ಲಜ್ಜೆ ಯಾಯಿತು ತನ್ನ ವಯಸ್ಸು ಅನುಭವ ನಿರರ್ಥಕವೆಂದು ಭಾವಿಸಿದ

" ನಾನು ಪಶುವಿನಂತೆ ವರ್ತಿಸಿದೆ, ಕ್ಷಮಿಸು ಲತಾ " ಎಂದು ಬೇಡಿದ

" ನೀವು ದೊಡ್ಡವರು ನಿಮ್ಮ ಅಪೇಕ್ಷೆಯನ್ನು ನಾನು ನಿರಾಕರಿಸುವೆನೇ? ಸ್ವಲ್ಪದಿನ ತಡೆಯಿರಿ " ಎಂದು ಹೇಳಿ ಲತಾ ಜೋಷಿಯನ್ನು ಕರೆದುಕೊಂಡು ಬಾಗಿಲ ಹತ್ತಿರ ಬಂದಳು ಚಿಲುಕ ತೆಗೆಯುತ್ತಾ ಜೋಷಿ ಹೇಳಿದ

" ನೀನು ಅಂಬುಜಮ್ಮನ ಮನೆಗೆ ಬಂದದ್ದು ಇದೇ ಮೊದಲಸಾರಿಯೇ ?

ಅಥವಾ ಹಿಂದೆ ಯಾವಾಗಲಾದರೂ ಬಂದಿದ್ದೆಯೋ ? "

" ಇದೇ ಮೊದಲಸಾರಿ "

" ಅವಳು ನಿನಗೆ ಅವರಿವರ ಪರಿಚಯ ಮಾಡ್ತಿಸಲು ಪ್ರಯತ್ನಿಸಿದರೆ ಒಪ್ಪಿಕೊಳ್ಳಬೇಡ "

"ಅವಳು ಇಂತಹ ಹೆಂಗಸೆಂದು ತಿಳಿದಿದ್ದರೆ ನಾನು ಬರುತ್ತಲೇ ಇರಲಿಲ್ಲ"

" ಹಾಗಾದರೆ ಈಗ ಬಂದದ್ದು ನಿನಗೆ ಅಸಮಾಧಾನವೇ ? "

" ಅಸಮಾಧಾನವೆಂದು ನಾನು ಹೇಳಲಿಲ್ಲ ಸ್ವಾಮಿ ಬಂದದ್ದರಿಂದಲ್ಲವೇ ನಿಮ್ಮ ಪರಿಚಯುವಾಯಿತು "

ಜೋಷಿ ಹೊರಗೆ ಭಂದು ಯಾರೂ ಇಲ್ಲದಿರುವುದನ್ನು ನೋಡಿದ ಮೇಲೆ ಲತಾ ಹೊರಗೆ ಬಂದಳು ಇನ್ನೂ ಕೆಲವು ನಿಮಿಷಗಳು ಅಲ್ಲಲ್ಲಿ ತಿರುಗುತ್ತಿದ್ದು ಕಾರಿನ ಹತ್ತಿರ ಹೋಗುತ್ತಿದ್ದಾಗ ಅಂಬುಜಮ್ಮ ಸಿಕ್ಕಿ " ಎಲ್ಲಿ ತಪ್ಪಿಸಿಕೊಂಡಿರಿ ? " ಎಂದು ಕೇಳಿದಳು ಅವಳ ಮಂದಹಾಸ ಇಬ್ಬರಿಗೂ ಅರ್ಥವಾಯಿತು

" ನೀವು ಮುಂದೆ ಮುಂದೆ ಹೋದ್ದರಿಂದ ತಪ್ಪಿಹೋದೆವು ನಿಮ್ಮನ್ನು ಹುಡುಕುವುದರಲ್ಲೇ ಸಾಕಾಯಿತು "—ಜೋಷಿ ಹೇಳಿದ

— ೩ —

ಬೃಂದಾವನದಿಂದ ಹಿಂದಿರುಗಿದಾಗ ಸುಮಾರು ೯ ಗಂಟೆ ಲತಾಂಗಿ ದಾರಿಯಲ್ಲಿಯೇ ಕಾರಿಂದ ಇಳಿದು ಆಸ್ಪತ್ರೆಯ ದಾದಿಯರ ವಸತಿ ವಿಭಾಗದಲ್ಲಿ ತುಲಸಿಯ ಮನೆಗೆ ಹೋದಳು

ಆಗ ತುಲಸಿ ಡ್ಯೂಟಿ ಮುಗಿಸಿಕೊಂಡು ಬಂದು ಊಟ ಮಾಡಿ ಕನ್ನಡಿಯ ಮುಂದೆ ತಲೆ ಬಾಚಿಕೊಳ್ಳಲು ಕೂತಿದ್ದಳು ಲತಾಂಗಿಯನ್ನು ನೋಡಿ " ಬೇಗ ಊಟ ಮಾಡು ಅಕ್ಕ, ಸಿನಿಮಾಕ್ಕೆ ಹೋಗೋಣ " ಎಂದಳು

" ನೀನು ಹೋಗಿಬಾ, ತಂಗಿ ನನಗೆ ತಿರುಗಾಡಿ ಸಾಕಾಗಿದೆ ಮಲಗಿ ಭಿಡುತ್ತೇನೆ "

ತುಲಸಿ ಒತ್ತಾಯ ಪಡಿಸಲಿಲ್ಲ ಗೆಳೆಯನೊಬ್ಬನು ಸಂಗಡ ಬರುವ ಏರ್ಪಾಡಾಗಿದ್ದುದರಿಂದ ಲತಾಂಗಿ ಸಂಗಡಿರುವುದು ತೊಂದರೆಗೆ ಕಾರಣವೆಂದು ಅವಳು ಭಾವಿಸಿದಳು ಲತಾಂಗಿ ಸಂಬಂಧದಲ್ಲಿ ಅತ್ತಿಗೆಯೂ, ವಯಸ್ಸಿನಲ್ಲಿ ಹಿರಿಯಳೂ ಆಗಿದ್ದುದರಿಂದ ತನ್ನ ಪ್ರಣಯ ವ್ಯವಹಾರಗಳನ್ನು ಅವಳ ಮುಂದೆ ಬಹಿರಂಗವಾಗಿ ನಡೆಸಲು ತುಲಸಿ ಹಿಂಜರಿದಳು ಲತಾಂಗಿಯ ಗಂಭೀರ ವರ್ತನೆ ಮತ್ತು ಸ್ವಭಾವವೂ ಇದಕ್ಕೆ ಕಾರಣವಾಗಿತ್ತು

ತುಲಸಿ ಹೇಳಿದಳು "ಹಾಗಾದರೆ ನೀನು ಬಡಿಸಿಕೊಂಡು ಊಟ ಮಾಡು ಅಕ್ಕ, ನಾನು ಹೋಗಿಬರುತ್ತೇನೆ"

"ನನಗೆ ಹಸಿವಿಲ್ಲ ಬೃಂದಾವನದಲ್ಲಿ ತಿಂದದ್ದು ಸಾಕಾಗಿದೆ ಜೋಷಿಯವರು ನಿನಗೂ ಸ್ವಲ್ಪ ತಿಂಡಿ ಕಳುಹಿಸಿದ್ದಾರೆ"

ಜೋಷಿಯ ಹೆಸರು ಕೇಳಿ ತುಲಸಿ ಚಮಕಿತೆಯಾದಳು ಕೈಲಿದ್ದ ಬಾಚಣಿಗೆ ಕೆಳಗೆ ಬಿತ್ತು ಅವಳು ಲತಾಂಗಿಯ ಕಡೆ ತಿರುಗಿ ಕಣ್ಣಿಯ ಮೇಲೆ ಬಿದ್ದಿದ್ದ ಮುಂಗುರುಳನ್ನು ಹಿಂದಕ್ಕೆ ಸರಿಸುತ್ತಾ ಕುತೂಹಲದಿಂದ ಹೇಳಿದಳು

"ಓಹೋ ಜೋಷಿಯ ಸಂಗಡ ಬೃಂದಾವನಕ್ಕೆ ಹೋಗಿದ್ದೆಯ ಅಕ್ಕ? ಅದಕ್ಕೇ ಇಷ್ಟು ಹೊತ್ತಾದದ್ದು ಮೊದಲೆ ತಿಳಿಸಿದ್ದರೆ ನಾನೂ ಸಂಗಡ ಬರುತ್ತಿದ್ದೆ"

"ಹೋಗುವ ವಿಚಾರ ತಿಳಿದಿದ್ದರಲ್ಲವೆ ಹೇಳುವುದು ಅಂಬುಜಮ್ಮ, ರಂಗಣ್ಣ ಸಂಗಡ ಬಂದಿದ್ದರು"

ವಯಸ್ಸಿನಲ್ಲಿ ತುಲಸಿ ಲತಾಂಗಿಗಿಂತ ಎರಡು ವರ್ಷ ಚಿಕ್ಕವಳು, ಅವಿವಾಹಿತೆ ಆದರೂ ಆಸ್ಪತ್ರೆಯ ವಿದ್ಯಾರ್ಥಿಗಳು, ಡಾಕ್ಟರುಗಳು, ಅಂಬುಜಮ್ಮನ ಮನೆಗೆ ಬರುತ್ತಿದ್ದ ವಿಲಾಸಾರ್ಥಿಗಳಾದ ಶ್ರೀಮಂತರು ಅವಳನ್ನು ಪ್ರಣಯಪಟುವಾಗಿ ಮಾಡಿದ್ದರು ಲತಾಂಗಿ ಪತಿಯ ಸಂಗಡ ಜಗಳವಾಡಿ ಮೈಸೂರಿಗೆ ಬಂದಾಗ ತುಲಸಿಯೇ ಅವಳಿಗೆ ಅಂಬುಜಮ್ಮನ ಪರಿಚಯ ಮಾಡಿಸಿದಳು ಲತಾಂಗಿಯನ್ನು ಸಂಪಾದನೆಯ ಮಾರ್ಗದಲ್ಲಿ ಬಿಡುವ ತನ್ನ ಪ್ರಯತ್ನ ಒಂದು ಘಟ್ಟಕ್ಕೆ ಬಂದಿದೆಯೆಂದು ತಿಳಿದು ಅವಳಿಗೆ ಸಂತೋಷವಾಯಿತು.

" ಜೋಷಿಯವರು ಮನಸ್ಸುಮಾಡಿದರೆ ನಿನಗೊಂದು ಕೆಲಸ ಕೊಡಿಸ ಬಲ್ಲರು, ಅಕ್ಕ ಆ ವಿಚಾರ ಅವರ ಸಂಗಡ ಪ್ರಸ್ತಾಪ ಮಾಡಿದೆಯಾ ?"

" ಬೆಂಗಳೂರಲ್ಲಿ ತನ್ಮನ್ನು ನೋಡುವಂತೆ ಹೇಳಿದ್ದಾರೆ ಅವರು ಇನ್ನೊಂದುವಾರ ಇಲ್ಲಿರಬೇಕಂತೆ ನಾನು ನಾಳೆ ಬೆಳಿಗ್ಗೆ ಎಕ್ಸ್‌ಪ್ರೆಸ್ಸಿಗೆ ಹೋಗುತ್ತೇನೆ "

ಕೆಲಸ ಹುಡುಕುವ ಹೊರತಾಗಿ ತನಗೆ ಬೇರಾವ ಉದ್ದೇಶವೂ ಇಲ್ಲ ವೆಂಬುದನ್ನು ತಿಳಿಸಲು ಲತಾ ಈ ರೀತಿ ಹೇಳಿದಳು

" ಏನು ಅವಸರ ಇನ್ನೆರಡು ದಿನ ಇದ್ದು ಹೋದರಾಯಿತು ಈಗ ಮನೆಗೆ ಹೋಗಿ ಪುನಃ ಗಂಡನೊಡನೆ ಜಗಳ ಹೂಡುವುದು ಸರಿಯಲ್ಲ "

" ನಾನು ಮೊದಲು ಹಾಗೆಯೇ ಭಾವಿಸಿದ್ದೆ ಈ ದಿನ ಅವರು ಕಾಗದ ಬರೆದಿದ್ದಾರೆ ಬೇರೆ ಮನೆ ನೋಡಿರುವರಂತೆ ನಾನು ಕೂಡಲೆ ಹಿಂದಿರು ಗದೆ ಹೋದರೆ ನನ್ನನ್ನು ಕರೆದುಕೊಂಡುಹೋಗಲು ತಾವೇ ಮೈಸೂರಿಗೆ ಬರುವರಂತೆ ಅವರೇಕೆ ಇಲ್ಲಿಗೆ ಬರಬೇಕು ? ನಾನೇ ಹೋಗುತ್ತೇನೆ."

ತುಲಸಿಗೂ ಅದು ಸರಿತೋರಿತು " ಹಾಗಾದರೆ ಹೋಗುವುದೇ ಉತ್ತಮ ನೀನು ಊಟ ಮಾಡಿ ಮಲಗಿಬಿಡು ಬೆಳಿಗ್ಗೆ ಜಾಗ್ರತೆ ಏಳ ಬೇಕಾಗುವುದು " ಎಂದು ಹೇಳಿ ಮನೆಯಿಂದ ಹೊರಟಳು

ಲತಾ ಊಟ ಮಾಡಲಿಲ್ಲ ಬಟ್ಟೆ ಬದಲಾಯಿಸಿ ಕೈ ಕಾಲು ತೊಳೆದು ಕೊಂಡು ಮಂಚದ ಮೇಲೆ ಮಲಗಿದಳು ಬರುತ್ತಿದ್ದ ಸಂಬಳ ೫೦ ರೂಪಾಯಿ ಮಾತ್ರವಾದರೂ ತುಲಸಿ ಮನೆಯನ್ನು ಚನ್ನಾಗಿಟ್ಟುಕೊಂಡಿದ್ದಳು ಕಬ್ಬಿ ಣದ ಸ್ಪ್ರಿಂಗ್ ಮಂಚ, ಕರಿ ಮರದ ಮೇಜು, ಒಂದೆರಡು ಕುರ್ಜಿಗಳು, ಕಿಟಕಿ ಬಾಗಿಲುಗಳಿಗೆ ರೇಷ್ಮೆ ಬಟ್ಟೆಯ ತೆರೆಗಳು ಇದ್ದುವು ಪೆಟ್ಟಿಗೆಯ ತುಂಬ ರಂಗುರಂಗಿನ ಜಾರ್ಜೆಟ್ ಮತ್ತು ವಾಯಿಲ್ ಸೀರೆಗಳು ಮೇಜಿನ ಮೇಲೆ ಬಗೆ ಬಗೆಯ ಪ್ರಸಾಧನೋಪಕರಣಗಳು. ಐವತ್ತು ರೂಪಾಯಿಗಳಲ್ಲಿ ಇಷ್ಟೆಲ್ಲಾ ಹೇಗೆ ಬರಬೇಕು ? ಮೈಸೂರಿಗೆ ಬಂದ ಒಂದೆರಡು ದಿನಕ್ಕೇ ಲತಾಂಗಿ ತಿಳಿದುಕೊಂಡಳು, ತನ್ನ ಬಂಧುವಿನ ನಿಜವಾದ ವೃತ್ತಿಯೇನೆಂಬು ದನ್ನು. ತುಲಸಿಯ ಅಣ್ಣ ಮೋಹನಕುಮಾರ್ ಬೆಂಗಳೂರಿಗೆ ಬಂದಿದ್ದಾಗ ತಂಗಿಯ ನಡತೆಯ ವಿಚಾರದಲ್ಲಿ ಸಂದೇಹದ ಮಾತುಗಳನ್ನಾಡಿದುದು

ಲತಾಂಗಿಗೆ ನೆನಪಾಯಿತು

ಈಗ ತುಲಸಿ ಸ್ವತಂತ್ರೆ ತಂದೆ ತಾಯಿ ಅಣ್ಣ ತಮ್ಮಂದಿರ ಸಹಾಯ ವಿಲ್ಲದೆ ತನ್ನ ಜೀವನ ತಾನೇ ಸುಗಮವಾಗಿ ನಡೆಸಿಕೊಳ್ಳುತ್ತಿದ್ದಾಳೆ ಆದರೆ ಅವಳು ನಿಜವಾಗಿ ಸ್ವತಂತ್ರಳೇ? ಈಗಾಗಲೆ ಅವಳ ಜೀವನದಲ್ಲಿ ಒಬ್ಬರಿಗಿಂತ ಹೆಚ್ಚುಮಂದಿ ಪುರುಷರು ಅಧಿಕಾರ ನಡೆಸಿದ್ದಾರೆ. ವೇಶ್ಯಾಜೀವನ ಸ್ವತಂತ್ರ ವಲ್ಲ ದೇಹವಿಕ್ರಯದಿಂದ ಬಂದ ಹಣ ಸ್ವತಂತ್ರ ಸಂಪಾದನೆಯಲ್ಲ

ರೂಪದ ಆಕರ್ಷಣೆಯನ್ನು ಲತಾ ಅರಿತಿದ್ದಳು ತುಲಸಿಗಿಂತ ಹೆಚ್ಚು ರೂಪವತಿಯಾದ ತಾನು ಅಪೇಕ್ಷಿಸಿದರೆ ಪುರಷರನ್ನು ಆಕರ್ಷಿಸಿ ದಾಸರನ್ನಾಗಿ ಮಾಡಿಕೊಳ್ಳಬಹುದೆಂದು ಅವಳಿಗೆ ತಿಳಿದಿತ್ತು ಆದರೆ ಅದಕ್ಕಾಗಿ ತನ್ನ ಆತ್ಮಗೌರವ ಮತ್ತು ಸ್ವಾತಂತ್ರ್ಯದ ಬಲಿದಾನವಾಗುವುದೆಂಬುದನ್ನು ನೆನಸಿ ಕೊಂಡಾಗ ಅವಳಿಗೆ ರೋಮಾಂಚನವಾಯಿತು

ಕಾಲೇಜಲ್ಲಿ ಓದುತ್ತಿದ್ದಾಗಿನಿಂದ ಪುರುಷರಲ್ಲಿ ಸಲಿಗೆಯಿಂದ ವರ್ತಿಸು ವುದು ಲತಾಂಗಿಯ ಅಭ್ಯಾಸ ಪಾಠ ಪ್ರವಚನಗಳಲ್ಲಿ ಅವಳು ದಿಟ್ಟತನದಿಂದ ತನ್ನ ಸಹಪಾಠಿ ವಿದ್ಯಾರ್ಥಿಗಳೊಡನೆ ವಾದಿಸುವಳು ಆದರೆ ಸಲಿಗೆ ಸಭ್ಯತೆಯ ಸೀಮೆಯನ್ನು ದಾಟಿ ಕಾಮುಕತೆಯ ಕಡೆ ತಿರುಗಿದಾಗ ಅವಳ ಪ್ರವೃತ್ತಿ ಉರಿದೇಳುವುದು ತನ್ನ ಏಕಾಂತ ಸ್ವಾತಂತ್ರ್ಯ ಗೌರವಗಳನ್ನು ಅಪಹರಿ ಸಲು ಬಂದ ಕಳ್ಳನಂತೆ ಅವನನ್ನು ದ್ವೇಷಿಸುವಳು ಪುರುಷರಿಗೆ ಅಧೀನ ಳಾಗದೆ, ಕಾಮ ಪ್ರೇಮಗಳಿಂದ ದೂರವಾಗಿ ಹೃದಯದ ಏಕಾಂತ ಪವಿತ್ರತೆ ಸ್ವಾತಂತ್ರ್ಯಗಳನ್ನು ರಕ್ಷಿಸಿಕೊಳ್ಳುವುದೇ ಹೆಣ್ಣಿನ ಆದರ್ಶವೆಂದು ಅವಳು ಭಾವಿಸಿದ್ದಳು. ಅವಳು ಮದುವೆಯಾದದ್ದು ತಾಯಿಯ ಹಿಡಿತದಿಂದ ತಪ್ಪಿಸಿ ಕೊಳ್ಳುವ ಉದ್ದೇಶದಿಂದ ಈಗ ಅವಳು ಮದುವೆಯೂ ಒಂದುಬಗೆಯ ದಾಸ್ಯ ವೆಂದು ಕಂಡು ಅದರಿಂದ ಬಿಡುಗಡೆ ಹೊಂದಲು ಪ್ರಯತ್ನಿಸುತ್ತಿದ್ದಳು.

ಸ್ತ್ರೀಯು ಪುರುಷನ ಕಾಮವಸ್ತುವೆಂಬ ಭಾವನೆಯೇ ಪ್ರಾಚೀನ ಕಾಲ ದಿಂದ ಸ್ತ್ರೀ ಸ್ವಾತಂತ್ರ್ಯಕ್ಕೆ ಆತಂಕರೂಪವಾಗಿದೆಯೆಂದು ಅವಳಿಗೆ ತೋರಿತು. ಹೆಂಗಸು ಜೀವನಕ್ಕಾಗಿ ಯಾವ ವೃತ್ತಿಯನ್ನು ಅನುಸರಿಸಿದರೂ ಕಾಮ ಅಡ್ಡ ಬರುತ್ತದೆ ಕಾಮವನ್ನು ಸುಂದರವಾಗಿ ಆಕರ್ಷಕವಾಗಿ ವರ್ಣಿಸಿದ ಕವಿ ಗಳೆಲ್ಲರೂ ಪುರುಷರೇ ಅವರೆಲ್ಲರೂ ಹೆಂಗಸಿನ ಸುತ್ತ ಕಾಮದಾಸ್ಯದ

ಮುಳ್ಳು ಬೇಲಿ ಕಟ್ಟಿದ್ದಾರೆ ಸ್ತ್ರೀಪುರುಷರ ಸಂಬಂಧ ಕಾಮದಿಂದ ಕಲುಷಿತವಾಗಿದೆಯೆಂದೂ, ಕಾಮದಿಂದ ದೂರವಾಗಿದ್ದರೆ ಆ ಸಂಬಂಧ ಇನ್ನೂ ಹೆಚ್ಚು ರಮ್ಯವೂ, ಸಂದರವೂ, ಪವಿತ್ರವೂ, ಆಗುವುದೆಂದೂ ಬುದ್ಧಿಮತಿಯಾದ ಅವಳು ತಿಳಿದಿದ್ದಳು ಆದರೆ ಪುರುಷರು ಇದನ್ನು ಅರಿಯುವ ಬಗೆ ಹೇಗೆ ? ಪಶುಗಳಂತೆ ಪ್ರತಿಯೊಬ್ಬ ಹೆಂಗಸನ್ನೂ ಕಾಮದೃಷ್ಟಿಯಿಂದ ನೋಡುವುದು ಪುರುಷನ ಸ್ವಭಾವ ಈ ವಿಷಯದಲ್ಲಿ ಅವರು ಅರಣ್ಯದ ಹಿಂಸಪಶುಗಳಿಗಿಂತ ಊರನಾಯನ್ನು ಹೆಚ್ಚಿಗೆ ಹೋಲುವರೆಂದು ಅವಳು ಭಾವಿಸಿದ್ದಳು "ತಂದೆಯ ಮನೆಯಲ್ಲಿ ಒಂದು ನಾಯಿಂದ ತಪ್ಪಿಸಿ ಕೊಳ್ಳಲು ಬೆಂಗಳೂರಿಗೆ ಬಂದು ಮತ್ತೊಂದು ನಾಯನ್ನು ಮದುವೆಯಾದೆ ಅದರಿಂದ ಬಿಡುಗಡೆಯಾಗಲು ಮೈಸೂರಿಗೆ ಬಂದರೆ ನಾಯಿಗಳ ಗುಂಪೇ ಎದುರಿಗೆ ನಿಂತಿದೆ· ಈ ಕಾಮದಾಸ್ಯದಿಂದ ಹೆಣ್ಣಿಗೆ ನಿಸ್ತಾರವೇ ಇಲ್ಲವೇ ?" ಎಂದು ಅವಳಿಗೆ ತೋರಿತು

ಪುರುಷರಿಂದ ಸುತ್ತುವರಿಯಲ್ಪಟ್ಟು ಹೆಜ್ಜೆ ಹೆಜ್ಜೆಗೂ ಅವರ ಸಹಾಯವನ್ನು ಅಪೇಕ್ಷಿಸುವ ಹೆಣ್ಣು ಈ ಪರಿಸ್ಥಿತಿಯಲ್ಲಿ ಏನು ಮಾಡುವುದು ಸಾಧ್ಯ ? ಪುರುಷನ ಕಾಮಕ್ಕೆ ಬಲಿಯಾಗುವುದೊಂದೇ ಅವಳ ಗತಿ ಅಪೇಕ್ಷಿಸಿದ್ದನ್ನು ಕೊಡದೆಹೋದಾಗ ಮಗು ಅಳುವುದು, ರಗಳೆ ಮಾಡುವುದು ಪುರುಷರೂ ಮಕ್ಕಳಂತೆಯೇ ವರ್ತಿಸುವರೆಂಬುದಕ್ಕೆ ಅವಳಿಗೆ ಸಾಕಾದಷ್ಟು ನಿದರ್ಶನಗಳು ದೊರೆತಿದ್ದವು

ಈ ವಿಷಚಕ್ರದಿಂದ ಬಿಡುಗಡೆಯಾಗಲು ಹೆಣ್ಣಿಗೊಂದು ದಾರಿಯಿದೆ ಅಂತರಂಗದ ಆತ್ಮ ಸ್ವಾತಂತ್ರ್ಯಗಳನ್ನು ಬಿಟ್ಟುಕೊಡದೆ ದೇಹವನ್ನು ಮಾತ್ರ ಕಾಮತೃಪ್ತಿಗಾಗಿ ಪುರುಷ ಪಶುವಿನ ಸ್ವಾಧೀನಪಡಿಸಬಲ್ಲ ಅಪೂರ್ವಶಕ್ತಿ ಹೆಂಗಸಿಗಿರುತ್ತದೆ ಹೆಣ್ಣಿನಂತಹ ಸ್ವರ್ಗೀಯ ಭಾವನೆಗಳ ದೇವಕಮಲವನ್ನು ಸೃಷ್ಟಿಸಿ ಪುರುಷ ಕಾಮನೆಯ ಪಾಶವಸರೋವರದಲ್ಲಿ ಹಾಕಿದ ಪ್ರಕೃತಿದೇವಿ ಹೆಣ್ಣಿನ ರಕ್ಷಣೆಗಾಗಿ ಕೊಟ್ಟಿರುವ ಮಹಾಸ್ತ್ರವೇ ಅದೆಂದು ಲತಾ ತಿಳಿದುಕೊಂಡಿದ್ದಳು ಹೆಂಗಸು ಪುರುಷ ಪಶುವನ್ನು ಸ್ವಾಧೀನಪಡಿಸಿ ಕೊಳ್ಳಲು ಅಪೇಕ್ಷಿಸಿದಾಗ ಈ ಶಕ್ತಿಯನ್ನು ಉಪಯೋಗಿಸಬಲ್ಲಳು. ರೂಪವತಿಯಾದ ತಾನು ಈ ಶಕ್ತಿಯಿಂದ ಎಂತಹ ಪುರುಷನನ್ನಾದರೂ ಸ್ವಾಧೀನಪಡಿಸಿ

ಕೊಳ್ಳಬಲ್ಲೆನೆಂದು ಅವಳು ತಿಳಿದಿದ್ದಳು ಆದರೆ ಪರಸ್ಪರ ಆಕರ್ಷಣೆ ಪ್ರತಿಸ್ಪಂದನೆಗಳಿಂದ ಪರವಶತೆಯನ್ನುಂಟುಮಾಡದ ದೈಹಿಕ ಸಂಮರ್ದನವೊಂದು ಪಶುವೃತ್ತಿ ಈ ಸುಂದರದೇಹವನ್ನು ಇಂತಹ ಅಪಚಾರಕ್ಕೀಡುಮಾಡುವುದು ಗುರುತರ ಅಪರಾಧವೆಂದು ಲತಾಂಗಿ ಭಾವಿಸಿದ್ದಳು ತಾನು ಚಿಕ್ಕಂದಿನಿಂದ ಯಾವುದರಿಂದ ದೂರವಾಗಲು ಅಪೇಕ್ಷಿಸಿದ್ದಳೋ ಆ ನಾಗಪಾಶವನ್ನು ಈಗ ತಾನಾಗಿ ಕೊರಳಿಗೆ ಸುತ್ತಿಕೊಳ್ಳಲು ಅವಳು ಸಿದ್ಧಳಾಗಿರಲಿಲ್ಲ

ಈ ವಿಚಾರಗಳನ್ನು ಯೋಚಿಸುತ್ತ ಮಲಗಿದ್ದಂತೆ ಲತಾಂಗಿಗೆ ತನ್ನ ಜೀವನದ ಪ್ರಾಮುಖ್ಯ ಘಟನೆಗಳು ಒಂದೊಂದಾಗಿ ನೆನಪಿಗೆ ಬಂದವು

— ೪ —

## ಸ್ಮೃತಿ ಚಿತ್ರ—ಲತಾಂಗಿಯ ಬಾಲ್ಯ

ಲತಾಂಗಿಯ ಸಾಕುತಂದೆ ವಿಠಲರಾಯರು ಮಂಗಳೂರಲ್ಲಿ ಬಸ್ ಕಂಪೆನಿಯೊಂದರ ಮಾಲೀಕರು ಒಂದುಸಾರಿ ಅವರು ಕೊಲ್ಲೂರಿಗೆ ತೀರ್ಥ ಯಾತ್ರೆ ಹೋಗಿದ್ದಾಗ ಲತಾಂಗಿಯ ತಾಯಿ ರತ್ನಮ್ಮನ ಪರಿಚಯವಾಯಿತು. ರತ್ನಮ್ಮ ಗಂಗೂಲಿಯ ವೇಶ್ಯೆಯರ ಮನೆತನದಲ್ಲಿ ಹುಟ್ಟಿದ ಸುಂದರ ತರುಣಿ ವಿಠಲರಾಯರ ಪರಿಚಯವಾದಾಗ ಅವಳಿಗೆ ಸುಮಾರು ೨೮ ವರ್ಷ ವಯಸ್ಸು ಲತಾಂಗಿ ಹತ್ತು ವರ್ಷದ ಬಾಲಿಕೆ

ಪ್ರಥಮ ದರ್ಶನದಲ್ಲೇ ಪರಸ್ಪರ ಪ್ರೇಮ ಉಂಟಾಯಿತು ತನ್ನನ್ನೂ ತನ್ನ ಮಗಳನ್ನೂ ಸುಖವಾಗಿ ಸಾಕಬಲ್ಲ ಶ್ರೀಮಂತನೊಬ್ಬನನ್ನು ಹುಡುಕುವುದಕ್ಕಾಗಿ ರತ್ನಮ್ಮ ಅಲ್ಲಿಗೆ ಬಂದಿದ್ದಳು ವಿಠಲರಾಯರು ಅವಳ ಅಪೇಕ್ಷೆಗೆ ತಕ್ಕಂತಿದ್ದುದರಿಂದ ಮಂಗಳೂರಿಗೆ ಬಂದು ಅವರ ಪ್ರೇಮಪತ್ನಿಯಾಗಿರಲು ರತ್ನಮ್ಮ ಒಪ್ಪಿದಳು ಸಂಗಡಿದ್ದ ಮಧ್ಯಸ್ಥಗಾರರು ವ್ಯವಹಾರವನ್ನು ಉಭಯ ಸಮ್ಮತವಾಗಿ ಕುದುರಿಸಿದರು ಕೊಲ್ಲೂರಿನ ಪ್ರಯಾಣಿಕರ ಬಂಗಲೆಯಲ್ಲಿ ಉಳಿದುಕೊಂಡಿದ್ದ ವಿಠಲರಾಯರನ್ನು ನೋಡಲು ರತ್ನಮ್ಮ ಹೋಗಿದ್ದಾಗ ಲತಾಂಗಿಯೂ ಸಂಗಡಿದ್ದಳು. ತನ್ನನ್ನು ವಿಠಲರಾಯರು ತೊಡೆಯ ಮೇಲೆ

ಕುಳ್ಳಿರಿಸಿಕೊಂಡು ಎರಡು ಕೆನ್ನೆಗಳಿಗೂ ಮುತ್ತಿಟ್ಟು ಕೈಗೆ ಎರಡು ರೂಪಾಯಿ ಕೊಟ್ಟದ್ದು ಅವಳಿಗೆ ಚೆನ್ನಾಗಿ ನೆನಪಿತ್ತು.

ರತ್ನಮ್ಮ ಮಂಗಳೂರಿಗೆ ಬರುತ್ತಲೆ ವಿಠಲರಾಯರು ಅವಳ ವಾಸಕ್ಕಾಗಿ ಕದರಿಯಲ್ಲಿ ಒಂದು ಮನೆ ಗೊತ್ತುಮಾಡಿದರು. ಬೇಕಾದ ಸಾಮಾನು ಸರಂಜಾಮುಗಳನ್ನು ಕೊಟ್ಟರು ಮಗಳ ವಿದ್ಯಾಭ್ಯಾಸಕ್ಕೆ ಏರ್ಪಡಿಸಿದರು ಇದಾದ ಐದಾರು ವರ್ಷಕ್ಕೆ ವಿಠಲರಾಯರ ವಿವಾಹಿತ ಪತ್ನಿ ಮೃತಳಾದ್ದರಿಂದ ಬಂದರ್ ರಸ್ತೆಯಲ್ಲಿದ್ದ ವಾಸದ ಮನೆಯನ್ನು ಬಸ್ ಕಛೇರಿಗೆ ಬಿಟ್ಟುಕೊಟ್ಟು ರತ್ನಮ್ಮನ ಮನೆಯಲ್ಲೇ ತಾವೂ ವಾಸ ಮಾಡಲು ಪ್ರಾರಂಭಿಸಿದರು ವಿಠಲರಾಯರ ಮಗ ಕಮಲಾಕ್ಷನೂ ಅವರ ಸಂಗಡಿದ್ದ ತಾಯಿಲ್ಲದ ಆ ಹುಡುಗನನ್ನು ರತ್ನಮ್ಮ ಆದರದಿಂದ ನೋಡಿಕೊಳ್ಳುತ್ತಿದ್ದಳು

ಕಮಲಾಕ್ಷ ಲತಾಂಗಿ ಇಬ್ಬರ ವಿದ್ಯಾಭ್ಯಾಸವೂ ಒಟ್ಟಿಗೆ ನಡೆಯುತ್ತಿತ್ತು ಕಮಲಾಕ್ಷ ಲತಾಂಗಿಗಿಂತ ನಾಲ್ಕುವರ್ಷ ಚಿಕ್ಕವನು ಪಾಠಕ್ಕಿಂತ ಆಟದಲ್ಲಿ ಹೆಚ್ಚು ಆಸಕ್ತಿ ಲತಾಂಗಿ ಅವನಿಗಿಂತ ನಾಲ್ಕು ತರಗತಿ ಮೇಲಿದ್ದಳು ವಿಠಲರಾಯರು ಇಬ್ಬರಿಗೂ ಒಂದೊಂದು ಬೈಸಿಕಲ್ ತೆಗೆದುಕೊಟ್ಟಿದ್ದರು ಇಬ್ಬರೂ ಒಟ್ಟಿಗೆ ಒಂದೇ ಪಾಠಶಾಲೆಗೆ ಹೋಗುವರು ಮನೆಯಲ್ಲಿ ಕಮಲಾಕ್ಷನ ಪಾಠ ಪ್ರವಚನಗಳ ಮೇಲ್ವಿಚಾರಣೆಯನ್ನೂ ಲತಾಂಗಿಯೇ ನೋಡಿಕೊಳ್ಳುತ್ತಿದ್ದಳು ಈ ಎಲ್ಲ ಕಾರಣಗಳಿಂದ ಕಮಲಾಕ್ಷ ತನ್ನ ಸಹಪಾಠಿ ವಿದ್ಯಾರ್ಥಿಗಳೊಡನೆ ಹೆಚ್ಚು ಸಲಿಗೆಯಿಂದ ವರ್ತಿಸುತ್ತಿರಲಿಲ್ಲ ವಿರಾಮಕಾಲವೆಲ್ಲವನ್ನೂ ಲತಾಂಗಿಯೊಡನೆ ಕಳೆಯುವನು.

ನಾಲ್ಕೈದು ವರ್ಷ ಈ ರೀತಿ ಕಳೆದ ಮೇಲೆ ಒಂದು ಭಾನುವಾರದ ಮಧ್ಯಾಹ್ನ ಲತಾಂಗಿ ಮತ್ತು ಕಮಲಾಕ್ಷ ಮನೆಯಲ್ಲಿ ಕೇರಂ ಆಡುತ್ತ ಕುಳಿತಿದ್ದರು. ವಿಠಲರಾಯರು ಊರಲ್ಲಿರಲಿಲ್ಲ ರತ್ನಮ್ಮ ಒಳಗೆ ಮಲಗಿದ್ದಳು. ಆಟದಲ್ಲಿ ಲತಾಂಗಿ ಕಮಲಾಕ್ಷನ ಮೂರು ಕಾಯಿಗಳನ್ನು ಒಂದೇ ಸಾರಿಗೆ ಹೊಡೆದಳು. ಸೋಲು ಸಮೀಪಿಸಿದಂತೆ ಆಟದಲ್ಲಿ ಅವನ ಆಸಕ್ತಿ ಕಡಿಮೆಯಾಯಿತು. ಅಡ್ಡಾದಿಡ್ಡಿಯಾಗಿ ಆಡುತ್ತಾ ಲತಾಂಗಿಯ ಗೆಲುವಿಗೆ ಸಹಾಯ ಮಾಡುತ್ತಿರುವಂತೆ ಕಂಡಿತು.

ಕೇರಂ ಆಟದಲ್ಲಿ ಕಮಲಾಕ್ಷ ತನಗಿಂತ ಚತುರನೆಂದು ತಿಳಿದಿದ್ದ

ಲತಾಂಗಿ ಈ ದಿನ ಅವನ ಉಪೇಕ್ಷಾವರ್ತನೆ ಕಂಡು ಆಶ್ಚರ್ಯದಿಂದ ಕೇಳಿದಳು

"ಇದೇನು ಕಮಲು, ಬೇಕೆಂದು ಹೀಗೆ ಅಡುತ್ತಿದ್ದೀಯೆ ಆಟದಲ್ಲಿ ಗೆಲ್ಲುವ ಇಷ್ಟವಿಲ್ಲವೇ ?"

"ಗೆದ್ದರೇನು ಸೋತರೇನು ? ಪಣವಿಟ್ಟು ಆಡಿದರೆ ಪ್ರತಿ ಆಟದಲ್ಲಿಯೂ ನಾನೇ ಗೆಲ್ಲಬಲ್ಲೆ "

"ಹಾಗಾದರೆ ಪಣಕ್ಕೇ ಆಡೋಣ ಏನು ಪಣವಿಡುವೆ ಹೇಳು ? ಗೆದ್ದವರು ಸೋತವರ ಬೆನ್ನಮೇಲೆ ನಾಲ್ಕುಸಾರಿ ಗುದ್ದಬೇಕು"

ಲತಾ ಹಾಸ್ಯಕ್ಕಾಗಿ ಹೇಳಿದ ಪಣಕ್ಕೆ ಕಮಲಾಕ್ಷ ಒಪ್ಪಿಕೊಂಡ ಆ ಸಾರಿಯೂ ಅವನಿಗೆ ಸೋಲಾಯಿತು ನಗುತ್ತಾ ಬೆನ್ನು ತಿರುಗಿಸಿ "ಗಟ್ಟಿಯಾಗಿ ಗುದ್ದು ಹಾಕು, ಲತಾ, ನಿನ್ನ ಕೈಯಿಂದ ಪೆಟ್ಟುತಿಂದು ಬಹಳ ದಿನವಾಯಿತು" ಎಂದ

. ಲತಾ ನಗುತ್ತ ಗುದ್ದಿನ ಶಾಸ್ತ್ರ ಮಾಡಿದಳು

ಕಮಲಾಕ್ಷ ಲತಾಂಗಿಯ ಕೈಯನ್ನು ಹಿಡಿದು "ಪಾಪ ನೋವಾಗಿರ ಬೇಕು, ಈ ಕೋಮಲ ಹಸ್ತಗಳಿಗೆ" ಎಂದು ಹೇಳಿ ಅಂಗೈಯನ್ನು ಸವರಿದ ಅವನ ಕಣ್ಣುಗಳು ನಗುತ್ತಿದ್ದವು

ಲತಾ ಕೈಯನ್ನು ಬಿಡಿಸಿಕೊಂಡು "ಮುಂದಿನ ಆಟಕ್ಕೆ ಇದು ಬೇಡಪ್ಪ, ಇನ್ನೇನಾದರೂ ಪಣ ಕಟ್ಟೋಣ" ಎಂದಳು

"ಆಗಬಹುದು ಗುದ್ದಿನ ಬದಲಿಗೆ ಮುದ್ದು"

ಲತಾಂಗಿಗೆ ಅವನ ಮಾತು ಕೂಡಲೆ ಅರ್ಥವಾಗಲಿಲ್ಲ ಹುಡುಗ ಪ್ರಾಸಕ್ಕಾಗಿ ಮಾತಿಗೆ ಮಾತು ಜೋಡಿಸುತ್ತಿರುವನೆಂದು ಭಾವಿಸಿ "ಏನು ಹೇಳಿದೆ ?" ಎಂದಳು

ಕಮಲು ಉತ್ಸಾಹದಿಂದ ಕಂಪಿತವಾದ ಕಂಠದಿಂದ ಹೇಳಿದ "ಮುತ್ತು ಲತಾ ನಿನ್ನ ಕೆಂಪು ತುಟಿಗಳನ್ನು ನೋಡಿದರೆ ಮುತ್ತು ಕೊಡಬೇಕೆನ್ನಿಸುತ್ತದೆ"

ಲತಾ ಸ್ತಂಭಿತೆಯಾದಳು ಗುಲಾಬಿ ರಂಗಿನ ಅವಳ ತುಟಿಗಳು ತಾಂಬೂಲ ರಾಗದಿಂದ ಹವಳಗಳಂತೆ ಹೊಳೆಯುತ್ತಿದ್ದವು. ಇಪ್ಪತ್ತುವರ್ಷದ

ಆ ಅನಾಘ್ರಾತ ಪುಷ್ಪವನ್ನು ನೋಡಿ ಹದಿನಾರು ವರ್ಷದ ಆ ಬಾಲಕನಲ್ಲಿ ಕಾಮು ಸಂಚಾರವಾದದ್ದರಲ್ಲಿ ಆಶ್ಚರ್ಯವೇನು ?

ಲತಾ ಕೋಪದಿಂದ ಪಟಾರನೆ ಅವನ ಕೆನ್ನೆಗೆ ಹೊಡೆದಳು !

ಕಮಲಾಕ್ಷನಿಗೆ ಆಶಾಭಂಗವಾಯಿತು ಏಟು ಬಲವಾಗಿದ್ದುದರಿಂದ ಕೆನ್ನೆಯಮೇಲೆ ನಾಲ್ಕು ಬೆರಳುಗಳೂ ಕಾಣುತ್ತಿದ್ದವು. ಎದ್ದುನಿಂತು ಭೀತಿಯ ಬಿರುಗಣ್ಣುಗಳಿಂದ ಅವನು ಕ್ಷಣಕಾಲ ಲತಾಂಗಿಯ ಮುಖ ನೋಡಿದ ತುಟಿಗಳು ಸ್ಫುರಿಸುತ್ತಿದ್ದುವು ಕಣ್ಣುಗಳಿಂದ ನೀರು ಸುರಿಯುತ್ತಿತ್ತು

ಲತಾಂಗಿಗೆ ಪಶ್ಚಾತ್ತಾಪವಾಯಿತು, ಹುಡುಗ ತಿಳಿಯದೆ ಏನೋ ಹೇಳಿದರೆ ಅಷ್ಟೊಂದು ಜೋರಾಗಿ ಕೆನ್ನೆಗೆ ಹೊಡೆಯುವುದೇ ? ಹೃದಯದಲ್ಲಿ ಕರುಣೆ ಹುಟ್ಟಿತು "ಪೆಟ್ಟಾಯಿತೇ ಕಮಲು" ಎಂದು ಹೇಳಿ ಹತ್ತಿರ ಹೋಗಿ ಕಣ್ಣೀರೊರೆಸಿದಳು ಮೈಗೆ ಮೈತಾಕಿ ಕಮಲಾಕ್ಷನಿಗೆ ಧೈರ್ಯ ವಾಯಿತು ಲತಾಂಗಿಯ ದೇಹಪರಿಮಳ ಅವನನ್ನು ಉನ್ಮತ್ತನನ್ನಾಗಿ ಮಾಡಿತು ಇದ್ದಕ್ಕಿದ್ದಂತೆ ತೋಳನ್ನು ಭುಜದ ಮೇಲಿಟ್ಟು ರಂಗಾದ ತುಂಬು ತುಟಿಗಳನ್ನು ಚುಂಬಿಸಿದ,

ಲತಾಂಗಿಯ ಕೋಪ ಪುನಃ ಕೆರಳಿ ಅವನನ್ನು ಬಲವಾಗಿ ತಳ್ಳಿದಳು ಕಮಲಾಕ್ಷ ದೊಪ್ಪನೆ ಕೆಳಗೆ ಬಿದ್ದು ಕೇರಂ ಬೋರ್ಡಿಗೆ ತಲೆತಾಕಿ ಗಾಯವಾಯಿತು ಶಬ್ದಕ್ಕೆ ಎಚ್ಚರವಾಗಿ ರತ್ನಮ್ಮ ನಡುಮನೆಗೆ ಬಂದು ಅನಾಹುತವನ್ನು ನೋಡಿ "ಏಕೆ ಲತಾ ! ಏನಾಯಿತು ?" ಎಂದು ಕೇಳಿದಳು

"ಆ ನಾಯಿಯನ್ನೇ ಕೇಳು" ಎಂದು ಹೇಳಿ ಲತಾ ಅಲ್ಲಿ ನಿಲ್ಲದೆ ಹೊರಟುಹೋದಳು

ಆ ದಿನ ಸಂಜೆ ಲತಾ ತನ್ನ ಕೊಠಡಿಯಲ್ಲಿ ಏನೋ ಓದುತ್ತ ಕುಳಿತಿದ್ದಾಗ ರತ್ನಮ್ಮ ಅಲ್ಲಿಗೆ ಬಂದಳು ತಾಯಿಯ ರೀತಿಯನ್ನು ನೋಡಿ ಲತಾ ಅವಳ ಮನಸ್ಸಿನ ಅಸಮಾಧಾನವನ್ನು ತಿಳಿದುಕೊಂಡಳು.

"ಅರಿಯದ ಹಸುಳೆಯನ್ನು ಆ ರೀತಿ ಹೊಡೆದದ್ದು ಸರಿಯೋ ಲತಾ ?" —ರತ್ನಮ್ಮ ಕೇಳಿದಳು.

"ತಪ್ಪು ನನ್ನದಲ್ಲ ಅವನೇನು ಮಾಡಿದ ಗೊತ್ತೇ ಅಮ್ಮಾ ?"

"ಕಮಲೂನ ಕೇಳಿ ಎಲ್ಲ ತಿಳಿದುಕೊಂಡೆ ಅವನು ಹುಡುಗಾಟಕ್ಕೆ ಏನೋ ಹೇಳಿರಬಹುದು ಅಷ್ಟಕ್ಕೆ ನೀನು ಹಾಗೆ ಮಾಡುವುದೇ ? ಒಂದು ಗಂಟೆ ರಕ್ತ ಸುರಿಯುವುದು ನಿಲ್ಲಲಿಲ್ಲ ಇನ್ನೂ ಮಲಗಿದ್ದಾನೆ"

"ಕರ್ಮಕ್ಕೆ ತಕ್ಕ ಫಲ ಇನ್ನಾದರೂ ಬುದ್ಧಿ ಕಲಿತು ಕೊಳ್ಳುತ್ತಾನೆ."

"ಹಾಗಲ್ಲ ಬುದ್ಧಿ ಕಲಿಸುವುದು ಲತಾ"

"ಹಾಗಲ್ಲದಿದ್ದರೆ ಮತ್ತೆ ಹೇಗಮ್ಮ ? ಬಾಚಿ ತಬ್ಬಿಕೊಂಡು ಮುತ್ತಿಡ ಬೇಕಾಗಿತ್ತೆ ?"

"ಹಾಗೆ ಮಾಡಿದ್ದರೂ ಸರಿಯೇ ಹುಡುಗನ ಚಪಲ ತೀರಿ ಅನಾಹುತ ತಪ್ಪುತ್ತಿತ್ತು"

ಲತಾಂಗಿ ಅವಾಕ್ಕಾದಳು ಮಂಗಳೂರಿಗೆ ಬರುವ ಮುನ್ನ ತಾಯಿ ನಡೆಸುತ್ತಿದ್ದ ವೇಶ್ಯಾಜೀವನದ ಲಜ್ಜಾಹೀನ ವಿವರಗಳು ನೆನಪಿಗೆ ಬಂದವು. ಕಟುಸ್ವರದಿಂದ ಹೇಳಿದಳು, "ಹೌದು ನೀನು ತಂದೆಯ ಸೂಳೆಯಾದ ಮೇಲೆ ನಾನು ಮಗನ ಪ್ರೇಯಸಿಯಾಗಬೇಡವೇ ? ಇಷ್ಟು ವಯಸ್ಸಾಗಿ ನಿನಗೆ ಬುದ್ಧಿ ಬರಲಿಲ್ಲವೇ ಅಮ್ಮ ? ಜನರೇನು ಹೇಳುವರೆಂಬ ಪರಿವೆಯೂ ಇಲ್ಲವೇ ನಿನಗೆ ?"

"ನೀನೂ ಈ ಸೂಳೆ ಹೊಟ್ಟೆಯಲ್ಲಿ ಸೂಳೆಜಾತಿಯಲ್ಲಿ ಹುಟ್ಟಿದವಳೆಂಬ ಪರಿವೆಯಿಟ್ಟುಕೊಂಡು ಮಾತಾಡು ಲತಾ ಈಗ ಹತ್ತು ವರ್ಷದಿಂದ ಅವರು ನಮ್ಮನ್ನು ಸಾಕಿ ಸಲಹಿದ್ದಾರೆ ಒಡವೆವಸ್ತ್ರ ಕೊಟ್ಟಿದ್ದಾರೆ. ನಿನ್ನನ್ನು ವಿದ್ಯಾವತಿಯಾಗಿ ಮಾಡಿದ್ದಾರೆ ಅವೆಲ್ಲವನ್ನೂ ಮರೆತುಬಿಡು ವುದೇ ? ಕಮಲು ಅವರ ಒಬ್ಬನೇ ಮಗ ಅವನ ಕೆನ್ನೆಗೆ ಹೊಡೆದು ತಳ್ಳಿ ಗಾಯ ಮಾಡಿದೆಯೆಂದು ತಿಳಿದರೆ ಅವರೇನು ಹೇಳುವರು ?

"ನಿನಗೆ ಅದರ ಚಿಂತೆ ಬೇಡ ತಂದೆಯವರು ಬಂದರೆ ನಾನು ಉತ್ತರ ಕೊಡುತ್ತೇನೆ ನಾನು ಮಾಡಿದ್ದು ತಪ್ಪೆಂದು ಅವರು ಹೇಳಿದರೆ ಮನೆ ಬಿಟ್ಟು ಹೊರಡಲೂ ಸಿದ್ಧ."

ಲತಾಂಗಿಯ ದಿಟ್ಟತನದ ಮಾತನ್ನು ಕೇಳಿ ರತ್ನಮ್ಮ ಅಚ್ಚರಿ ಗೊಂಡಳು.

"ನೀನು ಇಂಗ್ಲಿಷ್ ವಿದ್ಯೆ ಕಲಿತವಳು ತಾಯಿ ನಿನಗೆ ಎದಿರಾಡು ವುದು ಸಾಧ್ಯವೇ? ಆದರೆ ನನ್ನ ಅನುಭವದ ಮಾತನ್ನು ತೆಗೆದು ಹಾಕಬೇಡ ಲತಾ ಇಷ್ಟು ದಿನ ನೀನು ಅವನ ಸಂಗಡ ಸಲಿಗೆಯಿಂದ ನಡೆದುಕೊಂಡದ್ದೇ ಅಲ್ಲವೇ ಈ ಚಾಪಲ್ಯಕ್ಕೆ ಕಾರಣವಾಯಿತು? ನಿನ್ನಂತಹ ರೂಪವತಿಯನ್ನು ನೋಡಿದರೆ ಯಾರ ಮನಸ್ಸು ತಾನೆ ಚಲಿಸುವುದಿಲ್ಲ ಬುದ್ಧಿವಂತಿಕೆಯಿಂದ ಸರಿಪಡಿಸಬಹುದಾದ ವಿಷಯದಲ್ಲಿ ನೀನು ರಂಪು ಮಾಡಿಬಿಟ್ಟೆ" ಎಂದು ಹೇಳಿ ರತ್ನಮ್ಮ ಕೊರಡಿಯಿಂದ ಹೊರಗೆ ಹೋದಳು

ಲತಾ ಬಾಗಿಲು ಹಾಕಿಕೊಂಡು ಕ್ಷಣಕಾಲ ಕನ್ನಡಿಯ ಮುಂದೆ ನಿಂತು ಮುಖ ನೋಡಿಕೊಂಡಳು ಕವಿಯ ವರ್ಣನೆಯಂತೆ ಕಮಲದಂತಹ ಮುಖ, ಕನ್ನೈದಿಲೆಯ ಕಣ್ಣುಗಳು, ಭ್ರಮರದಂತಹ ಮುಂಗುರುಳು ಲತೆಯಂತೆ ಬಳಕುವ ನೀಳವಾದ ದೇಹ ಗಂಗೂಲಿಯ ಸಮುದ್ರ ತಟದಲ್ಲಿ ಮರಳಿನ ಮೇಲೆ ಆಡುತ್ತಾ ಬಾಲ್ಯವನ್ನು ಕಳೆದ ಅವಳ ದೇಹದಲ್ಲಿ ಪಶ್ಚಿಮ ಕರಾವಳಿಯ ನಿವಾಸಿಗಳಿಗೆ ಸಹಜವಾದ ಕೋಮಲತೆ ಲಾವಣ್ಯಗಳು ಎದ್ದು ಕಾಣುತ್ತಿದ್ದವು ರೂಪವತಿಯರ ಮಧ್ಯದಲ್ಲಿಯೂ ಕಣ್ಮನಗಳನ್ನು ಸೆಳೆಯ ಬಲ್ಲ ಅಪೂರ್ವ ರೂಪಿಸಿ ಅವಳು ಪಾಪ! ಆ ಹಸುಳೆ ಕಮಲಾಕ್ಷ ದೀಪವನ್ನು ನೋಡಿದ ಪತಂಗದಂತೆ ಆ ರೂಪಕ್ಕೆರಗಿದುದರಲ್ಲಿ ಆಶ್ಚರ್ಯ ವೇನು?

ಮೇಜಿನ ಮೇಲಿದ್ದ ಮಸಿ ಕುಡಿಕೆಯಲ್ಲಿ ಬೆರಳುಗಳನ್ನು ಅದ್ದಿ ಅವಳು ಮುಖದ ಮೇಲೆ ಮಸಿಯ ಕಲೆಗಳನ್ನು ಹಚ್ಚಿಕೊಂಡಳು. ಈ ರೂಪವೇ ಇಷ್ಟೊಂದು ಅನರ್ಥಕ್ಕೆ ಕಾರಣ? ಅದನ್ನು ಕೆಡಸಿದರೆ? ಶಾಶ್ವತ ವಾಗಿ ಕೆಡಿಸಿಬಿಟ್ಟರೆ? ಮಸಿಯ ಕಲೆಗಳನ್ನು ನೀರಿಂದ ತೊಡೆಯಬಹುದು. ತೊಡೆಯಲಾಗದ ಕಲೆಗಳಿಂದ ರೂಪುಗೆಟ್ಟರೆ ಇಂತಹ ಅನರ್ಥಕ್ಕೆ ಅವಕಾಶವೇ ಇಲ್ಲದಂತಾಗುವುದು

ಆದರೆ ಮುಖ ರೂಪು ಕೆಟ್ಟರೇನಾಯಿತು? ಹೆಣ್ಣಿನ ಅಂಗಾಂಗ ಗಳಲ್ಲಿಯೂ ರೂಪ ಉಚ್ಚಳಿಸಿರುತ್ತಿರುವಾಗ ಮುಖ ಕೆಡಿಸಿಕೊಂಡ ಮಾತ್ರಕ್ಕೆ ಫಲವೇನು? ತನ್ನ ಅವಿವೇಕ ವರ್ತನೆಗೆ ತಾನೇ ನಕ್ಕಳು.

ಮುಖ ತೊಳೆದುಕೊಳ್ಳಲು ಲತಾ ಬಚ್ಚಲುಮನೆಗೆ ಹೊರಟಳು ಕಮಲಾಕ್ಷ ಮಲಗಿದ್ದ ಕೊಟಡಿಯ ಬಾಗಿಲು ತೆರೆದಿತ್ತು ಅವನನ್ನೊಂದು ಸಾರಿ ನೋಡಿ ಹೋಗೋಣವೆಂದು ಒಳಗೆ ಹೋದಳು ಅಲ್ಲಿ ಕಂಡ ದೃಶ್ಯ ಅವಳನ್ನು ಸ್ತಂಭಿತಳಾಗಿ ಮಾಡಿತು ಕಮಲಾಕ್ಷ ಮಂಚದಮೇಲೆ ಮಲಗಿದ್ದ ತಲೆಗೆ ಬ್ಯಾಂಡೇಜ್ ಕಟ್ಟಿತ್ತು. ರತ್ನಮ್ಮ ಪಾರ್ಶ್ವದಲ್ಲಿ ಅರ್ಧಶಾಯಿತೆಯಾಗಿ ಮಲಗಿ ಅವನನ್ನು ಅಪ್ಪಿಕೊಂಡು ತುಟಿಗಳನ್ನು ಮುದ್ದಿಸುತ್ತಾ "ಅವಳು ಕೊಡದಿದ್ದರೇನಾಯಿತು ? ನಾನು ನಿನಗೆ ಬೇಕಾದಷ್ಟು ಕೊಡುತ್ತೇನೆ" ಎನ್ನುತ್ತಿದ್ದಳು.

ಕಮಲಾಕ್ಷ ಮೊದಲು ಲತಾಂಗಿಯನ್ನು ನೋಡಿದ ಮಸಿಯು ಕಲೆಯಿಂದ ವಿಕೃತವಾದ ಅವಳ ಮುಖವನ್ನು ಕಂಡು ವಿಭ್ರಾಂತನಂತೆ ಕಿರಚಿಕೊಂಡ ರತ್ನಮ್ಮ ದಡಾರನೆ ಎದ್ದು ನಿಂತಳು ಕುಪ್ಪುಸದ ಗಂಟು ಬಿಚ್ಚಿ ಸೆರಗು ಅಸ್ತವ್ಯಸ್ತವಾಗಿತ್ತು.

"ನಾಯಿಗೆ ತಕ್ಕ ನಾಯಿ ನಾಳೆಯೇ ನಾನು ಈ ಮನೆಯಿಂದ ಹೊರಟು ಹೋಗುತ್ತೇನೆ" ಎಂದು ಹೇಳಿ ಅವಳು ಹೊರಗೆ ಬಂದಳು

# ಮೂರನೆಯ ತರಂಗ

## ಸ್ಮೃತಿ ಚಿತ್ರ : ಲತಾಂಗಿಯ ದಾಂಪತ್ಯ ಜೀವನ

ಸಾಹುಕಾರ್ ಪದ್ಮನಾಭಯ್ಯನವರ ಪರಿಮಳ ಸೋಪ್ ಫ್ಯಾಕ್ಟರಿಯಲ್ಲಿ ಮಂಗೇಶರಾವ್ ನಗದಿ ಗುಮಾಸ್ತೆ. ಪ್ರತಿತಿಂಗಳ ೧೦ನೇ ತಾರೀಖು ತನಗೆ ಬರುತ್ತಿದ್ದ ೭೫ ರೂಪಾಯಿ ಸಂಬಳದಲ್ಲಿ ಕ್ಯಾಂಟೀನ್, ಸಿಗರೇಟ್ಅಂಗಡಿ ಬಟ್ಟೆಸಾಲ, ಚಿಟ್‌ಫಂಡ್ ಮುಂತಾದವುಗಳಿಗೆ ೫೦ ರೂಪಾಯಿ ತೆಗೆದು ಕೊಂಡು ಉಳಿದ ೨೫ ರೂಪಾಯಿಗಳನ್ನು ತಾಯಿ ಸುಂದರಮ್ಮನಿಗೆ ಕೊಡುತ್ತಿದ್ದ. ಮಂಗೇಶನ ಅಣ್ಣ ಪ್ರಭಾಕರರಾವ್ ಕೊಡುತ್ತಿದ್ದ ೫೦ ರೂಪಾಯಿಯನ್ನೂ ಸೇರಿಸಿ ಸುಂದರಮ್ಮ ಸಂಸಾರ ನೀಗಿಸುತ್ತಿದ್ದಳು.

ಮನೆಯಲ್ಲಿ ಸುಂದರಮ್ಮ, ಮಂಗೇಶರಾವ್, ಅವನ ತಂಗಿ ಲಕ್ಷ್ಮಿ ಈ ಮೂರು ಮಂದಿ ಮಾತ್ರವೇ ಇದ್ದದ್ದು. ಪ್ರಭಾಕರನ ಹೆಂಡತಿ ಖಾಯಿಲೆಯಾಗಿ ಒಂದು ವರ್ಷದಿಂದ ತೌರುಮನೆ ಸೇರಿದ್ದಳು. ಪ್ರಭಾಕರನೂ ಹೆಚ್ಚಿಗೆ ಅತ್ತೆಯ ಮನೆಯಲ್ಲೇ ಇರುತ್ತಿದ್ದ. ಎಂದೋ ಒಂದು ದಿನ ಮನೆಗೆ ಬಂದು ತಾಯಿ ತಂಗಿ ತಮ್ಮಂದಿರನ್ನು ಮಾತಾಡಿಸಿಕೊಂಡು ಹೋಗುವನು. ನಗರದ ಬ್ಯಾಂಕೊಂದರಲ್ಲಿ ಒಳ್ಳೆ ಕೆಲಸ ಸಿಕ್ಕಿ ಕೈತುಂಬ ಸಂಬಳ ಬರುತ್ತಿದ್ದುದರಿಂದ ತಾಯಿಗೆ ಕೊಡುವ ಹಣದಲ್ಲಿ ಲೋಪ ಮಾಡುತ್ತಿರಲಿಲ್ಲ. ಅವಶ್ಯಕವಿದ್ದಾಗ ಒಂದೊಂದು ತಿಂಗಳು ಹೆಚ್ಚು ಹಣವನ್ನು ಕೊಡುವನು. ಅತ್ತೆ ಸೊಸೆಯರಿಗೆ ಸರಿಬೀಳದ್ದರಿಂದ ತಾಯಿಯ ಸಂಗಡ ಒಂದೇ ಮನೆಯಲ್ಲಿ ವಾಸ ಮಾಡಲು ಅವನಿಗಿಷ್ಟವಿರಲಿಲ್ಲ. ಅಲ್ಲದೆ ಬೇರೆ ಕಾರಣಗಳೂ ಇದ್ದವು.

ತಾಯಿಯ ಸಂಗಡ ಜಗಳವಾದ ಮೂರು ತಿಂಗಳಿಗೆ ಲತಾಂಗಿ ಮಂಗೇಶನನ್ನು ಮದುವೆಯಾಗಿ ಈ ಮನೆಯ ಸೊಸೆಯಾಗಿ ಬಂದಳು. ಬೆಂಗಳೂರಲ್ಲಿ ವ್ಯಾಪಾರ ಮಾಡುತ್ತಿದ್ದ ವಿಠಲರಾಯರ ಮಿತ್ರರೊಬ್ಬರು ಮದುವೆ ಗೊತ್ತು ಮಾಡಿದರು. ಮಂಗೇಶನ ಟ್ವೀಡ್ ಸೂಟುಗಳು,

ಬಣ್ಣ ಬಣ್ಣದ ನೆಕ್ ಟೈ, ಚಟ್ಟಿಗಾರ ಇಂಗ್ಲಿಷ್ ಇವುಗಳನ್ನು ನೋಡಿ ಲತಾಂಗಿ ಮರುಳಾಗದಿದ್ದರೂ ತಾಯಿಯ ಬಂಧನದಿಂದ ತಪ್ಪಿಸಿಕೊಳ್ಳಲು ಮದುವೆಗೆ ಒಪ್ಪಿಕೊಂಡಳು ವಿಠಲರಾಯರು ನಾಲ್ಕೈದು ಸಾವಿರ ರೂಪಾಯಿ ಕರ್ಚು ಮಾಡಿ ಮಗಳಿಗೆ ಒಡವೆ ಸೀರೆಗಳು, ಅಳಿಯನಿಗೆ ಸೂಟ್, ಗಡಿಯಾರ ಮುಂತಾದವುಗಳನ್ನು ತಂದು ಕೊಟ್ಟರು ಬೆಂಗಳೂರಿನ ಧರ್ಮಶಾಲೆ ಯೊಂದರಲ್ಲಿ ವಿಜೃಂಭಣೆಯಿಂದಲ್ಲದಿದ್ದರೂ ಗೌರವದಿಂದ ಒಂದೇ ದಿನದಲ್ಲಿ ಮದುವೆ ಮುಗಿಯಿತು ಮದುವೆಯಲ್ಲಿ ರತ್ನಮ್ಮನ ಸಡಗರ ಹೇಳಿತೀರದು ಬಂದಿದ್ದವರಲ್ಲಿ ಅನೇಕರು ರತ್ನಮ್ಮನನ್ನು ಲತಾಂಗಿಯ ಅಕ್ಕನೆಂದು ತಪ್ಪಾಗಿ ತಿಳಿದುಕೊಂಡದ್ದು ಅವಳ ಹಿಗ್ಗಿನ ಕಾರಣವಾಗಿತ್ತು ಮದುವೆ ಮುಗಿಸಿ ಕೊಂಡು ಮಂಗಳೂರಿಗೆ ಹಿಂದಿರುಗಿದಾಗ ವಿಠಲರಾಯರು ಮಗಳ ಕೈಗೆ ಇನ್ನೂರು ರೂಪಾಯಿ ಕೊಟ್ಟು "ಕಾಗದ ಬರೆಯುತ್ತಿರು ಲತಾ. ಹಣ ಬೇಕಾದರೆ ಕೇಳಲು ಸಂಕೋಚ ಪಡಬೇಡ" ಎಂದು ಹೇಳಿದರು

ಬೆಂಗಳೂರಿನ ಉತ್ತರದಲ್ಲಿ ಬೆಳೆಯುತ್ತಿದ್ದ ಹೊಸ ವಿಸ್ತರಣದಲ್ಲಿ ಒಂದು ಕಟ್ಟಡದ ಎರಡನೆಯ ಅಂತಸ್ತಿನಲ್ಲಿ ಮಂಗೇಶರಾಯನ ವಾಸ ಮನೆಯ ಕೆಳಗಿನ ಭಾಗದಲ್ಲಿ ಅಂಗಡಿ ಮುಂಗಟ್ಟುಗಳಿದ್ದವು ಮೇಲೆ ಎರಡು ಸಂಸಾರಗಳಿಗೆ ಪ್ರತ್ಯೇಕ ಮನೆಗಳು ಬಾಡಿಗೆ ತಿಂಗಳಿಗೆ ನಲವತ್ತು ರೂಪಾಯಿ

ಮದುವೆಯಾದ ಮುಂದಿನ ತಿಂಗಳಲ್ಲಿ ಮಂಗೇಶ ಎಂದಿನಂತೆ ೨೫ ರೂಪಾಯಿ ತಂದು ಕೊಟ್ಟಾಗ ಸುಂದರಮ್ಮ "ನಿಮ್ಮಿಬ್ಬರ ಊಟಕ್ಕೆ ಇದು ಸಾಕೇ?" ಎಂದು ಕೇಳಿದಳು ಮಂಗೇಶ ಉತ್ತರ ಕೊಡಲಿಲ್ಲ. ಮರುದಿನ ಲತಾಂಗಿ ತನ್ನ ಪೆಟ್ಟಿಗೆಯಿಂದ ೨೫ ರೂಪಾಯಿ ತೆಗೆದು ಅತ್ತೆಯ ಕೈಗೆ ಕೊಟ್ಟಳು ರಾತ್ರಿ ಮಂಗೇಶ ಮನೆಗೆ ಬಂದಾಗ ಈ ವಿಚಾರ ತಿಳಿದು "ಅಮ್ಮನಿಗೆ ನೀನೇಕೆ ದುಡ್ಡು ಕೊಡುವುದಕ್ಕೆ ಹೋದೆ?" ಎಂದು ಹೆಂಡತಿ ಯನ್ನು ಕೇಳಿದ "ಕೊಡದೆ ಹೋದರೆ ಸಂಸಾರ ನಡೆಯುವುದು ಹೇಗೆ? ನೀವು ಕೊಟ್ಟ ೨೫ ರೂಪಾಯಿ ಮನೆಗೆ ಒಂದು ವಾರಕ್ಕೆ ಸಾಲುವುದಿಲ್ಲ" ಎಂದು ಲತಾ ಉತ್ತರ ಕೊಟ್ಟಳು ಎರಡನೆಯ ತಿಂಗಳೂ ಹಾಗೆಯೇ ಆಯಿತು. ತಂದೆ ಕೊಟ್ಟಿದ್ದ ಹಣದಿಂದ ಪುನಃ ೨೫ ರೂಪಾಯಿ ಮನೆಗೆ ಕೊಟ್ಟಳು.

ತನಗೆ ಬೇಕಾದ ಸೋಪು, ಎಣ್ಣೆ, ಸ್ನೋ ಮುಂತಾದವುಗಳನ್ನು ಕೊಂಡು ಕೊಳ್ಳಲು ೧೫ ರೂಪಾಯಿ ಕರ್ಚು ಮಾಡಿದಳು

ಒಂದುದಿನ ಸುಂದರಮ್ಮ ಸೊಸೆಯ ಸಂಗಡ "ಎಷ್ಟುದಿನ ಈ ರೀತಿ ನಡೆಯುತ್ತದೆ ನಿನ್ನ ಗಂಡ ಸಂಪಾದನೆ ಮಾಡಿದ್ದು ಏನಾಗುತ್ತೋ ದೇವರೇ ಬಲ್ಲ ನಿನಗೂ ಕೊಡುವುದಿಲ್ಲ ಮನೆಗೂ ಕೊಡುವುದಿಲ್ಲ" ಎಂದಳು

"ಆ ವಿಚಾರ ನನಗಿಂತ ನಿಮಗೆ ಚೆನ್ನಾಗಿ ಗೊತ್ತಾಗಬೇಕು" ಎಂದು ಲತಾ ಉತ್ತರ ಕೊಟ್ಟಳು

ಆದಿನ ರಾತ್ರಿ ಮಂಗೇಶ ಮನೆಗೆ ಬಂದಾಗ ತಾಯಿ ಮಗನಿಗೆ ಮಾತು ನಡೆದು ದೊಡ್ಡ ರಗಳೆಯಾಯಿತು "ಪ್ರಭಾಕರ ಮನೆಯಲ್ಲಿ ವಾರಕ್ಕೊಂದು ಸಾರಿ ಊಟ ಮಾಡದಿದ್ದರೂ ತಿಂಗಳಿಗೆ ೫೦ ರೂಪಾಯಿ ಕೊಡುತ್ತಾನೆ. ನೀವು ಗಂಡ ಹೆಂಡರು ೨೫ ರೂಪಾಯಿ ಕೊಟ್ಟರೆ ಹೇಗೆ?" ಎಂದು ಸುಂದರಮ್ಮ ಕೇಳಿದಳು

"ಲತಾ ಕೊಡುವ ೨೫ ರೂಪಾಯಿ ಏನಾಯಿತು?"

"ಅವಳ ತಂದೆ ಕೊಟ್ಟು ಹೋದ ನಾಲ್ಕು ಕಾಸನ್ನು ನಾನು ತೆಗೆದುಕೊಳ್ಳಲೇ? ಕೊಡುವುದಕ್ಕೆ ಬಂದಳು ಬೇಡವೆಂದೆ ನಿನ್ನ ಸಂಪಾದನೆ ಏನಾಗುತ್ತದೆ? ಮುಂದಿನ ತಿಂಗಳು ೫೦ ರೂಪಾಯಿ ಕೊಡದೆ ಹೋದರೆ ಸಂಸಾರ ನಡೆಯುವುದಿಲ್ಲ"

"ನಾನು ೫೦ ರೂಪಾಯಿ ಕೊಡುವುದಿಲ್ಲ. ಮುಂದಿನ ತಿಂಗಳಿಂದ ಬೇರೆ ಮನೆ ಮಾಡುತ್ತೇನೆ."

ಮಂಗೇಶನ ಮಾತು ಕೇಳಿ ಸುಂದರಮ್ಮನಿಗೆ ಕೋಪ ಬಂತು. "ಹೆಂಡತಿ ಬಂದ ಮೇಲೆ ನಾವೆಲ್ಲ ಏಕೆ ಬೇಕು? ಆ ಮಂಗಳೂರು ಸಂಭಂದ ಬೇಡ ಎಂದು ಪ್ರಭಾಕರನಿಗೆ ಹೇಳಿದೆ ಈ ಮನೆಯಲ್ಲಿ ನನ್ನ ಮಾತು ಯಾರು ಕೇಳುತ್ತಾರೆ." ಎಂದು ಮುಂತಾಗಿ ಅರ್ಧ ಗಂಟೆ ಕಾಲ ಬಾಯಿಗೆ ಬಂದಂತೆ ಮಾತಾಡಿದಳು.

ಮಂಗೇಶ ಮಾರುತ್ತರ ಕೊಡಲಿಲ್ಲ. ಕೊಟಡಿಯಲ್ಲಿ ಮಲಗಿಬಿಟ್ಟ. ಆ ದಿನ ರಾತ್ರಿ ಗಂಡ ಹೆಂಡರಿಬ್ಬರಿಗೂ ಊಟವಿಲ್ಲ ಸ್ವಲ್ಪ ಸಮಾಧಾನವಾದ ಮೇಲೆ ಲತಾ ಗಂಡನನ್ನು ಕೇಳಿದಳು. "ಅವರು ಹೇಳುವುದಕ್ಕೆ

ಸರಿಯಾಗಿಯೇ ಇದೆ ನೀವು ಮಾಡುವುದು ನಿಮ್ಮ ಸಂಬಳದ ಹಣ ಏನಾಗುತ್ತದೆ ?”

ಮಂಗೇಶನಿಗೆ ಈ ಮಾತು ಕೇಳಿ ಕೇಳಿ ಸಾಕಾಗಿತ್ತು ಬಿರುಸಾದ ಧ್ವನಿಯಿಂದ ಹೇಳಿದ “ದುಡ್ಡು ! ದುಡ್ಡು ! ದುಡ್ಡು ! ಮೂರು ಹೊತ್ತೂ ದುಡ್ಡಿನ ಹೊರತು ನಿಮಗೆ ಬೇರ ಮಾತೇ ಇಲ್ಲ ”

“ನಿಮ್ಮ ಮನೆಗೆ ಬಂದು ಮೂರು ತಿಂಗಳಾದರೂ ಇದುವರೆಗೆ ನಾನು ದುಡ್ಡಿನ ಮಾತೆತ್ತಿಲ್ಲ ಈ ದಿನ ಅತ್ತೆಯವರು ಇಷ್ಟೊಂದು ಮಾತಾಡಿದ ಮೇಲೆ ಯತ್ನವಿಲ್ಲದೆ ಕೇಳಬೇಕಾಗಿ ಬಂತು ನಿಮ್ಮ ಹಣದ ವಿಚಾರ ಪ್ರಶ್ನಿಸುವ ಅಧಿಕಾರವೂ ಇಲ್ಲವೇ ನನಗೆ ?”

ಮಂಗೇಶನಿಗೆ ತಾನು ತಪ್ಪು ಮಾಡುತ್ತಿರುವೆನೆಂಬ ಅರಿವಾಯಿತು. ಮೂರು ತಿಂಗಳಾದರೂ ಇದುವರೆಗೆ ಪತಿ ಪತ್ನಿಯರಲ್ಲಿ ಪ್ರೇಮ ಮೂಡಿರಲಿಲ್ಲ. ಮೊದಲ ದಿನದಿಂದ ಲತಾಂಗಿ ಗಂಡನಲ್ಲಿ ಹೆಚ್ಚು ಗಾಂಭೀರ್ಯ ಸಂಕೋಚ ಗಳಿಂದ ವರ್ತಿಸುತ್ತಿದ್ದಳು ಒಂದೇ ಕೊಟಡಿಯಲ್ಲಿ ಒಂದೇ ಹಾಸಿಗೆಯ ಮೇಲೆ ಮಲಗಿದ್ದರೂ ಹೆಚ್ಚು ಸಲಿಗೆಗೆ ಅವಕಾಶ ಕೊಟ್ಟಿರಲಿಲ್ಲ ಅವಶ್ಯಕತೆ ಗಿಂತ ಹೆಚ್ಚು ಮಾತಾಡುತ್ತಿರಲಿಲ್ಲ ಒಂದೆರಡು ಸಾರಿ ಮಂಗೇಶ ಮೇಲೆ ಬಿದ್ದಾಗ “ನಾನೇನು ಯಂತ್ರದ ಬೊಂಬೆಯೇ ? ಇಂತಹ ಪಶುವರ್ತನೆ ನನಗೆ ಸರಿಬೀಳುವುದಿಲ್ಲ” ಎಂದು ಗದರಿಸಿದ್ದಳು ಅಂದಿನಿಂದ ಮಂಗೇಶ ಹೆಂಡತಿಯ ಮೈ ಮುಟ್ಟಲೂ ಹೆದರುತ್ತಿದ್ದ ಅವಳ ಪ್ರಶ್ನೆಗೆ ಸಮಾಧಾನದಿಂದ ಉತ್ತರ ಕೊಟ್ಟ.

“ನನಗೆ ಬರುವ ೭೫ ರೂಪಾಯಲ್ಲಿ ಕ್ಯಾಂಟೀನ್ ಮತ್ತು ಚಿಲ್ಲರೆ ಅಂಗಡಿಗೆ ನಲವತ್ತು ರೂಪಾಯಾಗುತ್ತದೆ ಉಳಿದದ್ದರಲ್ಲಿ ಹತ್ತು ರೂಪಾಯಿ ಕರ್ಚಿಗಿಟ್ಟುಕೊಂಡು ೨೫ ಮನೆಗೆ ಕೊಡುತ್ತೇನೆ ”

“ಸಂಪಾದನೆಗೆ ತಕ್ಕಂತೆ ಕರ್ಚು ಮಾಡಬೇಕಲ್ಲವೇ ? ಕ್ಯಾಂಟಿನ್ ಚಿಲ್ಲರೆ ಅಂಗಡಿಗೇ ನಲವತ್ತಾದರೆ ಹೇಗೆ ? ಸಂಪಾದನೆ ಹೆಚ್ಚಿಸಿಕೊಳ್ಳಬೇಕು. ಇಲ್ಲವೇ ಕರ್ಚು ಕಡಿಮೆ ಮಾಡಿಕೊಳ್ಳಬೇಕು ”

“ಒಂದೇಸಾರಿಗೆ ಅದು ಸಾಧ್ಯವೇ ? ಮುಂದಿನ ತಿಂಗಳಿಂದ ಹತ್ತು ರೂಪಾಯಿ ಹೆಚ್ಚಿಗೆ ಕೊಡುವುದಾಗಿ ಪ್ರೊಪ್ರೈಟರ್ ಹೇಳಿದ್ದಾರೆ.”

" ಹತ್ತು ರೂಪಾಯಿ ಹೆಚ್ಚೇನು ಕಡಿಮೆಯೇನು ? ನೀವು ಬೇರೊಂದು ಕೆಲಸ ಹುಡುಕಿ "

" ಬೆಂಗಳೂರಲ್ಲಿ ಕೆಲಸ ಅಷ್ಟೊಂದು ಸುಲಭವಾಗಿ ಸಿಕ್ಕುವುದಿಲ್ಲ "

" ಹಾಗಾದರೆ ಯಾವ ಧೈರ್ಯದ ಮೇಲೆ ಹೇಳಿದಿರಿ ಮುಂದಿನ ತಿಂಗಳು ಬೇರೆ ಮನೆ ಮಾಡುತ್ತೇನೆಂದು ?"

ಮಂಗೇಶ ನಿರುತ್ತರನಾದ ಸ್ವಲ್ಪ ಹೊತ್ತು ಸುಮ್ಮನಿದ್ದು ಲತಾ ಪುನಃ ಹೇಳಿದಳು

" ಕೋಪದಲ್ಲಿ ಮಾತಾಡ ಬಹುದು. ಆದರೆ ಮಾಡುವಾಗ ಅದರ ಕಷ್ಟ ಗೊತ್ತಾಗುತ್ತದೆ ಮುಂದಿನ ತಿಂಗಳಿಂದ ಕ್ಯಾಂಟಿನ್ ಚಿಲ್ಲರೆ ಅಂಗಡಿ ಕರ್ಚುಗಳನ್ನು ಕಡಿಮೆ ಮಾಡಿ ಅತ್ತೆಯವರ ಕೈಗೆ ೫೦ ರೂಪಾಯಿ ಹಾಕಿಬಿಡಿ ಅವರು ನನಗೆ ಹಿಂದಿರುಗಿಸಿದ ೨೫ ರೂಪಾಯಿ ಮೇಜಲ್ಲಿಟ್ಟಿದ್ದೇನೆ ಬೆಳಿಗ್ಗೆ ಕೆಲಸಕ್ಕೆ ಹೋಗುವ ಮೊದಲು ನೀವೇ ಸಮಾಧಾನದಿಂದ ಅವರ ಕೈಗೆ ಕೊಡಿ. ಎಲ್ಲ ಸರಿಹೋಗುತ್ತೆ "

ಮರುದಿನ ಪ್ರಾತಃಕಾಲ ಮಂಗೇಶ ಮೇಜಿಂದ ೨೫ ರೂಪಾಯಿ ತೆಗೆದು ಕೊಂಡ ತಾಯಿಗೆ ಹತ್ತು ರೂಪಾಯಿ ಮಾತ್ರ ಕೊಟ್ಟು ಉಳಿದದ್ದನ್ನು ತನ್ನ ಕರ್ಚಿಗಿಟ್ಟುಕೊಂಡ ಜೇಬಲ್ಲಿ ಸಿಗರೇಟ್ ಪ್ಯಾಕಿಗೆ ಬದಲಾಗಿ ಸಿಗರೇಟ್ ಡಬ್ಬಾ ನೋಡಿದಾಗ ಲತಾಂಗಿಗೆ ಸಂದೇಹವಾಯಿತು ಅತ್ತೆಯನ್ನು ಕೇಳಿ ನಿಜಾಂಶವನ್ನು ತಿಳಿದುಕೊಂಡಳು ಆ ದಿನ ರಾತ್ರಿ ಮಂಗೇಶ ಮನೆಗೆ ಬಂದಾಗ ಲತಾ ಕೇಳಿದಳು

" ಅತ್ತೆಯವರ ಕೈಗೆ ೨೫ ರೂಪಾಯಿ ಕೊಟ್ಟೇರಾ ?"

" ನಿನ್ನೆಯೇ ಕೊಟ್ಟೆ "

" ಸರಿಯಾಗಿ ಸುಳ್ಳು ಹೇಳುವುದಕ್ಕೂ ಬರುವುದಿಲ್ಲ ನಿಮಗೆ. ನಾನು ಅತ್ತೆಯವರನ್ನು ಕೇಳಿ ತಿಳಿದುಕೊಂಡೆ "

ಮಂಗೇಶನ ಮುಖ ಕಪ್ಪಾಯಿತು ಕೋಪದಿಂದ " ನಿಜಾಂಶ ನಿನಗೆ ತಿಳಿದಿದ್ದರೆ ನನ್ನನ್ನೇಕೆ ಕೇಳಿದೆ ?" ಎಂದ

" ನೀವು ಏನು ಹೇಳುವಿರೋ ನೋಡೋಣವೆಂದು ನಿಜಕ್ಕಿಂತ ನಿಮಗೆ ಸುಳ್ಳೇ ಹಿತವಲ್ಲವೇ ? ಸಂಸಾರ ಹೇಗಾದರೂ ಆಗಲಿ, ಸಿಗರೇಟಿದ್ದರೆ

ಸಾಕು ಮತ್ತೇನೂ ಬೇಡ ”

ಮಂಗೇಶ ಮಾತಾಡಲಿಲ್ಲ

ಕೆಲವು ದಿನಗಳು ಕಳೆದವು ಲತಾಂಗಿ ಗಂಡನ ಸಂಗಡ “ ನಾನೂ ಯಾವುದಾದರೊಂದು ಕೆಲಸ ಹುಡುಕಬೇಕೆಂದಿದ್ದೇನೆ ” ಎಂದಳು

“ ಏನು ಕೆಲಸ ಮಾಡಬಲ್ಲೆ ನೀನು ?”

“ ಏನಾದರೂ ಗುಮಾಸ್ತೆ ಕೆಲಸ ವಿದ್ಯೆ ಕಲಿತು ಮನೆಯಲ್ಲಿ ಕುಳಿತುಕೊಂಡರೆ ಏನು ಉಪಯೋಗ? ಅಲ್ಲದೆ ನೀವು ಸಂಪಾದಿಸುವುದು ನಿಮ್ಮ ಕರ್ಚಿಗೇ ಸಾಲುವುದಿಲ್ಲ ನಿಮಗೆ ಭಾರವಾಗಿ ನಾನು ಮನೆಯಲ್ಲಿ ಕುಳಿತಿರಲಾರೆ ”

“ ನೀನು ಕೆಲಸಕ್ಕೆ ಹೋಗುವುದು ನನಗಿಷ್ಟವಿಲ್ಲ ”

“ ನೀವು ಹಾಗೆ ಹೇಳಿದರೆ ನಮ್ಮ ನಮ್ಮಲ್ಲಿ ಖಂಡಿತ ವಿರಸ ಬೆಳೆಯುವುದು ನನ್ನ ಜೀವನಕ್ಕಾಗಿ ನಾನು ಯಾರನ್ನೂ ಅವಲಂಬಿಸಲು ಸಿದ್ಧಳಾಗಿಲ್ಲ ”

“ ಹಾಗಾದರೆ ನಾನು ಬೇಡವೆಂದರೂ ನೀನು ಕೆಲಸ ಹುಡುಕುವೆಯಾ?”

“ ಹುಡುಕಲೇಬೇಕೆಂದು ನಿರ್ಧರ ಮಾಡಿಕೊಂಡಿದ್ದೇನೆ ಹುಡುಕುತ್ತೇನೆ ”

ಲತಾಂಗಿಯ ಮಾತು ಮಂಗೇಶನನ್ನು ಆಶ್ಚರ್ಯಗೊಳಿಸಲಿಲ್ಲ. ಮದುವೆಯಾದ ಒಂದು ವಾರಕ್ಕೇ ಅವಳ ಧೈರ್ಯ ಸ್ಥೈರ್ಯಗಳ ಪರಿಚಯ ಅವನಿಗಾಗಿತ್ತು ಪ್ರತಿಯಾಗಿ ಅವನು ಏನೂ ಹೇಳಲಿಲ್ಲ ಲತಾಂಗಿ ಕೆಲಸಕ್ಕಾಗಿ ಸಿ ಆರ್ ಬಿ, ಎಂಪ್ಲಾಯ್‌ಮೆಂಟ್ ಎಕ್ಸ್‌ಚೇಂಜ್, ಮಹಿಳಾ ಸಮಾಜ, ಮುಂತಾದವುಗಳಿಗೆ ಅಲೆಯಲು ಪ್ರಾರಂಭಿಸಿದಳು. ಮದುವೆ ಗೊತ್ತುಮಾಡಿದ ವಿಠಲರಾಯರ ಮಿತ್ರರು ತಿಳಿದವರಿಗೆ ಶಿಫಾರಸು ಕಾಗದಗಳನ್ನು ಬರೆದುಕೊಟ್ಟು ಸಹಾಯ ಮಾಡಿದರು ಕೊನೆಗೆ ದಂಡಿನ ವಿದ್ಯುತ್ ಕಾರ್ಖಾನೆಯೊಂದರಲ್ಲಿ ತಿಂಗಳಿಗೆ ೫೦ ರೂಪಾಯಿ ಸಂಬಳದ ಗುಮಾಸ್ತೆ ಕೆಲಸಕ್ಕೆ ಆರ್ಡರ್ ಬಂದಿತು

ಲತಾಂಗಿ ಯೋಚಿಸತೊಡಗಿದಳು ಕೆಲಸಕ್ಕೆ ಸೇರುವುದೇ ಬಿಡುವುದೇ? ಗಂಡನಿಗೆ ಕಾಗದ ತೋರಿಸಿ ಅಭಿಪ್ರಾಯ ಕೇಳಿದಳು.

" ನನ್ನನ್ನೇಕೆ ಕೇಳುತ್ತಿ ? ನಿನ್ನ ಇಷ್ಟ ಬಂದಂತೆ ಮಾಡಲು ನೀನು ಸ್ವತಂತ್ರಳು " ಎಂದು ಉತ್ತರ ದೊರಕಿತು

ಇದುವರೆಗೆ ಸೊಸೆಯ ತಿರುಗಾಟವನ್ನು ಕಂಡರೂ ಕಾಣದಂತಿದ್ದ ಸುಂದರಮ್ಮ ಈಗ ಬಾಯಿ ಬಿಚ್ಚಿದಳು

" ನೀನು ಕೆಲಸಕ್ಕೆ ಸೇರುವುದು ನಮಗೊಬ್ಬರಿಗೂ ಇಷ್ಟವಿಲ್ಲಮ್ಮ ನಿನ್ನ ಗಂಡನಂತೂ ತನ್ನಲ್ಲಿ ತಾನೇ ಉರಿದು ಬೀಳುತ್ತಿದ್ದಾನೆ. ನನ್ನ ಹೆದರಿಕೆಗೆ ಏನೂ ಹೇಳುತ್ತಿಲ್ಲ ನೀನಾದರೂ ತಿಳಿದುಕೊಳ್ಳಬೇಡವೇ ನೋಡಿದವರು ಏನನ್ನುವರೆಂದು ? ನಮ್ಮೆಲ್ಲರ ಮಾತು ತೆಗೆದುಹಾಕಿ ನೀನು ಕೆಲಸಕ್ಕೆ ಸೇರಿದರೆ ಸಂಸಾರವೇ ಹಾಳಾಗುತ್ತದೆ "

ಎಂದು ಸುಂದರಮ್ಮ ಸೊಸೆಯನ್ನು ಹೆದರಿಸಿದಳು

" ನನಗೆ ಹಾಗೆ ಕಾಣುವುದಿಲ್ಲ ಅತ್ತೆಯವರೆ ಅವರ ಸಂಪಾದನೆ ಸ್ವಂತ ಕರ್ಚಿಗೆ ಸಾಲುವುದಿಲ್ಲ ನಾಲ್ಕು ಕಾಸು ದುಡಿಯಬಲ್ಲ ನಾನೂ ಮನೆಯಲ್ಲಿ ಕುಳಿತರೆ ಹೇಗೆ ? ನೀವು ಒಳ್ಳೆಯ ಮನಸ್ಸಿನಿಂದ ಒಪ್ಪಿಗೆ ಕೊಡಿ."

ಎಂದು ಲತಾ ಕೇಳಿಕೊಂಡಳು

" ನೀನು ಗುಮಾಸ್ತೆಗಿರಿ ಮಾಡಿ ೫೦ ರೂಪಾಯಿ ಸಂಬಳ ತರುವುದರಿಂದ ನಮ್ಮ ಬಡತನ ನೀಗುವುದೇ ತಾಯಿ ? ನೀನು ಸಂಪಾದನೆ ಮಾಡಲು ನಾನು ವಿರೋಧಿಯಲ್ಲ ಇನ್ನೂ ನಾಲ್ಕು ವರ್ಷ ಓದಿ ದೊಡ್ಡ ಕೆಲಸಕ್ಕೆ ಸೇರಿದರೆ ನಮಗೆ ಸಂತೋಷ "

" ಓದಲು ಒಂದಕ್ಕೆ ನಾಲ್ಕು ಖರ್ಚಾಗುವುದು ಹಣ ಕೊಡುವರಾರು ?"

" ನಿಮ್ಮ ತಂದೆ ಸಹಾಯ ಮಾಡಲಾರರೆ ?"

" ಮದುವೆಗಾಗಿ ಹಣ ಸಾಲ ಮಾಡಿದ್ದಾರೆ. ಪುನಃ ಅವರನ್ನು ಕೇಳುವುದೇ ? "

" ನಿನ್ನಂತಹ ರತಿಗೆ ಸಹಾಯ ಮಾಡುವವರು ಸಿಕ್ಕುವುದಿಲ್ಲವೇ ?" ಎಂದು ಸುಂದರಮ್ಮ ಮನಸ್ಸಿನಲ್ಲಿ ಭಾವಿಸಿ ನಕ್ಕಳು ಪ್ರಕಟವಾಗಿ " ನೀನು ಅಪೇಕ್ಷಿಸಿದರೆ ದುಡ್ಡಿಗೇನಮ್ಮ ಕಡಿಮೆ ? ಬೇಕಾದಷ್ಟು ಸಿಕ್ಕುತ್ತದೆ" ಎಂದು ಹೇಳಿದಳು ಲತಾಂಗಿಗೆ ಅತ್ತೆಯ ಮಾತು ಅರ್ಥವಾಗಲಿಲ್ಲ ಆದರೂ ಅದಕ್ಕೆ ಗೌರವ ಕೊಟ್ಟು ಸಾಧ್ಯವಿದ್ದರೆ ವಿದ್ಯಾಭ್ಯಾಸವನ್ನು ಮುಂದುವರಿಸುವ ಉದ್ದೇಶ

ದಿಂದ ಕೆಲಸವನ್ನು ನಿರಾಕರಿಸಿದಳು

ಸುಂದರಮ್ಮ ವಾಸವಾಗಿದ್ದ ಮನೆಯ ಕೆಳಗಿನ ಅಂತಸ್ತಿನಲ್ಲಿದ್ದ ಅಂಗಡಿ ಮುಂಗಟ್ಟುಗಳಲ್ಲಿ ಒಂದು ದರ್ಜಿ ಅಂಗಡಿ ಮುನಿಸ್ವಾಮಿ ಅದರ ಮಾಲಿಕ ಮತ್ತು ಕೆಲಸಗಾರ ಹೆಂಗಸರ ಉಡಿಗೆಗಳನ್ನು ಅವನು ಚೆನ್ನಾಗಿ ಹೊಲಿಯುತ್ತಿದ್ದುದರಿಂದ " ಲೇಡೀಸ್ ಟೈಲರ್ " ಎಂದು ಬೋರ್ಡು ಹಾಕಿಕೊಂಡಿದ್ದ ಕೆಲಸದ ವಿಚಾರವಾಗಿ ಅತ್ತೆ ಸೊಸೆಯರಿಗೆ ಮೇಲಿನ ಮಾತುಗಳು ನಡೆದ ಒಂದು ವಾರದ ಮೇಲೊಂದು ದಿನ ಲತಾಂಗಿ ತನ್ನ ನಾದಿನಿ ಲಕ್ಷ್ಮಿಯೊಡನೆ ತಿರುಗಾಡಿಕೊಂಡು ಸಂಜೆ ಏಳು ಗಂಟೆಗೆ ಮನೆಗೆ ಬಂದಾಗ ಬಾಗಿಲು ಮುಂದೆ ತಳ್ಳಿತ್ತು ಅತ್ತೆಯ ಸಂಗಡ ಯಾರೋ ನಗುತ್ತಾ ಮಾತನಾಡುತ್ತಿದ್ದಂತೆ ಕೇಳಿತು ಲತಾ ಮೆಲ್ಲನೆ ಬಾಗಿಲು ತೆಗೆದು ಒಳಗೆ ಹೋದಳು

ನಡುಮನೆಯಲ್ಲಿ ಸುಂದರಮ್ಮ ಹೊಸ ಚೋಳಿಯೊಂದನ್ನು ಹಾಕಿಕೊಂಡು ಅಳತೆ ನೋಡುತ್ತಿದ್ದಳು ಮುನಿಸ್ವಾಮಿ ಹತ್ತಿರ ನಿಂತು ನಗುತ್ತಾ ಏನೋ ಹೇಳುತ್ತಿದ್ದವನು ಲತಾಂಗಿಯನ್ನು ನೋಡಿ ಹಿಂದೆ ಸರಿದ. ಸುಂದರಮ್ಮ ಸೊಸೆಯ ಕಡೆ ತಿರುಗಿ " ಬೆನ್ನು ಸರಿಯಾಗಿದೆಯೇ ನೋಡು ತಾಯಿ ಮುನಿಸ್ವಾಮಿ ಹೊಲಿದರೇ ಹೀಗೆ ಒಂದೂ ಸರಿಹೋಗುವುದಿಲ್ಲ " ಎಂದಳು

" ನೀವು ಅಳತೆಗೆ ಕೊಟ್ಟ ಚೋಳಿಯಂತೆಯೇ ಇದನ್ನೂ ಹೊಲಿದಿದ್ದೇನೆ. ನನ್ನದೇನು ತಪ್ಪು ? "

ಮುನಿಸ್ವಾಮಿ ಹೇಳಿದ

" ಅಳತೆ ಸರಿಯಾಗಿದ್ದರೆ ಕಂಕುಳೇಕೆ ಇಷ್ಟೊಂದು ಬಿಗಿಯುತ್ತದೆ" ಎಂದು ಸುಂದರಮ್ಮ ತೋಳೆತ್ತಿ ತೋರಿಸಿದಳು

" ನೀವು ದಪ್ಪನಾಗಿ ಬೆಳೆದರೆ ನಾನೇನು ಮಾಡಲಿ "—ಮುನಿಸ್ವಾಮಿ ನಗುತ್ತ ಹೇಳಿದ.

ಅವನ ಮಾತಿನಲ್ಲಿ ಏನೋ ಅಶ್ಲೀಲವಿದ್ದಂತೆ ಲತಾ ಭಾವಿಸಿದಳು.

" ಮೈ ಬೆಳೆಯುವುದಕ್ಕೆ ನಾನೇನು ಹುಡುಗಿಯೇ ಮುನಿಸ್ವಾಮಿ ?"
—ಸುಂದರಮ್ಮ ನಗುತ್ತಲೇ ಉತ್ತರ ಕೊಟ್ಟಳು.

ಮುನಿಸ್ವಾಮಿ ಲತಾಂಗಿಯ ಕಡೆ ತಿರುಗಿ "ನಿಮ್ಮ ಬಟ್ಟೆಯಿದ್ದರೆ ಕೊಡಿ ಅಮ್ಮ ಮನಸ್ಸೊಪ್ಪುವಂತೆ ಹೊಲಿದು ಕೊಡುತ್ತೇನೆ" ಎಂದ

ಲತಾಂಗಿ ಏನೂ ಹೇಳಲಿಲ್ಲ "ಮದುವೆಯಲ್ಲಿ ಅತ್ತಿಗೆ ಬೇಕಾದಷ್ಟು ಹೊಲಿಸಿ ಕೊಂಡಿದ್ದಾಳೆ ಈಗೇನಿದೆ?"—ಲಕ್ಷ್ಮಿ ಉತ್ತರ ಕೊಟ್ಟಳು

ಈ ಮಾತುಗಳು ನಡೆಯುತ್ತಿದ್ದಂತೆ ಒಳಗೆ ಬಂದ ಮಂಗೇಶರಾವ್ ದರ್ಜಿಯ ಸಂಗಡ ತಾಯಿ, ತಂಗಿ ಮತ್ತು ಹೆಂಡತಿ ಮಾತಾಡುತ್ತಿರುವುದನ್ನು ಕಂಡು ಅಪ್ರತಿಭನಾದ ಅವನ ಬಿರು ನೋಟ ತಾಯನ್ನು ದಿಟ್ಟಿಸಿ ಮುನಿಸ್ವಾಮಿಯ ಮೇಲೆರಗಿತು ಸುಂದರಮ್ಮ ಕೊಟ್ಟ ಚೋಲಿಯನ್ನು ಕೈಲಿ ಹಿಡಿದುಕೊಂಡು ಮುನಿಸ್ವಾಮಿ ಮಾತಾಡದೆ ಹೊರಟುಹೋದ

"ನಿನಗೆ ಮತ್ತಾವ ದರ್ಜಿಯೂ ಸಿಕ್ಕುವುದಿಲ್ಲವೇ ಅಮ್ಮ? ಮುನಿಸ್ವಾಮಿಯೇ ಆಗಬೇಕೇ?"

ಮಂಗೇಶ ತಾಯನ್ನು ಕೇಳಿದ

"ಬೇಕಾದ ವಸ್ತು ಮನೆಯ ಬಾಗಿಲಲ್ಲಿರುವಾಗ ಪೇಟೆಗೆ ಹುಡುಕಿ ಕೊಂಡು ಹೋಗಬೇಕೇನಪ್ಪ"

ಎಂದು ಸುಂದರಮ್ಮ ಉತ್ತರ ಕೊಟ್ಟಳು

ಊಟ ಮುಗಿದ ಮೇಲೆ ಮಂಗೇಶ: "ಅಣ್ಣ ಮನೆ ಬಿಟ್ಟು ಹೋಗಲು ಕಾರಣವೇನು ಗೊತ್ತೆ ಲತಾ?" ಎಂದು ಕೇಳಿದ

"ನನಗೆ ಹೇಗೆ ತಿಳಿಯಬೇಕು?"

"ಸರಿ ರಾತ್ರಿಯಲ್ಲಿ ಅಮ್ಮ ಮಹಡಿಯಿಂದಿಳಿದು ಮುನಿಸ್ವಾಮಿ ಅಂಗಡಿಗೆ ಹೋಗಿ ಬರುತ್ತಿದ್ದುದನ್ನು ಅಣ್ಣ ನೋಡಿದ ದೊಡ್ಡ ರಾದ್ಧಾಂತ ವಾಯಿತು ಅಂದೇ ಹೆಂಡತಿಯನ್ನು ಕರೆದುಕೊಂಡು ಅತ್ತೆಯ ಮನೆಗೆ ಹೊರಟು ಹೋದ"

ಮುನಿಸ್ವಾಮಿಯೊಡನೆ ಸುಂದರಮ್ಮನ ಸಲಿಗೆ ಲತಾಂಗಿಗೆ ಅರ್ಥ ವಾಯಿತು.

ಮಂಗೇಶನ ತಂದೆ ಬೆಂಗಳೂರಲ್ಲಿ ಸಾಗುವಾನಿ ವ್ಯಾಪಾರ ಮಾಡು ತ್ತಿದ್ದರು. ಶಿವಮೊಗ್ಗೆಯ ಸಾಹುಕಾರ್ ಖಾದರ್ ಷರೀಫರು ಅವರಿಗೆ ತುಂಬಾ ಪರಿಚಯ. ತಂದೆ ಸತ್ತ ಮೇಲೆ ಮಕ್ಕಳಲ್ಲಿ ಅವನು ಅದೇ

ವಿಶ್ವಾಸವಿಟ್ಟು ಬೆಂಗಳೂರಿಗೆ ಬಂದಾಗಲೆಲ್ಲ ಮನೆಗೆ ಬಂದು ಮಾತಾಡಿಸಿ ಹೋಗುವನು ಮಂಗೇಶನ ಮದುವೆಯಲ್ಲಿ ನೂರು ರೂಪಾಯಿ ಜರತಾರಿ ಸೀರೆಯನ್ನು ಮುಯ್ಯಿ ಮಾಡಿದ್ದ

ಮುನಿಸ್ವಾಮಿಯ ರಹಸ್ಯ ಹೊರಬಿದ್ದ ಮರುದಿನ ಮಧ್ಯಾಹ್ನ ನಾಲ್ಕು ಗಂಟೆ ಸುಮಾರಿನಲ್ಲಿ ಷರೀಪನ ಮೋಟಾರ್ ಮಂಗೇಶನ ಮನೆಯ ಮುಂದೆ ಬಂದು ನಿಂತಿತು ಷರೀಪ್ ಗಾಡಿಯಿಂದಿಳಿದ ಸಂಗಡ ಮಂಗೇಶನೂ ಇದ್ದ. ಡ್ರೈವರನ ಕೈಯಲ್ಲಿ ಬುಟ್ಟಿ ತೆಗೆಸಿಕೊಂಡು ಇಬ್ಬರೂ ಮೇಲೆ ಹೋದರು ಸುಂದರಮ್ಮ ಅವರನ್ನು ಮುಗುಳು ನಗೆಯಿಂದ ಸ್ವಾಗತಿಸಿ ನಡುಮನೆಯಲ್ಲಿ ಕುರ್ಚಿ ಹಾಕಿ ಕುಳ್ಳಿರಿಸಿ "ಯಾವಾಗ ಬಂದಿರಿ, ಸಾಹೇಬರೆ ? ಮನೆಯಲ್ಲಿ ಎಲ್ಲರೂ ಕ್ಷೇಮವೇ ?" ಎಂದು ಕೇಳಿದಳು

"ಈ ದಿನ ಬೆಳಿಗ್ಗೆ ಶಿವಮೊಗ್ಗೆಯಿಂದ ಬಂದೆ ನಮ್ಮ ತೋಟದಿಂದ ಮಲ್ಗೋವಾ ಮಾವಿನ ಹಣ್ಣು ತಂದಿದ್ದೇನೆ"

ಷರೀಪ್ ಹೇಳಿದ ಯೋಗಕ್ಷೇಮಗಳ ಮಾತಾದ ಮೇಲೆ ಸುಂದರಮ್ಮ ಮಗಳ ಕೈಯಲ್ಲಿ ಚಹ ತರಿಸಿಕೊಟ್ಟಳು ಚಹ ಕುಡಿಯುತ್ತಾ ಷರೀಪ್ "ನಾನು ನಿಮ್ಮ ಕುಮಾರರಿಗೆ ಹೇಳಿದೆ ಸಾಗುವಾನಿ ವ್ಯಾಪಾರ ಪ್ರಾರಂಭ ಮಾಡಿ, ಬೇಕಾದ ಬಂಡವಾಳ ಕೊಡುತ್ತೇನೆ ಎಂದು ತಂದೆಯ ಕಸಬು ಬಿಡಬಾರದು" ಎಂದ

"ನಿಮ್ಮಂತಹವರ ಸಹಾಯವಿದ್ದರೆ ಏನನ್ನು ತಾನೇ ಮಾಡಬಾರದು" ಎಂದು ಸುಂದರಮ್ಮ ಲೋಕಾಭಿರಾಮವಾಗಿ ನುಡಿದಳು ಅನಂತರ ಮಂಗೇಶ ತಾಯನ್ನು ಬೇರೆ ಕರೆದು ಏನೋ ಹೇಳಿ ಷರೀಪರೊಡನೆ ಕಾರಲ್ಲಿ ಹೊರಟುಹೋದ.

ಲತಾಂಗಿ ಕೊಟಡಿಯಲ್ಲಿ ಬಾಗಿಲ ಹಿಂದೆ ನಿಂತು ಎಲ್ಲವನ್ನೂ ನೋಡುತ್ತಿದ್ದಳು. ಸ್ವಲ್ಪ ಹೊತ್ತಿನಮೇಲೆ ಸುಂದರಮ್ಮ ಒಳಗೆ ಬಂದು "ಮಂಗೇಶ ಹೇಳಿದ, ಕಾರಲ್ಲಿ ಆರುಗಂಟೆಗೆ ಹಿಂದಿರುಗುವನಂತೆ ನೀನು ಸಿನಿಮಾಕ್ಕೆ ಹೋಗಲು ಸಿದ್ಧವಾಗಿರಬೇಕಂತೆ" ಎಂದಳು.

"ಬಂದಿದ್ದವರು ಯಾರು ಅತ್ತೆಯವರೇ ?"

ಸುಂದರಮ್ಮ ಪರಿಚಯ ಹೇಳಿ "ನಮ್ಮ ಯಜಮಾನರಿಗೆ ಬಹಳ

ಆಪ್ತರಾಗಿದ್ದರು ನಿನ್ನ ಮದುವೆಯಲ್ಲಿ ಜರತಾರಿ ಸೀರೆ ಮುಯ್ಯಿ ಕಳುಹಿಸಿದ್ದರು ಮನಸ್ಸು ಮಾಡಿದರೆ ಮಂಗೇಶನಿಗೆ ವ್ಯಾಪಾರಕ್ಕೆ ಸಹಾಯ ಮಾಡ ಬಹುದು" ಎಂದಳು

"ನೀವು ಸಂಗಡ ಬರುತ್ತೀರಾ?"

"ನನಗೇಕಮ್ಮ ಸಿನಿಮಾ? ಲಕ್ಷ್ಮೀನ ಸಂಗಡ ಕಳುಹಿಸುತ್ತೀನೆ"

"ನೀವು ಒಂದರೆ ನಾನೂ ಹೋಗುತ್ತೀನೆ ಅತ್ತೆ"

ಸುಂದರಮ್ಮ ಯತ್ನವಿಲ್ಲದೆ ಒಪ್ಪಿಕೊಂಡಳು ಕೆಳಗೆ ಹೋಗಿ ಮುನಿಸ್ವಾಮಿಯ ಮುಖಾಂತರ ನಾಲ್ಕು ಕುಚ್ಚು ಹೂ ತರಿಸಿದಳು ಲತಾ ಮತ್ತು ಲಕ್ಷ್ಮಿ ತಲೆ ಬಾಚಿ, ಹೊಸಬಟ್ಟೆಗಳನ್ನುಟ್ಟುಕೊಂಡು ಸಿದ್ಧರಾಗುವಷ್ಟರಲ್ಲಿ ಕಾರು ಹಿಂದಿರುಗಿತು ಮಂಗೇಶನೊಬ್ಬನೇ ಬಂದು ಷರೀಫರು ಸಿನಿಮಾ ಹತ್ತಿರ ಇರುವರೆಂದು ಹೇಳಿದ ಎಲ್ಲರೂ ಹೊರಟರು ಅವರಿಗಾಗಿ ಸಿನಿಮಾ ಮಂದಿರದಲ್ಲಿ ಸ್ಥಾನಗಳು ಕಾದಿಡಲ್ಪಟ್ಟಿದ್ದವು ಇಂಗ್ಲೀಷ್ ಚಿತ್ರವಾದ್ದರಿಂದ ಸುಂದರಮ್ಮನಿಗೆ ಹಿಡಿಸಲಿಲ್ಲ. ಚಿತ್ರ ಮುಗಿದ ಮೇಲೆ ಎಲ್ಲರೂ ಷರೀಷ್ ಇಳಿದಿದ್ದ ಐರೋಪ್ಯ ಹೋಟಲಿಗೆ ಹೋದರು ಷರೀಫರು ಎಲ್ಲರನ್ನೂ ಒಳಗೆ ಬರುವಂತೆ ಕರೆದರು ಲತಾಂಗಿ ಒಪ್ಪಲಿಲ್ಲ "ಸಿನಿಮಾ ನೋಡಿದ್ದಾಯಿತು. ಮನೆಗೆ ಹೋಗೋಣ" ಎಂದು ಜಿಟ್ಟಳು ಕೊನೆಗೆ ಸುಂದರಮ್ಮ ಲಕ್ಷ್ಮಿ ಒಳಗೆ ಹೋಗಿ ಕೆಲವು ನಿಮಿಷಗಳ ಮೇಲೆ ಬಿಸ್ಕೆಟ್, ಚಾಕ್‌ಲೆಟ್ ಪಾಕೆಟ್ಟುಗಳನ್ನು ಹಿಡಿದುಕೊಂಡು ಬಂದರು ಮಂಗೇಶ ಲತಾಂಗಿ ಗಾಡಿಯಲ್ಲಿ ಕುಳಿತಿದ್ದರು

ಆ ದಿನ ಮನೆಗೆ ಹಿಂದಿರುಗಿದಾಗ ಹತ್ತು ಗಂಟೆಯಾಗಿತ್ತು ಮಂಗೇಶ ಊಟಮಾಡಿ ಕೆಳಗೆ ತಿರುಗಾಡಲು ಹೋದಾಗ ಸುಂದರಮ್ಮ ಸೊಸೆಯ ಸಂಗಡ "ಮಂಗೇಶನ ಅದೃಷ್ಟ ನಿನ್ನ ಕೈಲಿದೆ ಸಾಗುವಾನಿ ವ್ಯಾಪಾರಕ್ಕೆ ೧೦ ಸಾವಿರ ರೂಪಾಯಿ ಬಂಡವಾಳ ಕೊಡುವುದಾಗಿ ಷರೀಪ್ ಹೇಳಿದ್ದಾರೆ ಮಾತು ಖಂಡಿತವಾಗಲು ನಿನ್ನ ಸಹಾಯ ಅಗತ್ಯ". ಎಂದಳು

"ನಾನೇನು ಮಾಡಬೇಕು?"

"ಬೆಂಗಳೂರಿಗೆ ಬಂದಾಗ ಅವರ ಸಂಗಡ ನೀನು ಸ್ವಲ್ಪ ಸಲಿಗೆಯಿಂದ ಇದ್ದರೆ ಸಾಕು, ನಮ್ಮ ರೊಟ್ಟಿ ತುಪ್ಪದಲ್ಲಿ ಬಿದ್ದಂತೆಯೇ?"

"ಈ ಮಾತು ಹೇಳಲು ನಿಮಗೆ ನಾಚಿಕೆಯಾಗುವುದಿಲ್ಲವೇ ಅತ್ತೆ ? ಮನೆಗೆ ಬಂದ ಮೂರು ದಿನಕ್ಕೆ ನನ್ನನ್ನು ಆ ಮುಸಲ್ಮಾನನಿಗೆ ಮಾರಲು ಯೋಚಿಸಿದಿರಾ ? ನಾಳೆಯೇ ತಂದೆಗೆ ಕಾಗದ ಬರೆಯುತ್ತೇನೆ "

ಲತಾಂಗಿ ಕೋಪದಿಂದ ಈ ಮಾತು ಹೇಳಿದ್ದನ್ನು ಕೇಳಿ ಸುಂದರಮ್ಮ ಭೀತಳಾಗಿ " ಬದುಕುವ ಮಾರ್ಗ ತೋರಿಸಿದರೆ ನನ್ನ ಮೇಲೆ ಬೀಳುವೆಯಾ ತಾಯಿ? ನಿನ್ನ ಇಷ್ಟ ಬಂದಂತೆ ಮಾಡು ನಾನು ನಿಮ್ಮ ಮಾತಿಗೆ ಬರುವುದಿಲ್ಲ" ಎಂದಳು

ಲತಾಂಗಿ ಇನ್ನೂ ದೊಡ್ಡ ಧ್ವನಿಯಿಂದ " ಆ ರೀತಿ ಬದುಕುವುದಕ್ಕಿಂತ ಸಾಯುವುದು ಮೇಲು ನಾನು ಸೂಳೆಯಂತೆ ನಿಮ್ಮ ಮನೆಗೆ ಬಂದೆನೆಂದು ಭಾವಿಸಿದಿರಾ ಸಿಕ್ಕಿದವರ ಸಹವಾಸ ಮಾಡುವುದಕ್ಕೆ?" ಎಂದಳು

ಅಷ್ಟು ಹೊತ್ತಿಗೆ ಮಂಗೇಶ ಮನೆಗೆ ಬಂದು ರಗಳೆಯನ್ನು ನೋಡಿ " ಏನಾಯಿತು?" ಎಂದು ಕೇಳಿದ

" ಆಗುವುದೇನು ? ನಿಮ್ಮ ತಾಯಿ ನನ್ನನ್ನು ಷರೀಪರಿಗೆ ಗಂಟು ಹಾಕಲು ಯೋಚಿಸುತ್ತಿದ್ದಾರೆ''— ಎಂದು ಲತಾ ಉತ್ತರ ಕೊಟ್ಟಳು.

ಮಂಗೇಶ ತಾಯಿಯ ಮುಖ ನೋಡಿದ ಸುಂದರಮ್ಮ ಏನೂ ಹೇಳಲಿಲ್ಲ ಆಗ ಅವನು ಹೆಂಡತಿಯ ಕಡೆ ತಿರುಗಿ ಕೋಪದ ದನಿಯಿಂದ "ನಾನು ಬೇರೆ ಮನೆಮಾಡಬೇಕೆಂದು ಹೇಳಿದ್ದು ಈಗ ನಿನಗೆ ಅರ್ಥವಾಯಿತೇ ಲತಾ? ಎಲ್ಲರನ್ನೂ ತನ್ನ ದಾರಿಗೆಳೆಯಲು ಯೋಚಿಸುತ್ತಾಳೆ ಅಮ್ಮ ಲಕ್ಷ್ಮೀನ ಕೆಡಿಸಿದ್ದಾಯಿತು ಈಗ ನಿನ್ನ ಮೇಲೆ ಬಿದ್ದಿದೆ ದೃಷ್ಟಿ" ಎಂದನು

'' ನಾನು ನಿನ್ನ ಹಿತಕ್ಕಾಗಿ ಹೇಳಿದರೆ ನೀನೂ ನನ್ನ ಮೇಲೆ ತಿರುಗಿ ಬಿದ್ದೆಯ, ಮಂಗೇಶ?"

ಎಂದು ಹೇಳಿ ಸುಂದರಮ್ಮ ಅಲ್ಲಿಂದ ಎದ್ದು ಹೊರಟು ಹೋದಳು.

ಬಹಳ ಹೊತ್ತು ಗಂಡಹೆಂಡಿರಿಬ್ಬರೂ ಮಾತಾಡಲಿಲ್ಲ ಎದುರುಬದಿರಿಗೆ ಸುಮ್ಮನೆ ಕುಳಿತಿದ್ದರು ಕೊನೆಗೆ ಲತಾ " ಮೈಸೂರಲ್ಲಿ ನನ್ನ ಬಂಧುವೊಬ್ಬಳು ಆಸ್ಪತ್ರೆಯಲ್ಲಿ ನರ್ಸಾಗಿದ್ದಾಳೆ ನಾಳೆ ನಾನು, ಅವಳ ಮನೆಗೆ ಹೋಗಿ ನಾಲ್ಕು ದಿನವಿದ್ದು ಬರುತ್ತೇನೆ ನೀವು ಪ್ರತ್ಯೇಕ ಮನೆ ಮಾಡಿ ಬರೆದರೆ ಬೆಂಗಳೂರಿಗೆ ಹಿಂದಿರುಗುವುದು, ಇಲ್ಲವೇ ಅಲ್ಲಿಂದ ತಂದೆಯ ಮನೆಗೆ ಹೋ

ಗುತ್ತೇನೆ. ಇನ್ನು ಈ ಮನೆಯಲ್ಲಿ ನಾನು ಒಂದು ದಿನವೂ ಇರುವುದಿಲ್ಲ" ಎಂದು ಗಂಡನಿಗೆ ಹೇಳಿದಳು

ಮಂಗೇಶ ಅಡ್ಡಿಮಾಡಲಿಲ್ಲ ಲತಾಂಗಿಯು ಇಷ್ಟದಂತೆ ಮರುದಿನ ಪ್ರಾತಃಕಾಲ ರೈಲ್ವೆ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ, ಟಿಕೆಟ್ ತೆಗೆದು ಕೊಟ್ಟು ಮೈಸೂರಿಗೆ ಕಳುಹಿಸಿದ

— ೨ —

ಮೈಸೂರಿಗೆ ಬಂದ ಒಂದೆರಡು ದಿನಗಳಲ್ಲಿ ತನ್ನಲ್ಲಾದ ಪರಿವರ್ತನ ಯನ್ನು ಕಂಡು ಲತಾಂಗಿಗೆ ಆಶ್ಚರ್ಯವಾಯಿತು ಪತಿಸ್ಪರ್ಶಕ್ಕೆ ಸಿಡುಕು ತ್ತಿದ್ದ ತಾನು ಜೋಷಿಯ ಆಲಿಂಗನವನ್ನು ಸಹಿಸುವ ಸ್ಥಿತಿಗೆ ಬಂದದ್ದು ಹೇಗೆಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡಳು

ತುಲಸೀಬಾಯ್ ಲತಾಂಗಿಗೆ ದೂರದ ಸಂಬಂಧ ಅವಳ ದೊಡ್ಡಕ್ಕ ಪುತ್ಲಿಬಾಯ್ ಹತ್ತು ವರ್ಷಕ್ಕೆ ಹಿಂದೆ ಬೆಂಗಳೂರಿಗೆ ಬಂದು ಸಾಹುಕಾರ ನೊಬ್ಬನ ಆಶ್ರಯದಲ್ಲಿ ಅಲ್ಲಿಯೇ ನೆಲೆಸಿದಳು ಚಿಕ್ಕ ವಯಸ್ಸಿನ ತಂಗಿಯ ರನ್ನು ಹತ್ತಿರ ಕರೆಸಿಕೊಂಡಳು ತಂಗಿಯರನ್ನು ವಂಶವೃತ್ತಿಗೆ ಬಿಡದೆ ಮದುವೆಮಾಡಿ ಗೌರವದಿಂದ ಬಾಳುವುದನ್ನು ನೋಡಬೇಕೆಂದು ಅವಳ ಆಸೆ. ಅದರಂತೆ ಎಲ್ಲ ತಂಗಿಯರಿಗೂ ವಿದ್ಯಾಭ್ಯಾಸ ಮಾಡಿಸಿದಳು ಅವ ರಲ್ಲಿಬ್ಬರಿಗೆ ಮದುವೆಯನ್ನೂ ಮಾಡಿದಳು ಆ ತರುವಾಯ ಸಾಂಕ್ರಾಮಿಕ ರೋಗದಿಂದ ಪುತ್ಲಿಬಾಯ್ ಸತ್ತು ಹೋದದ್ದರಿಂದ ಆಗ ನಾಲ್ಕನೆಯ ಫಾರಮಿನಲ್ಲಿ ಓದುತ್ತಿದ್ದ ತುಲಸಿ ವಿದ್ಯಾಭ್ಯಾಸ ಮುಗಿಸಿ ನರ್ಸಿಂಗ್ ಶಿಕ್ಷಣ ಕ್ಕೆ ಸೇರಿದಳು ಈಗ ಶಿಕ್ಷಣದ ಅವಧಿ ಮುಗಿದು ಪ್ರೊಬೇಷನರಿ ದಾದಿಯಾಗಿ ಮೈಸೂರಿನ ಸಾರ್ವಜನಿಕ ಆಸ್ಪತ್ರೆಯೊಂದರಲ್ಲ ಕಲಸ ಮಾಡುತ್ತಿದ್ದಳು ಮದುವೆಗೆ ಮೊದಲು ಲತಾಂಗಿ ಬೆಂಗಳೂರಿಗೆ ಬಂದಾಗ ಪರಸ್ಪರ ಪರಿಚಯ ವಾಗಿ ಹಿಂದಿನ ಸಂಬಂಧ ತಿಳಿದ ಮೇಲೆ ಸ್ನೇಹ ಬೆಳೆಯಿತು ಮದುವೆಗೆ ಬಂದಿದ್ದಾಗ ತುಲಸೀಬಾಯ್ ಲತಾಂಗಿಯನ್ನು ಮೈಸೂರಿಗೆ ಬರುವಂತೆ

ಒತ್ತಾಯ ಪಡಿಸಿದ್ದಳು ಕೆಲವು ಕಾಗದಗಳನ್ನೂ ಬರೆದಿದ್ದಳು ಅತ್ತೆಯೊಡ ಡನೆ ವಿರಸವುಂಟಾದಾಗ ಲತಾಂಗಿ ಎರಡು ದಿನ ಇದ್ದು ಹೋಗೋಣವೆಂದು ಮೈಸೂರಿಗೆ ತುಲಸಿಯ ಮನೆಗೆ ಬಂದಳು

ಲತಾ ಕೆಲಸ ಹುಡುಕುತ್ತಿರುವುದಾಗಿ ಗೊತ್ತಾದ ಕೂಡಲೆ ತುಲಸಿ "ಇಲ್ಲಿ ನನ್ನ ಪರಿಚಯಸ್ಥರೊಬ್ಬರಿದ್ದಾರೆ ಅವರಿಗೆ ತುಂಬಾ ಜನರು ಗೊತ್ತು ಅವರಿಂದ ನಿನಗೆ ಸಹಾಯ ವಾಗಬಹುದು" ಎಂದು ಹೇಳಿ ಅಂಬುಜಮ್ಮನ ಮನೆಗೆ ಕರೆದುಕೊಂಡು ಹೋದಳು

ಅಂಬುಜಮ್ಮ ಲತಾಂಗಿಯನ್ನು ನೋಡುತ್ತಲೇ ತಿಳಿದುಕೊಂಡಳು, ಇವಳು ಎಲ್ಲರಂತಲ್ಲವೆಂದು ಲತಾಂಗಿಯ ಅಸಮಾನ ರೂಪ ಯೌವ್ವನಗಳು ಅವಳನ್ನು ಆಶ್ಚರ್ಯಗೊಳಿಸಿದವು ಇಂತಹ ಸ್ತ್ರೀ ರತ್ನವನ್ನು ಸರಿಯಾದ ಪಾತ್ರದಲ್ಲಿ ವಿನಿಯೋಗಿಸುವುದು ತನ್ನ ಜಾಣ್ಮೆಯ ಗುರುತೆಂದು ಅವಳಲ್ಲಿ ಅಂತರ್ಹಿತವಾಗಿದ್ದ ಕುಂಟಿಣೀವೃತ್ತಿ ಎಚ್ಚರಿಕೆ ಕೊಟ್ಟಿತು ಜೋಷಿ ಅವಳ ಮನೆಗೆ ಐದಾರು ತಿಂಗಳಿಂದ ಬಂದು ಹೋಗುತ್ತಿದ್ದನಾದರೂ ಯಾರೂ ಅವನ ಮನಸ್ಸನ್ನು ಒಲಿಸಿರಲಿಲ್ಲ ಇದನ್ನು ತಿಳಿದಿದ್ದ ಅಂಬುಜಮ್ಮ ಆ ಮಹಾಮತ್ಸ್ಯವನ್ನು ಹಿಡಿಯಲು ಲತಾಂಗಿಯೇ ಸರಿಯಾದ ಜಾಲವೆಂದು ಭಾವಿಸಿದಳು

ಜೋಷಿಯನ್ನು ಮೊದಲಸಾರಿ ನೋಡಿದಂದಿನಿಂದ ನಡೆದ ಘಟನೆ ಗಳನ್ನು ಕುರಿತು ಲತಾಂಗಿ ಚಿಂತಿಸತೊಡಗಿದಳು ಆ ದಿನ ಅಂಬುಜಮ್ಮನ ಮನೆಯ ಡ್ರಾಯಿಂಗ್ ರೂಮಲ್ಲಿ ಜೋಷಿಯನ್ನು ಕಂಡಾಗ ತನ್ನ ಸಾಕುತಂದೆ ವಿಠಲರಾಯರಿಗೂ ಜೋಷಿಗೂ ಇದ್ದ ಹೋಲಿಕೆ ಕಂಡು ಚಕಿತೆಯಾದಳು ಇಬ್ಬರಿಗೂ ಸ್ವಲ್ಪ ಹೆಚ್ಚು ಕಡಿಮೆ ಒಂದೇ ವಯಸ್ಸು, ಅಂದರೆ ಸುಮಾರು ನಲ ವತ್ತು ಮೂರು, ನಲವತ್ತು ನಾಲ್ಕು ಜೋಷಿಯ ಆಕೃತಿ, ಅರ್ಧ ನೆರೆತ ತಲೆಗೂದಲು, ಅವನು ಹಾಕಿದ್ದ ಖಾದಿ ಬಟ್ಟೆ ಇವು ಆ ಹೋಲಿಕೆಯನ್ನು ಮತ್ತಷ್ಟು ಹೆಚ್ಚಿಸಿದವು ಹನ್ನೆರಡು ವರ್ಷಕ್ಕೆ ಮೊದಲು ವಿಠಲರಾಯರು ತಾಯಿಯ ಸಂಗಡ ತನ್ನನ್ನು ಮೊದಲು ನೋಡಿದಾಗ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಎರಡು ಕೆನ್ನೆಗಳನ್ನೂ ಮುದ್ದಿಸಿದುದು ಅವಳಿಗೆ ನೆನಪಾಯಿತು ವಿಠಲರಾಯರು ಅವಳನ್ನು ಸೂಳೆಯ ಮಗಳೆಂದು

ಉಪೇಕ್ಷಿಸದೆ ಆದರದಿಂದ ಬೆಳೆಸಿದ್ದು, ವಿದ್ಯಾಭ್ಯಾಸ ಮಾಡಿಸಿದ್ದು, ಮದುವೆ ಮಾಡಿದ್ದು ಎಲ್ಲವನ್ನೂ ಅವಳು ಕೃತಜ್ಞತೆಯಿಂದ ಸ್ಮರಿಸಿಕೊಂಡಳು ಅವರು ತನ್ನನ್ನು ಬಹಳವಾಗಿ ಪ್ರೀತಿಸುವರೆಂದೂ, ಈ ಸಂದರ್ಭದಲ್ಲಿ ತಾನೊಂದು ಕಾಗದ ಬರೆದಿದ್ದರ ಅವರು ಕೂಡಲೆ ಬಂದು ತನ್ನನ್ನು ಮಂಗಳೂರಿಗೆ ಕರದುಕೊಂಡು ಹೋಗುತ್ತಿದ್ದರೆಂದೂ ಲತಾಂಗಿಗೆ ತಿಳಿದಿತ್ತು. ಆದರೆ ಪುನಃ ತಾಯಿಯ ಆಶ್ರಯ ನಡೆಯುವುದು ಅವಳಿಗಿಷ್ಟವಿರಲಿಲ್ಲ

ತಂದೆಯಂತೆ ಕಾಣುವವರು ಗುಣದಲ್ಲಿ ಕೂಡಾ ತಂದೆಯಂತೆಯೇ ಏಕಿರಬಾರದು? ಜೋಷಿಯ ನಯವಾದ ಸಂಸ್ಕೃತವಾದ ಮಾತುಗಳಿಂದ ಲತಾ ಆಕರ್ಷಿತಳಾದಳು ತನ್ನ ಸಹಜ ಗಾಂಭೀರ್ಯ ಸಂಕೋಚಗಳನ್ನು ಬಿಟ್ಟು ಅವನೊಡನೆ ಸಲಿಗೆಯಿಂದ ವರ್ತಿಸತೊಡಗಿದಳು

ಮಂಗಳೂರು ಕಾಲೇಜಲ್ಲಿ ಎರಡು ವರ್ಷ ಕಾಲ ಪುರುಷರ ಸಂಗಡ ಸಹಚಾರಿಯಾಗಿ ವಿದ್ಯಾಭ್ಯಾಸ ಮಾಡುತ್ತಿದ್ದರೂ ಮದುವೆಯಾಗುವವರೆಗೆ ಲತಾಂಗಿ ಕನ್ಯೆಯಾಗಿಯೇ ಉಳಿದಿದ್ದಳು ಆ ಅನಾಘ್ರಾತ ಪುಷ್ಪವನ್ನು ಆಘ್ರಾಣಿಸುವ ಧೈರ್ಯ ಸಾಹಸ ಚತುರತೆಗಳನ್ನುಳ್ಳ ಯುವಕನು ಕಾಲೇಜಲ್ಲಿ ರಲಿಲ್ಲ ಮದುವೆಯ ನಂತರ ಪತಿಯೊಡನೆ ಸಂಬಂಧ ಅವಳ ಕನ್ಯಾತ್ವವನ್ನು ದೈಹಿಕವಾಗಿ ಕೊನೆಗಾಣಿಸಿದ್ದರೂ ಅದರಿಂದ ಮಾನಸಿಕವಾಗಿ ಆಗಬೇಕಾಗಿದ್ದ ಪರಿವರ್ತನೆ ಇದುವರಗೆ ಆಗಿರಲಿಲ್ಲ ಪ್ರಥಮ ಸಮಾಗಮದ ಅಚಾತುರ್ಯ ದಿಂದ ಉದಯವಾದ ವಿಕರ್ಷಣೆ ಪತಿಯ ಬಲಾತ್ಕಾರದಿಂದ ಕ್ರಮ ಕ್ರಮವಾಗಿ ದ್ವೇಷದ ರೂಪ ತಾಳಿತ್ತು ಹರೀಪನ ಪ್ರಕರಣ ನಡೆಯುವ ಸಮಯಕ್ಕೆ ಅವಳು ಪತಿಯೊಡನೆ ದೈಹಿಕ ಸಂಬಂಧವನ್ನು ಅನಪೇಕ್ಷಿತ ಪಾಶವಿಕ ವರ್ತನೆ ಯೆಂದು ತಿಳಿಯುವ ಸ್ಥಿತಿಗೆ ಬಂದಿದ್ದಳು

ಬೃಂದಾವನಕ್ಕೆ ವಿಹಾರ ಹೋದ ದಿನ ಅವಳ ಈ ಮಾನಸಿಕ ಪ್ರವೃತ್ತಿ ಯಲ್ಲಿ ತಾತ್ವಿಕವಾದ ಬದಲಾವಣೆಯುಂಟಾಯಿತು ಕಾರಲ್ಲಿ ಅವಳು ಜೋಷಿಯ ಪಾರ್ಶ್ವದಲ್ಲಿ ಕುಳಿತುಕೊಂಡಳು ಅವನ ದೇಹ ಸ್ಪರ್ಶದಿಂದ ಅಳುಕಲಿಲ್ಲ ಸಲಿಗೆಯಿಂದ ಅವನು ಭುಜಗಳ ಮೇಲೆ ಕೈ ಹಾಕಿದಾಗ ಹಿಂದೆ ಸರಿಯಲಿಲ್ಲ. ಬೃಂದಾವನದಲ್ಲಿ ಹುಲ್ಲಿನ ಮೇಲೆ ಉಪಹಾರಕ್ಕೆ ಅವನ ಪಾರ್ಶ್ವದಲ್ಲಿ ಕುಳಿತುಕೊಂಡಳು. ಸಂಕೋಚವಿಲ್ಲದೆ ಒಂದೇ ತಟ್ಟೆಯಲ್ಲಿ

ತಿಂದಳು ಉಪಹಾರಾನಂತರ ತಿರುಗಾಡಿ ಬರಲು ಹೋದಾಗ ತಾನೂ ಸಂಗಡ ಹೋದಳು ಜೋಷಿ ಮತ್ತು ತಾನು ಇತರರಿಂದ ಪ್ರತ್ಯೇಕವಾದಾಗ ಅವಳ ಮನಸ್ಸಿನಲ್ಲಿ ಒಂದುಬಗೆಯ ಸಂತೃಪ್ತಿ ತಲೆದೋರಿತು ತಿರುಗಾಡುತ್ತ ಇಬ್ಬರೂ ದೀಪಾಲಂಕೃತವಾದ ಕಾರಂಜಗಳ ಹತ್ತಿರ ಹೋದಾಗ ಜೋಷಿ ಆಡಿದ ಮಾತುಕಥೆಗಳು, ಆ ತರುವಾಯ ಲತಾಗೃಹದಲ್ಲಿ ಜೋಷಿಯ ವರ್ತನೆ,ಆಸಂತೃಪ್ತಿಯನ್ನು ಸ್ವಲ್ಪಮಟ್ಟಿಗೆ ಕಲಕಿತಾದರೂ ನಿರಾಶೆಗೊಳಿಸಲಿಲ್ಲ. ಯುವಕರಾಗಲಿ, ಮಧ್ಯಮ ವಯಸ್ಸಿನವರಾಗಲಿ, ವೃದ್ಧರಾಗಲಿ, ಪುರುಷ ರೆಲ್ಲರೂ ಹೀಗೆ, ಸ್ತ್ರೀಯರ ವಿಚಾರದಲ್ಲಿ ಅವರ ಚಾಪಲ್ಯ ಹಸಿವು ಬಾಯಾರಿಕೆ ಗಳಷ್ಟೇ ಸಹಜವಾದದ್ದು ಎಂದು ಹೇಳಿ ಸಮಾಧಾನ ಮಾಡಿಕೊಂಡಳು

ಗೆಳತಿಯ ಮನೆಯಲ್ಲಿ ಹಾಸಿಗೆಯ ಮೇಲೆ ಮಲಗಿ ಆ ಘಟನೆಗಳನ್ನು ನೆನಸಿಕೊಂಡಾಗ ಅವು ನಿಜವಾಗಿ ತನ್ನ ವಿಚಾರದಲ್ಲಿ ನಡೆದದ್ದೇ ಎಂದು ಆಶ್ಚರ್ಯವಾಯಿತು "ನೋಡಿದ ದಿನವೇ ನಾನು ನಿನ್ನನಕಾದೆ, ಲತಾ" ಎಂದು ಹೇಳಿ ಜೋಷಿ ತನ್ನನ್ನು ಆಲಿಂಗಿಸಿದಾಗ ಹಠಾತ್ತನೆ ಬೆಚ್ಚಿಬಿದ್ದ ನೆನಪು ಪ್ರತಿ ಕ್ಷಣದಲ್ಲಿ ಅವನ ತುಟಿಗಳ ಸ್ಪರ್ಶ ತನ್ನನ್ನು ನಿಶ್ಚೇಷ್ಟಿತೆಯಾಗಿ ಮಾಡಿರಬೇಕೆಂದೂ, ಪುನಃ ತನಗೆ ಎಚ್ಚರವಾದಾಗ ಲತಾಗೃಹದಲ್ಲಿ, ಶಿಲಾಸನದ ಮೇಲೆ, ಜೋಷಿಯ ಪಾರ್ಶ್ವದಲ್ಲಿ ಕುಳಿತಿದ್ದೆನೆಂದೂ, ಜೋಷಿಯ ಆಲಿಂಗನದಿಂದ ಬಿಡಿಸಿಕೊಂಡು ತಾನು ಬಾಗಿಲ ಹತ್ತಿರ ಹೋದದ್ದು ಆಗಲೇ ಇರಬೇಕೆಂದೂ ಲತಾಂಗಿ ಭಾವಿಸಿದಳು

ಆ ರೀತಿ ತನಗೆ ಎಚ್ಚರ ತಪ್ಪಿದ ಕಾರಣವೇನು? ವಿದ್ಯುತ್ತಿನ ಆಘಾತ ದಂತೆ ಜೋಷಿಯ ಚುಂಬನ ತನ್ನನ್ನು ಪರವಶೆಯನ್ನಾಗಿ ಮಾಡಿರಬಹುದೇ? ಆ ಸ್ಥಿತಿಯಲ್ಲಿ ತಾನು ಇನ್ನೂ ಸ್ವಲ್ಪಹೊತ್ತು ಇದ್ದಿದ್ದರೆ ಎಂತಹ ಅಚಾತುರ್ಯ ನಡೆದು ಹೋಗುತ್ತಿತ್ತು—ಎಂದು ಯೋಚಿಸುತ್ತಾ ಲತಾಂಗಿ ಉದ್ವಿಗ್ನೆ ಯಾದಳು ಆ ಮೇಲೆ ನಡೆದದ್ದೆಲ್ಲವೂ ತನಗಾದ ಆ ಕ್ಷಣಿಕ ವಿಕಲ್ಪದ ಪರಿಣಾಮವೆಂದು ಅವಳಿಗೆ ತೋರಿತು ಲತಾಗೃಹದ ಬಾಗಿಲಿಗೆ ಬಂದಾಗ ಜೋಷಿಯ ಹಂಬಲದ ಕರೆ ತನ್ನ ಕಾಲುಗಳನ್ನು ಸಂಕೋಲೆಗಳಂತೆ ಬಂಧಿಸಿ ದವು ಯಾರಿಂದ ತಪ್ಪಿಸಿಕೊಳ್ಳಲು ತಾನು ಓಡುತ್ತಿರುವುದು? ಜೋಷಿ ಯಂತಹ ಸರಳ ಸ್ವಭಾವದ ಉದಾರ ಚಿತ್ತದ ಸಭ್ಯವ್ಯಕ್ತಿಯಿಂದಲೇ?

ಗೌರವ, ಸಂಸ್ಕೃತಿ ಸೌಜನ್ಯ ಇವುಗಳಲ್ಲಿ ತನ್ನ ಪತಿಗೂ ಜೋಷಿಗೂ ಎಷ್ಟೊಂದು ಅಜಗಜಾಂತರ ಜನ್ಮ ಜನ್ಮಾಂತರಗಳಲ್ಲಿಯೂ ಈ ಅಂತರ ಪರಿಹಾರವಾಗುವುದಿಲ್ಲವೆಂದು ಸ್ತ್ರೀ ಸಹಜವಾದ ಅವಳ ಚತುರಮತಿಗೆ ಅರಿವಾಗಿತ್ತು

ಆಗ ಜೋಷಿ ಬೇಡಿಕೊಂಡನ್ನು, "ನಾನು ಪಶುವಿನಂತೆ ವರ್ತಿಸಿದೆ ಕ್ಷಮಿಸು ಲತಾ"

ಅವನ ದನಿಯಲ್ಲಿ ಪಶ್ಚಾತ್ತಾಪ ಎದ್ದು ಕಾಣುತ್ತಿತ್ತು ಸದ್ಯದಲ್ಲಿ ಅಪಾಯದಿಂದ ಪಾರಾದೆನೆಂದು ತಿಳಿದು ಜೋಷಿ ನಿರಾಶೆಯಿಂದ ತನ್ನ ಗೆಳೆತನವನ್ನೇ ಬಿಡಬಾರದೆಂಬ ಉದ್ದೇಶದಿಂದ ಆಗ ತಾನು ಹೇಳಿದಳು, "ನೀವು ದೊಡ್ಡವರು ನಿಮ್ಮ ಅಪೇಕ್ಷೆಯನ್ನು ನಾನು ನಿರಾಕರಿಸುವೆನೆ? ಸ್ವಲ್ಪ ದಿನ ತಡೆಯಿರಿ' ಎಂದು

ಜೀವನದಲ್ಲಿ ಅನುಭವವಿಲ್ಲದ, ಯೌವ್ವನ ಜ್ವಾಲೆಯಲ್ಲಿ ಸಿಲುಕಿ ವಿವೇಕವನ್ನು ಕಳೆದುಕೊಂಡ ತರುಣನನ್ನು ಈ ಮಾತುಗಳಿಂದ ವಂಚಿಸ ಬಹುದು, ಜೋಷಿಯಲ್ಲಿ ಆ ಚತುರತೆ ಸಾಧ್ಯವೇ? ಎಂದು ಲತಾಂಗಿಯ ಮನಸ್ಸು ಸಂದೇಹಿಸಿತು ಕಾಮಕ್ಕೆ ಅಧೀನರಾದಾಗ ಎಲ್ಲರೂ ಒಂದೇ, ತರುಣರಾಗಲಿ, ವೃದ್ಧರಾಗಲಿ ಪಶುಗಳಂತೆ ವರ್ತಿಸುವರು ಎಂದು ಸಮಾಧಾನ ಮಾಡಿಕೊಂಡಳು

ಹೊರಗೆ ಕಾರಂಜಿಯ ಬಣ್ಣದ ಬೆಳಕನ್ನು ಕಂಡಾಗ ಲತಾಂಗಿ ಪ್ರಕೃತಸ್ಥೆಯಾದಳು ನೀರಲ್ಲಿ ಮುಳುಗಿಸಿಟ್ಟಿದ್ದ ಬೊಂಬೆಗಳು ತನ್ನನ್ನು ಕಂಡು ನಗುತ್ತಿರುವಂತೆ ಅವಳು ಭಾವಿಸಿದಳು ಅಲ್ಲಿಂದ ಅವರು ಅಂಬುಜಮ್ಮ ನನ್ನು ಹುಡುಕುತ್ತ ಹೋದರು

ಅಂಬುಜಮ್ಮನೇ ಮೊದಲು ಅವರನ್ನು ನೋಡಿದಳು ಅವಳ ದೃಷ್ಟಿಯಲ್ಲಿ, ಧ್ವನಿಯಲ್ಲಿ, ಮಾತಲ್ಲಿ ಅಸ್ಪಷ್ಟವಾದ ವ್ಯಂಗ್ಯ ಸೂಚನೆಯಿದ್ದು ದನ್ನು ಲತಾಂಗಿ ಗಮನಿಸಿದ್ದಳು

— ೩ —

ಲತಾಂಗಿಗೆ ಬಹಳ ಹೊತ್ತು ನಿದ್ರೆ ಬರಲಿಲ್ಲ ಯೋಚಿಸುತ್ತಾ ಮಲಗಿದ್ದಂತೆ ಆಸ್ಪತ್ರೆಯ ದೊಡ್ಡ ಗಡಿಯಾರದಲ್ಲಿ ಹನ್ನೆರಡು ಗಂಟೆ ಹೊಡೆಯಿತು ಹೊತ್ತಾಗಿ ಡ್ಯೂಟಿ ಮುಗಿಸಿಕೊಂಡು ಬಂದ ನರ್ಸ್ ಒಬ್ಬಳು ಪಾರ್ಶ್ವದ ಮನೆಯ ಬಾಗಿಲ ತೆಗೆಯುವ ಶಬ್ದವಾಯಿತು ಅವಳ ಸಂಗಡಿದ್ದ ಗೆಳತಿ ಏನೋ ಹೇಳಿದಳು ಇಬ್ಬರೂ ನಕ್ಕರು ನಗುವಿನ ಲಹರಿ ನಿಶೀಥದ ತಂಗಾಳಿಯಲ್ಲಿ ಹರಿಯುವ ನೀರಿನ ಕಲಕಲ ಶಬ್ದದಂತೆ ಲತಾಂಗಿಗೆ ಕೇಳಿಸಿತು ಬೃಂದಾವನದ ಕಾರಂಜಿಯ ಹತ್ತಿರ ಮರದ ಕತ್ತಲಲ್ಲಿ ಜೋಷಿ ಎದೆಯ ಮೇಲೆ ಮುಖವಿಟ್ಟುಕೊಂಡಂತೆ ಭಾವಿಸಿದಳು ಜೊಂಪು ಹತ್ತಿತು

ಪುನಃ ಎಚ್ಚರವಾದಾಗ " ಅಕ್ಕ ಅಕ್ಕ " ಎಂದು ಕೂಗುತ್ತಾ ತುಲಸಿ ಬಾಗಿಲು ತಟ್ಟುತ್ತಿದ್ದಳು ಬಾಗಿಲು ತರೆದ ಕೂಡಲೆ ಅವಳು ಒಳಗೆ ಬಂದು " ಪಿಕ್ಚರ್ ಬಹಳ ಚೆನ್ನಾಗಿತ್ತು ಅಕ್ಕ ನೀನೂ ಬಂದಿದ್ದರೆ ಒಟ್ಟಿಗೆ enjoy ಮಾಡಬಹುದಾಗಿತ್ತು " ಎಂದಳು

ಆಂಗ್ಲ ಭಾಷೆಯ ಶಬ್ದಗಳನ್ನು ಅಸಂಗತವಾಗಿ ಉಪಯೋಗಿಸುವುದು ತುಲಸಿಯ ಅಭ್ಯಾಸ ದಾದಿಯ ಶಿಕ್ಷಣದೊಡನೆ ಭಾಷೆಯ ಈ ದುರುಪಯೋಗವನ್ನೂ ಅವಳು ಕಲಿತಿದ್ದಳು

ಲತಾ ಮೃದುವಾಗಿ ನಕ್ಕು " ನೀನು ಹೆಂಗಸಾಗಿ ಹುಟ್ಟುವ ಬದಲು ಹಕ್ಕಿಯಾಗಿ ಹುಟ್ಟಬೇಕಾಗಿತ್ತು ಯಾವಾಗಲು enjoy ಮಾಡುವುದರಲ್ಲಿಯೇ ಇರುವೆ "—ಎಂದಳು

" ನಾನು ಹಕ್ಕಿಯಾಗಿದ್ದಿದ್ದರೆ ನಿನ್ನನ್ನು ಹೂವಾಗಿ ಮಾಡಿ ಹಾರಿಸಿಕೊಂಡು ಹೋಗುತ್ತಿದ್ದೆ "

" ಎಲ್ಲಿಗೆ ಹಾರಿಸಿಕೊಂಡು ಹೋಗುತ್ತಿದ್ದೆ ?"

" ಈ ಆಸ್ಪತ್ರೆ, ಡ್ಯೂಟಿ, ಗಂಡಸರು ಯಾರೂ ಇಲ್ಲದ ಸ್ಥಳಕ್ಕೆ "

ಎಂದು ಹೇಳಿ ತುಲಸಿ ಬಟ್ಟೆ ಬದಲಾಯಿಸಿ, ದೀಪ ಆರಿಸಿ ಲತಾಂಗಿಯ ಪಾರ್ಶ್ವದಲ್ಲಿ ಮಲಗಿ ಹೇಳಿದಳು

"ನಾಳೆ ಎಕ್ಸ್‌ಪ್ರೆಸ್ಸಿಗೆ ಹೋಗಬೇಕೇ ಅಕ್ಕ ? ಮೈಲಿಗೆ ಹೋದರಾಗದೆ?

ಇಂದ್ರಭವನದಿಂದ ಊಟ ತರಿಸಿ ಹಬ್ಬ ಮಾಡೋಣ"

ತುಲಸಿಯ ಗೆಲುವಿನಂತೆ ದೇಹದ ಕಾವೂ ಲತಾಂಗಿಯನ್ನು ತಾಗಿತು ಆವಳು ಹೇಳಿದಳು "ಬೇಡ ತುಲಸಿ ಬೆಳಗಿನ ಗಾಡಿಗೆ ಹೊರಟರೆ ಮಧ್ಯಾಹ್ನದ ಹೊತ್ತಿಗೆ ಮನೆ ಸೇರಿಕೊಳ್ಳುತ್ತೇನೆ ನೀನು ಬೆಂಗಳೂರಿಗೆ ಬಂದಾಗ ಹೊಸ ಮನೆಯಲ್ಲಿ ನಿಜವಾಗಿಯೂ ಹಬ್ಬ ಮಾಡೋಣ"

ತುಲಸಿ ಮಾತಾಡಲಿಲ್ಲ ಲತಾಂಗಿಯನ್ನು ಚುಂಬಿಸುತ್ತಾ "ನಿನ್ನಿಷ್ಟ ಅಕ್ಕ ಬೆಂಗಳೂರಿಗೆ ಹೋಗಿ ನನ್ನನ್ನು ಮರೆತು ಬಿಡಬೇಡ" ಎಂದಳು

ತುಟಿಗಳ ಸ್ಪರ್ಶವ ಮತ್ತು ಕಟು ಗಂಧದಿಂದ ಲತಾಂಗಿ ತಿಳಿದು ಕೊಂಡಳು, ತುಲಸಿ ಮಧ್ಯಪಾನ ಮಾಡಿ ಬಂದಿರಬೇಕೆಂದು "ಮಲಗಿ ನಿದ್ರೆ ಮಾಡು ತುಲಸಿ ಬೇಗ್ಗೆ ಮಾತಾಡೋಣ" ಎಂದು ಹೇಳಿ ಮೈದಡವಿ ಉದ್ರೇಕವನ್ನು ಶಾಂತಿಗೊಳಿಸಲು ಪ್ರಯತ್ನಿಸಿದಳು

ಮರುದಿನ ಪ್ರಾತಃಕಾಲ ಎಕ್ಸ್‌ಪ್ರೆಸ್ ಗಾಡಿಯಲ್ಲಿ ಲತಾಂಗಿ ಬೆಂಗಳೂರಿಗೆ ಹೊರಟಳು ತುಲಸಿ ನಿಲ್ದಾಣಕ್ಕೆ ಬಂದು ಅತ್ತಿಗೆಯನ್ನು ಬೀಳ್ಕೊಟ್ಟಳು ನವಿಲಂತೆ ರಂಗು ರಂಗಿನ ಸೀರೆಯುಟ್ಟಿದ್ದ ಹದಿನೆಂಟು ವರ್ಷದ ಯುವತಿಯೊಬ್ಬಳು, ತನಗಿಂತ ಕೆಲವು ವರ್ಷಗಳು ದೊಡ್ಡವಳಾದ ಮತ್ತೊಬ್ಬ ಯುವತಿಯನ್ನು ಆಲಿಂಗಿಸಿ ಮುದ್ದಿಡುವುದನ್ನು ಕಂಡು ನಿಲ್ದಾಣ ದಲ್ಲಿದ್ದ ಪ್ರಯಾಣಿಕರು "ಇಂಗ್ಲಿಷ್ ಓದಿದ ಈಗಿನ ಹುಡುಗಿಯರು ಏನಾಗಿಹೋದರಪ್ಪ!" ಎಂದುಕೊಂಡರು

ಆದರೆ ಅದೇ ನಿಲ್ದಾಣದಲ್ಲಿ ನಿಂತಿದ್ದ ಕಾಲೇಜು ವಿದ್ಯಾರ್ಥಿಗಳಿಗೆ ಈ ವರ್ತನೆ ವಿಚಿತ್ರವಾಗಿ ಕಾಣಲಿಲ್ಲ "ಅಂಬುಜಮ್ಮನ ಮನೆ ಗಿರಾಕಿ ಗಳೆಂದರೆ ಯಾವ ಸಿನಿಮಾತಾರೆಗೆ ಕಡಿಮೆ!" ಎಂದು ಹೇಳಿಕೊಂಡು ತಮ್ಮಲ್ಲಿಯೇ ನಕ್ಕರು

## ನಾಲ್ಕನೆಯ ತರಂಗ

—೧—

ಪದ್ಮನಾಭಯ್ಯನವರ ಪರಿಮಳ ಸೋಪ್ ಫ್ಯಾಕ್ಟರಿಯಲ್ಲಿ ಸುಮಾರು ೨೦೦ ಮಂದಿ ಕೆಲಸ ಮಾಡುತ್ತಿದ್ದರು ಅವರಲ್ಲಿ ೫೦-೬೦ ಮಂದಿ ಹೆಂಗಸರು ತಯಾರಾದ ಸಾಬೂನನ್ನು ತೆಳವು ಕಾಗದದಲ್ಲಿ ಸುತ್ತಿ ರಟ್ಟಿನ ಪೆಟ್ಟಿಗೆಯಲ್ಲಿ ಹಾಕಿ ಮಾರಾಟಕ್ಕೆ ಸಿದ್ಧಪಡಿಸುವ ಕೆಲಸ ಹೆಂಗಸರಿಂದಲೆ ನಡೆಯುತ್ತಿತ್ತು. ಈ ಶಾಖೆಯ ಮೇಲ್ವಿಚಾರಣೆಗಾಗಿ ಇಬ್ಬರು ಮೇಸ್ತ್ರಿಗಳು, ಒಬ್ಬ ಗುಮಾಸ್ತೆ ಇದ್ದರು ಪದ್ಮಾ ಆನಂದಪುತ್ರಿ ಈ ಶಾಖೆಯ ಸೂಪರಿಂಟೆಂಡೆಂಟ್ ಕಂಪೆನಿಯ ಮಾಲಿಕರು ಶಾಖೆಯ ಸರ್ವಾಧಿಕಾರವನ್ನು ಅವಳಿಗೆ ಕೊಟ್ಟಿದ್ದರು

ಪದ್ಮಳ ವಯಸ್ಸು ಸುಮಾರು ೩೨-೩೩ ಎತ್ತರವಾದ ಆಕಾರ, ತುಂಬಿದ ಮೈ, ಎಣ್ಣೆಗೆಂಪು ರೂಪವತಿಯಲ್ಲದಿದ್ದರೂ ಆಕರ್ಷಕವಾದ ಮುಖ, ಭಾವಗರ್ಭಿತವಾದ ಕಣ್ಣುಗಳು ಅವಳ ಓರ ಬೈತಲೆ, ಕುಂಡಲಾಕಾರವಾದ ಹೆರಳು, ವಿಚಿತ್ರ ನಮೂನೆಯ ಸೀರೆ ಕುಪ್ಪುಸಗಳು, ದಯಾಲ್ ಬಾಗ್ ಚಪ್ಪಲಿ, ಪ್ಲಾಸ್ಟಿಕ್ ಕೈಚೀಲ ಇವು ಒಂದು ಬಗೆಯ ವೈಶಿಷ್ಟ್ಯವನ್ನುಂಟಾಗಿದ್ದವು ಎರಡು ವರ್ಷಗಳಿಂದ ಅವಳು ಕಾರ್ಖಾನೆಯ ಕೆಲಸ ಮಾಡುತ್ತಿದ್ದರೂ ಮಾಲೀಕರಿಂದ ಗುಮಾಸ್ತೆಯವರೆಗೆ ಯಾರಿಗೂ ಸಲಿಗೆಗೆ ಅವಕಾಶ ಕೊಟ್ಟಿರಲಿಲ್ಲವೆಂಬುದರಿಂದ ಅವಳ ಶ್ರೀಮದ್ಗಾಂಭೀರ್ಯದ ಮೇರೆಯನ್ನು ತಿಳಿಯಬಹುದು

ಮೊದಲು ಪದ್ಮಾ ಯಜಮಾನರ ಕಾರ್ಯದರ್ಶಿನಿಯಾಗಿ ಕಾರ್ಖಾನೆಗೆ ಬಂದಳು ಅವಳ ಶ್ರೀಮದ್ಗಾಂಭೀರ್ಯ ಒಂದೆರಡು ವಾರಗಳಲ್ಲಿಯೇ ಸಹನಾತೀತವಾಗಿ ಕಂಡು ಬಂದದ್ದರಿಂದ ಯಜಮಾನರಿಗೆ ಬೇಸರವಾಗಿ ಹೆಂಗಸರ ಕಡೆ ಮೇಲ್ವಿಚಾರಣೆಗೆ ಹಾಕಿದರು. ಪದ್ಮಳ ಚಟುವಟಿಕೆಗಳಿಗೆ

ವಿಶಾಲ ಕ್ಷೇತ್ರ ದೊರಕಿದಂತಾಯಿತು ಕೆಲಸ ಮಾಡುವ ಪ್ರತಿ ಹೆಂಗಸಿನ ನಡಾವಳಿಯನ್ನು ಕುರಿತು ವಿವರಗಳ ಸಂಗ್ರಹಕ್ಕೆ ತೊಡಗಿದಳು ಹೆಂಗಸರು ಕೆಲಸ ಮಾಡುವ ಸ್ಥಳ ಜೈಲುಖಾನೆಯ ರೂಪ ತಾಳಿತು ಹೆಣ್ಣು ಗಂಡು ಕೆಲಸಗಾರರ ಮಧ್ಯ ನಡೆದುಕೊಂಡು ಬಂದಿದ್ದ ನಲಿಗೆ ಸಿಂತು ಒಂದೆರಡು ಪ್ರಣಯ ವ್ಯವಹಾರಗಳಿಗೆ ಅಂತರಾಯ ಉಂಟಾದ್ದರ ಹೊರತಾಗಿ ಅದರಿಂದ ಹೆಚ್ಚಿನ ಅನರ್ಥವೇನೂ ಆಗಲಿಲ್ಲ ವಿಚಾರ ಯಜಮಾನರಿಗೆ ವರದಿಯಾದಾಗ ಅವರು ಪದ್ಮಳ ಸಂಬಳವನ್ನು ೧೨೦ ರೂಪಾಯಿಗಳಿಗೆ ಹೆಚ್ಚಿಸಿ ಮಹಿಳಾ ಶಾಖೆಯ ವರ್ಕ್ಸ್ ಸೂಪರಿಂಡೆಂಟಾಗಿ ಮಾಡಿದರು

ವಯಸ್ಸು ೩೨ಕ್ಕೆ ಮೀರಿದರೂ ಪದ್ಮ ೨೪ ವರ್ಷದವಳಂತೆ ಕಾಣುತ್ತಿದ್ದಳು ಅವಿವಾಹಿತ ತರುಣಿಯರಿಗೆ ರೂಪ ಯೌವ್ವನಗಳೇ ಬಂಡವಾಳವೆಂದು ಅವಳು ತಿಳಿದಿದ್ದಳು ಸರ್ಕಾರಿ ಸಾಲಪತ್ರಗಳ ಮೇಲೆ ಬಂಡವಾಳ ಹಾಕಿ ಭದ್ರಸಡಿಸಿ, ಅದರಿಂದ ಬರುವ ಸಾಮಾನ್ಯ ಬಡ್ಡಿಯಿಂದ ಸಂತುಷ್ಟನಾಗುವ ಜಿಪುಣ ಸಾಹುಕಾರನಂತೆ ಅವಳು ತನ್ನ ರೂಪು ಯೌವ್ವನ ಗಳನ್ನು ಒಪ್ಪಹಾಕಿ ಮಾಸಿಹೋಗದಂತ ರಕ್ಷಿಸಿ ಕೊಂಡಿದ್ದಳು ಬಂಡವಾಳ ಭದ್ರವಾಗಿದ್ದರೆ ಮುಂದೆ ಬೇಕಾದಾಗ ದುಡಿದುಕೊಳ್ಳಬಹುದೆಂದು ಅವಳ ನಿರೀಕ್ಷೆ ಬಡ್ಡಿಯ ಹೊರತಾಗಿ ಮೂಲ ಧನಕ್ಕೆ ಕೈ ಹಾಕುವ ಅವಶ್ಯಕತೆ ಇದುವರೆಗೆ ಒದಗಿರಲಿಲ್ಲ

ಲತಾಂಗಿ ಮೈಸೂರಿಗೆ ಹೋದ ತರುವಾಯ, ಮೂರು ನಾಲ್ಕು ದಿನಗಳು ಕಳೆದ ಮೇಲೊಂದು ದಿನ ಮಂಗೇಶರಾವ್ ಪದ್ಮಳ ಕಛೇರಿಗೆ ಬಂದ ವಾರಕ್ಕೊಂದು ಸಾರಿ, ಕೆಲಸ ಮಾಡುವ ಹೆಂಗಸರ ಕೂಲಿ ಪಟ್ಟಿಯನ್ನು ಸಿದ್ಧ ಮಾಡಿ ನಗದಿ ಕಛೇರಿಗೆ ಕಳುಹಿಸುವುದು ಅವಳ ಕೆಲಸವಾಗಿತ್ತು ವಾರದ ವರದಿಯನ್ನು ಆ ಮೊದಲೆ ಕಳುಹಿಸಿದ್ದುದರಿಂದ ಮಂಗೇಶನ ಭೇಟಿ ಅವಳಿಗೆ ಅರ್ಥವಾಗಲಿಲ್ಲ ಗಂಡಸರು ಕೆಲಸವಿಲ್ಲದೆ ಕಛೇರಿಗೆ ಬಂದು ಹರಟೆ ಹೊಡೆಯುವುದನ್ನು ಅವಳು ನಿಷೇಧಿಸಿದ್ದಳು ಆದರೂ 'ಸಮಾಧಾನದಿಂದ ಕೇಳಿದಳು

"ಏನು ಸಮಾಚಾರ ಮಂಗೇಶರಾವ್ ? ಪಟ್ಟಿ ಸರಿಯಾಗಿಲ್ಲವೇ ?"

"ನಾನು ಬಂದದ್ದು ಪಟ್ಟಿಯ ವಿಚಾರಕ್ಕಲ್ಲ ನಿಮ್ಮಿಂದ ಒಂದು

ಸಹಾಯವಾಗ ಬೇಕಾಗಿದೆ "

"ನನ್ನಿಂದ ನಿಮಗೆ ಸಹಾಯ !"

"ಹೌದು ಅನುಮತಿ ಕೊಟ್ಟರ ಕುಳಿತುಕೊಂಡು ಹೇಳುತ್ತೇನೆ"

ಪದ್ಮಾ ಸ್ವಾಗತದ ಕಿರುನಗೆಯಿಂದ "ಕುಳಿತುಕೊಳ್ಳಿ ಮಂಗೇಶರಾವ್ ನನ್ನ ಕೈಲಾಗುವ ಕೆಲಸವಾದರೆ ಮಾಡಿಕೊಡುತ್ತೇನೆ" ಎಂದಳು

ಕಾರ್ಖಾನೆಯ ಮಾಲೀಕರ ಹೊರತಾಗಿ ಮತ್ತಾರೂ ಪದ್ಮಳ ಮೇಜಿನ ಮುಂದೆ ಬಂದು ಕುಳಿತುಕೊಳ್ಳುವ ರೂಢಿಯಿರಲಿಲ್ಲ ತನ್ನ ಸಹಜ ದರ್ಪ ದಿಂದ ಪದ್ಮಾ ಎಲ್ಲರನ್ನೂ ನಿಲ್ಲಿಸಿಕೊಂಡೇ ಮಾತಾಡಿ ಕಳುಹಿಸುವಳು ಮಂಗೇಶನಿಗೂ ಅನೇಕಸಾರಿ ಈ ಅನುಭವವಾಗಿತ್ತು ಈ ದಿನ ಕುಳಿತು ಕೊಳ್ಳುವ ಅವಕಾಶ ದೊರೆತು ಅವನ ಮನಸ್ಸು ಹಿಗ್ಗಿ ಹೀರೆ ಕಾಯಾಯಿತು ನಗದಿ ಗುಮಾಸ್ತರಿಗೂ ಒಂದು ರೀತಿಯ ಗೌರವವಿದೆಯೆಂದು ಸಂತೃಪ್ತ ನಾಗಿ ಕುರ್ಚಿಯ ಮೇಲೆ ಕುಳಿತು ಅನುನಯದ ದನಿಯಿಂದ ಹೇಳಿದ

"ಮಲ್ಲೇಶ್ವರದಲ್ಲಿ ಒಂದು ಖಾಲಿ ಮನೆ ನೋಡಿದ್ದೇನೆ ಅವರ ಮಾಲೀಕರು ನಿಮಗೆ ಪರಿಚಿತರು ನೀವೊಂದು ಮಾತು ಹೇಳಿದರೆ ನನಗೇ ಬಾಡಿಗೆಗೆ ಕೊಡುತ್ತಾರೆ "

"ಅದಕ್ಕೇನು ಕಷ್ಟ, ಹೇಳುತ್ತೇನೆ ಆದರೆ ಈಗಿರುವ ಮನೆಯೇಕೆ ಬಿಡುತ್ತೀರಿ ?"

"ಅಲ್ಲ ನನ್ನ ತಾಯಿ ಅಣ್ಣ ಇರುತ್ತಾರ ನಾನು ಪ್ರತ್ಯೇಕ ಮನೆ ಮಾಡಬೇಕೆಂದಿದ್ದೇನೆ "

"ನಿಮಗೆ ಬರುವ ಸಂಬಳ ಪ್ರತ್ಯೇಕ ಸಂಸಾರಕ್ಕೆ ಸಾಕಾಗುವುದೇ ಮಂಗೇಶರಾವ್ ?"

ಪದ್ಮಾ ಸಹಜವಾಗಿ ಪ್ರಶ್ನಿಸಿದಳು ಆದರ ಮಂಗೇಶ ಆ ರೀತಿ ಅರ್ಥ ಮಾಡಕೊಳ್ಳಲಿಲ್ಲ ನಿನಗಿಂತ ತನ್ನ ಸಂಬಳ ಹೆಚ್ಚೆಂದು ತೋರಿಸಿ ಕೊಳ್ಳುವುದು ಅವಳ ಉದ್ದೇಶವೆಂದು ಭಾವಿಸಿ ಜಂಭದ ದನಿಯಿಂದ ಹೇಳಿದ

"ನಮ್ಮ ಮಾವನವರು ಮನೆಕರ್ಚಿಗೆ ಪ್ರತಿತಿಂಗಳು ನೂರು ರೂಪಾಯಿ ಕಳುಹಿಸುತ್ತಾರೆ."

"ಮಾವನ ಹಣದಿಂದ ಬದಕುವ ಗಂಡಸಿನ ಜನ್ಮ ಸುಡಬೇಕು" ಎಂದು ಪದ್ಮಾ ಮನಸ್ಸಿನಲ್ಲಿ ಭಾವಿಸಿ ಪ್ರಕಟವಾಗಿ "ಪುಣ್ಯವಂತರಪ್ಪ ನೀವು! ದುಡ್ಡಿನ ಮಾವ ಸಿಕ್ಕಿದ್ದಾನೆ" ಎಂದಳು

ಆ ದಿನ ಸಂಜೆ ಮಂಗೇಶ ಮತ್ತು ಪದ್ಮಾ ಮನೆಯ ಮಾಲೀಕನನ್ನು ಕಂಡು ಮಾತಾಡಿ, ನಲವತ್ತು ರೂಪಾಯಿ ಬಾಡಿಗೆ ಗೊತ್ತುಮಾಡಿಕೊಂಡು ಎರಡು ತಿಂಗಳ ಬಾಡಿಗೆ ಮುಂಗಡವಾಗಿ ಕೊಟ್ಟರು ಮನೆಗೆ ಬೇಕಾದ ಮರದ ಸಾಮಾನುಗಳನ್ನು ಕೊಂಡುಕೊಳ್ಳಲು ಸಂಗಡ ಬರುವಂತೆ ಮಂಗೇಶ ಪದ್ಮಳನ್ನು ಕೇಳಿಕೊಂಡ

"ನಿಮ್ಮ ಮನೆಯಾಕೆಯನ್ನು ಸಂಗಡ ಕರೆದುಕೊಂಡು ಹೋಗಿ ಅವರು ಒಪ್ಪಿದ್ದನ್ನು ಕೊಂಡುಕೊಳ್ಳಿ"

ಎಂದು ಆನಂದ ಪುತ್ರಿ ಹೇಳಿದಳು

"ಯಾವ ಬಗೆಯ ಪರ್ನಿಚರ್ ತೆಗೆಯಬೇಕೆಂಬ ಅನುಭವ ನಿಮಗೆ ಚೆನ್ನಾಗಿದೆ ಅದಕ್ಕಾಗಿಯೇ ತೊಂದರೆ ಕೊಡುತ್ತೇನೆ ನನ್ನ ಪತ್ನಿ ಮೈಸೂರಿಗೆ ಬಂಧುಗಳೊಬ್ಬರ ಮನೆಗೆ ಹೋಗಿದ್ದಾಳೆ ಅವಳು ಬಂದ ಕೂಡಲೆ ಹೊಸ ಮನೆಗೆ ಹೋಗಬೇಕು ಸಾಮಾನು ಕೊಳ್ಳಲು ಅವಳಿಗಾಗಿ ಕಾಯುವ ಅಗತ್ಯವೇನೂ ಇಲ್ಲ"

ಎಂದು ಹೇಳಿ ಮಂಗೇಶ ಜೇಬಿನಿಂದ ನೂರು ರೂಪಾಯಿಯ ಐದು ನೋಟುಗಳನ್ನು ತೆಗೆದು ತೋರಿಸಿದ ಅವನ ವರ್ತನೆ ಪದ್ಮಳಿಗೆ ವಿಚಿತ್ರವಾಗಿ ಕಂಡಿತು ಹಣವನ್ನು ತನಗೆ ತೋರಿಸಿದ್ದು ಮಕ್ಕಳಾಟವೆಂದು ಅವಳು ಭಾವಿಸಿದಳು ಒಂದೇ ಸಾರಿ ೫೦೦ ರೂಪಾಯಿಗಳನ್ನು ಜೇಬಲ್ಲಿಟ್ಟುಕೊಂಡು ಕರ್ಚು ಮಾಡುವ ಸುಯೋಗ ಮಂಗೇಶನಿಗೆ ದೊರಕಿದುದು ಇದೇ ಮೊದಲ ಸಾರಿಯೆಂದು ಅವಳಿಗೆ ಖಂಡಿತವಾಯಿತು ಈ ಸಂದರ್ಭದಲ್ಲಿ ತಾನು ಅವನ ಸಹಾಯಕ್ಕೆ ಹೋಗದೆ ಹೋದರೆ ಸಾಮಾನು ಕೊಳ್ಳುವುದರಲ್ಲಿ ಮೋಸ ಹೋಗಬಹುದೆಂದು ತಿಳಿದು "ನಾಳೆ ಮಧ್ಯಾಹ್ನ ಹೋಗೋಣ" ಎಂದಳು.

ಪದ್ಮಾ ಆನಂದಪುತ್ರಿ ಶ್ರೀಮಂತರಲ್ಲದಿದ್ದರೂ ಮಧ್ಯಮವರ್ಗದ ಮನೆತನದಲ್ಲಿ ಹುಟ್ಟಿದವಳು ಅವಳ ತಂದೆ ಸೈನ್ಯದಲ್ಲಿ ಕ್ಯಾಪ್ಟನಾಗಿದ್ದು ದ್ವಿತೀಯ ಮಹಾ ಯುದ್ಧದಲ್ಲಿ ಲಿಬಿಯಾ ರಣರಂಗದಲ್ಲಿ ಪ್ರಾಣ ತೆತ್ತ ಭಾರತ

ಯೋಧರಲ್ಲೊಬ್ಬನು. ತಂದೆ ಸತ್ತ ಸುದ್ದಿ ತಿಳಿದಾಗ ಪದ್ಮಳಿಗೆ ೨೪ ವರ್ಷ ವಯಸ್ಸು ಕಾನ್ವೆಂಟ್ ಬಿಟ್ಟು ಬಿ ಎ ತರಗತಿಗೆ ಸೇರಿ ಎರಡು ವರ್ಷ ವಾಗಿತ್ತು ಮಧ್ಯಮ ವರ್ಗದ ಅನೇಕ ಸಂಸಾರಗಳಂತೆ ಪದ್ಮಳ ತಂದೆ ಕೂಡಾ ತನಗೆ ಬರುತ್ತಿದ್ದ ವೇತನದಲ್ಲಿ ಒಂದಲ್ಪ ಭಾಗವನ್ನು ಉಳಿಸಲೂ ಶಕ್ತನಾಗಿರಲಿಲ್ಲ ಮರಣಾನಂತರ ಸರ್ಕಾರದಿಂದ ದೊರೆತ ಹಣದಲ್ಲಿ ಪದ್ಮಳ ತಾಯಿ ಮಲ್ಲೇಶ್ವರದಲ್ಲಿ ಒಂದು ಮನೆ ಕೊಂಡು ಕೊಂಡಳು ಪೂನಾದಲ್ಲಿ ಮಗಳ ವಿದ್ಯಾಭ್ಯಾಸ ಮುಂದುವರಿಸಿದಳು ನಾಲ್ಕು ವರ್ಷಗಳು ಕಳೆದರೂ ಪರೀಕ್ಷೆಯಲ್ಲಿ ತೇರ್ಗಡೆಯಾಗದೆ ಹೋದದ್ದರಿಂದ ಪದ್ಮಾ ಪುನಃ ಬೆಂಗಳೂರಿಗೆ ಹಿಂದಿರುಗ ಬೇಕಾಯಿತು ಸುಮ್ಮನಿದ್ದರೆ ಹೇಗೆ ಎಂದು ಟೈಪ್ ಮಾಡುವುದು, ಶೀಘ್ರ ಲೇಖನ, ಲೆಕ್ಕ ಮುಂತಾದುವನ್ನು ಕಲಿತಳು ಸೈನ್ಯದ ಮಹಿಳಾ ವಿಭಾಗದಲ್ಲಿ ಕೆಲಸಕ್ಕೆ ಸೇರುವುದು ಉದ್ದೇಶವಾಗಿತ್ತು ಆದರೆ ತಾಯಿ ಬಿಡಗೊಡಿಸಲಿಲ್ಲ ಕೊನೆಗೆ ಪರಿಮಳ ಸೋಪ್ ಫ್ಯಾಕ್ಟರಿಯಲ್ಲಿ ಕೆಲಸಕ್ಕೆ ಸೇರಿದಳು

ಮನೆಯಲ್ಲಿ ತಾಯಿಯ ಹೊರತಾಗಿ ಪದ್ಮಳಿಗೆ ಮತ್ತಾರೂ ಇರಲಿಲ್ಲ. ಅವಳ ದರ್ಪಿತ ವರ್ತನೆ, ಶ್ರೀಮದ್ಗಾಂಭೀರ್ಯ ಬಂಧುಗಳನ್ನು ದೂರ ಮಾಡಿತ್ತು ಮದುವೆ ಮಾಡಲು ಒಂದೆರಡುಸಾರಿ ಪ್ರಯತ್ನಿಸಿ ವಿಫಲವಾಗಿ ಕೊನೆಗೆ ಕಲಿತ ಮಗಳು ಇಷ್ಟಬಂದಂತಿರಲಿ ಎಂದು ತಾಯಿ ಸುಮ್ಮನಾದಳು.

ಮರುದಿನ ಶನಿವಾರ ಒಂದು ಗಂಟೆಗೆ ಕಾರ್ಖಾನೆ ಮುಚ್ಚಿತು. ಮಂಗೇಶರಾವ್ ಪದ್ಮ ಟ್ಯಾಕ್ಸಿಯಲ್ಲಿ ಕುಳಿತು ದಂಡಿನ ಒಂದು ದೊಡ್ಡ ಪರ್ನಿಚರ್ ಅಂಗಡಿಗೆ ಹೋಗಿ ಜೋಡಿ ಮಂಚ, ಎರಡು ಮೇಜುಗಳು, ಕುರ್ಜಿಗಳು, ಒಂದು ಸೋಪಾ, ಬಟ್ಟೆಗಳಿಗಾಗಿ ಕನ್ನಡಿಯ ಅಲ್ಮಾರು ಮುಂತಾದವುಗಳನ್ನು ಬೆಲೆ ಮಾಡಿದರು. ಒಟ್ಟು ೨೫೦ ರೂಪಾಯಿಗಳಾದವು. ಹಣ ಕೊಟ್ಟು ಅಂಗಡಿಯವನಿಗೆ ಸಾಮಾನುಗಳನ್ನು ಎಲ್ಲಿಗೆ ಕಳುಹಿಸ ಬೇಕೆಂಬುದನ್ನು ತಿಳಿಸಿ ಕಬ್ಬನ್ ಪಾರ್ಕ್ ರೆಸ್ಟೋರೆಂಟಿಗೆ ಬಂದು ಲೇಡೀಸ್ ರೂಮಿನಲ್ಲಿ ಉಪಹಾರಕ್ಕೆ ಕುಳಿತರು ಮಂಗೇಶ ಉದಾರತೆಯಿಂದ ಎರಡುಬಗೆಯ ಸಿಹಿ ತಿಂಡಿ, ವೆಜಿಟಬಲ್ ಕಟ್‌ಲೆಟ್, ಐಸ್‌ಕ್ರೀಂ, ಕಾಫಿ ತರುವಂತೆ ಹೇಳಿದ.

ತಿನಸುಗಳು ಮೇಜಿನ ಮೇಲೆ ಬಂದು ಅವುಗಳ ಮಧುರ ತಿಕ್ತತೆ ನಾಲಿಗೆಯನ್ನು ತೃಪ್ತಿಗೊಳಿಸುತ್ತಿದ್ದಂತೆ ಪದ್ಮಳ ಸಂಕೋಚ ಸಡಿಲವಾಯಿತು. ಮೇಜಿನ ಅಡಿಯಲ್ಲಿ ಅವಳ ಪಾದಗಳು ಉದ್ದೇಶ ಪೂರ್ವಕವಾಗಿ ಮಂಗೇಶನ ಪಾದಗಳನ್ನು ಸ್ಪರ್ಶಿಸಿದವು

ಇದುವರೆಗೆ ಪದ್ಮಳನ್ನು ಮಂಗೇಶ ಉಪೇಕ್ಷಾ ದೃಷ್ಟಿಯಿಂದ ನೋಡಲು ಮೂರು ಮುಖ್ಯ ಕಾರಣಗಳಿದ್ದವು ಮೊದಲನೆಯದು ಅವಳ ದರ್ಪದ ಮನೋಭಾವ, ಎರಡನೆಯದು ಯಜಮಾನರಿಗೂ ಅವಳಿಗೂ ಇರಬಹುದಾಗಿ ಕಾರ್ಖಾನೆಯಲ್ಲಿ ಕೆಲವರು ಭಾವಿಸಿದ್ದ ಸಂಬಂಧ, ಮೂರನೆಯದು ಅವಳು ತನಗಿಂತ ನಾಲ್ಕಾರು ವರ್ಷ ಹಿರಿಯಳೆಂಬುದು ಈ ಎಲ್ಲ ಕಾರಣಗಳಿಂದ ಅವನು ಅವಳಲ್ಲಿ ಹೆಚ್ಚು ಗೌರವದಿಂದ ವರ್ತಿಸುತ್ತಿದ್ದ ವಿಲಾಸ ದೃಷ್ಟಿಯಿಂದ ಅವಳನ್ನೊಂದು ಸಾರಿಯೂ ನೋಡಿರಲಿಲ್ಲ ಉಪಹಾರಗೃಹದ ಉತ್ತೇಜಕ ವಾತಾವರಣದಲ್ಲಿ ಅವಳ ಸಂಕೋಚ ಸಡಲಿ ಪಾದ ಸ್ಪರ್ಶವಾದಾಗ ತಲೆಯೆತ್ತಿ ನೋಡಿದ ಪದ್ಮಾ ನಕ್ಕಳು ಕಾಲುಗಳ ಒತ್ತುವಿಕೆಯಂತೆ ತುಟಿಗಳ ನಗುವೂ ರಮ್ಯವೆಂದು ಮಂಗೇಶನಿಗೆ ತೋರಿತು ಪದ್ಮಾ ಕಟ್‌ಲೆಟ್ ತಿನ್ನುತ್ತಿದ್ದಳು ಧೈರ್ಯ ಮಾಡಿ “ ನನಗೊಂದು ತುಣಕು ಕೊಡುವುದಿಲ್ಲವೇ ಪದ್ಮಾ?” ಎಂದು ಕೇಳಿದ

ಪದ್ಮಾ ಒಂದು ತುಂಡು ತೆಗೆದು ಕೊಟ್ಟಳು ಮಂಗೇಶ ಬಾಯಿ ತೆರೆದು ಚಾಚಿದ ಕೈಯನ್ನು ಚುಂಬಿಸಿದ ಆನಂದಪುತ್ರಿ ಕೃತಕವಾದ ಕೋಪದಿಂದ “ ಯಾರಾದರೂ ನೋಡಿದರೆ !” ಎಂದಳು

“ ಯಾರು ಬರುತ್ತಾರೆ ನಮ್ಮನ್ನು ನೋಡಲು !”

“ ಮದುವೆಯಾದ ಮೇಲೆ ನೀವು ಬಹಳ ತುಂಟರಾದಿರಿ ಹತೋಟಿ ಯಲ್ಲಿಟ್ಟುಕೊಳ್ಳುವಂತೆ ನಿಮ್ಮ ಹೆಂಡತಿಗೆ ಹೇಳಬೇಕು ”

ಉಪಹಾರ ಗೃಹದ ಮೇಜಿನಡಿಯಲ್ಲಿ ಪ್ರಾರಂಭವಾದ ಈ ಚಲ್ಲಾಟ ಟ್ಯಾಕ್ಸಿಯಲ್ಲಿ ಮಲ್ಲೇಶ್ವರ ತಲಪುವುದರಲ್ಲಿ ಬಾಯಿ ಕೈಗಳಿಗೂ ವ್ಯಾಪಿಸಿದ್ದನ್ನು ಕಂಡು ಪದ್ಮಾ ಚಕಿತೆಯಾದಳು ಅವಶ್ಯಕತೆಗಿಂತ ಹೆಚ್ಚಿನ ಬಂಡವಾಳ ವೆಚ್ಚವಾಯಿತೆಂದು ತಿಳಿದು ಬೇಗ ಮುದ್ರೆ ಭದ್ರಪಡಿಸಿದಳು ಮನೆಯ ಮುಂದೆ ಟ್ಯಾಕ್ಸಿ ನಿಂತು ಕೆಳಗಿಳಿದಾಗ ಅವಳು ಪರಿಮಳ ಸೋಪ್

ಫ್ಯಾಕ್ಟರಿಯ " ಸೂಪರಿಂಡೆಂಟ್ "ಳಾಗಿ ಪೂರ್ಪಟ್ಟಿದ್ದಳು

ಕಿಟಕಿ ಬಾಗಿಲುಗಳಿಗೆ ಬೇಕಾದ ಪರದೆಗಳನ್ನು ಆರಿಸುವ ನೆಪದಲ್ಲಿ ಮಂಗೇಶ ಪದ್ಮಳ ನೆರವನ್ನು ಬಯಸಿ ಟ್ಯಾಕ್ಸಿ ತಿಂಡಿಗಳಿಗಾಗಿ ಪುನಃ ಹತ್ತಾರು ರೂಪಾಯಿಗಳನ್ನು ಕರ್ಚು ಮಾಡಿದನಾದರೂ ಪದ್ಮಳ ಗಾಂಭೀರ್ಯದ ಹಿಮ ಕರಗಲಿಲ್ಲ

ಕೊನೆಗೆ ಮೈಸೂರಿಗೆ ಲತಾಂಗಿಗೆ ಪತ್ರ ಬರೆದ—" ಬೇರೆ ಮನೆ ನೋಡಿದ್ದೇನೆ ಕೂಡಲೆ ಹಿಂದಿರುಗು " ಎಂದು

— ೨ —

ಲತಾಂಗಿ ಬೆಂಗಳೂರಿಗೆ ಬಂದು ಹೊಸ ಮನೆ ಅಚ್ಚುಕಟ್ಟಾಗಿ ಸಜ್ಜಾಗಿರುವುದನ್ನು ಕಂಡು ಮಂಗೇಶ ನಿರೀಕ್ಷಿಸಿದ್ದಂತೆ ಸಂತುಷ್ಟಳಾಗಲಿಲ್ಲ. ತಾಯಿಯ ಸಂಗಡಿದ್ದಾಗ ಸಂಸಾರಕ್ಕೆ ಸರಿಯಾಗಿ ಹಣ ಕೊಡದಿದ್ದ ಪತಿ ಹೊಸ ಮನೆಯನ್ನು ಸುಸಜ್ಜಿತವಾಗಿ ಮಾಡಲು ನೀರಿನಂತೆ ಹಣ ಕರ್ಚು ಮಾಡಿದುದನ್ನು ಕಂಡು ಅವಳ ಮನಸ್ಸಿನಲ್ಲಿ ಬಗೆ ಬಗೆಯ ಸಂದೇಹಗಳು ಅಂಕುರಿಸಿವವು ಇದಕ್ಕೆಲ್ಲ ಎಲ್ಲಿಂದ ದುಡ್ಡು ಬಂತು ? ಎಂದು ಯೋಚಿಸಿದಳು.

ಬಂದ ಮೇಲೆ ಎರಡು ದಿನ ಅತ್ತೆಯ ಮನೆಯಲ್ಲಿದ್ದು ಆ ಮೇಲೆ ಶುಭದಿನದಲ್ಲಿ ಗಂಡ ಹೆಂಡಿರು ಹೊಸ ಮನೆಗೆ ಹೋದರು ಸುಂದರಮ್ಮ ಹಿಂದೆ ನಡೆದ ಮಾತುಗಳನ್ನು ಮರೆತು ಸೊಸೆಗೆ ಬೇಕಾದ ಸಹಾಯ ಮಾಡಿದಳು ಲತಾಂಗಿಯೂ ಅತ್ತೆಯ ಸೌಹಾರ್ದ ಪ್ರದರ್ಶನದಿಂದ ಸಮಾಧಾನಗೊಂಡು,

" ಹೊಸ ಮನೆಯಲ್ಲಿ ನಾನೊಬ್ಬಳೇ ಇರುವುದು ಹೇಗೆ ಅತ್ತೆಯವರೇ ? ನೀವು ಲಕ್ಷ್ಮಿ ಎರಡು ದಿನ ಬಂದಿರಿ "

ಎಂದು ಕರೆದಳು

ಸುಂದರಮ್ಮನ ಇಚ್ಛೆಯೂ ಅದೇ ಆಗಿತ್ತು ಮಗಳ ಸಂಗಡ ಬಂದಳು. ಗೃಹ ಪ್ರವೇಶದ ದಿನ ಹಬ್ಬದೂಟ ಮಂಗೇಶ ಆ ದಿನ ಪದ್ಮಳನ್ನು ಊಟಕ್ಕೆ

ಕರೆದಿದ್ದ ಮಂಗೇಶನ ಮನೆಯವರ ಪರಿಚಯ ಮಾಡಿಕೊಳ್ಳುವ ಈ ಅವಕಾಶವನ್ನು ಪದ್ಮಾ ಬೇಡವೆನ್ನಲಿಲ್ಲ ಮದುವೆಯ ದಿನ ಹಸೆಯ ಮೇಲೆ ಅವಳು ಲತಾಂಗಿಯನ್ನು ನೋಡಿದ್ದಳು ಈಗ ಮಾತಾಡುವ ಅವಕಾಶ ದೊರಕಿದುದು ಅವಳಿಗೆ ಸಂತೋಷವನ್ನುಂಟುಮಾಡಿತು ಆ ದಿನ ಮಂಗೇಶ ರಜಾ ತೆಗೆದುಕೊಂಡಿದ್ದ ಪದ್ಮಾ ಕಾರ್ಖಾನೆಯಲ್ಲಿ ಒಂದು ಗಂಟೆವರೆಗೆ ಕೆಲಸ ಮಾಡಿ ಬಂದಿದ್ದಳು ಮೂರು ಗಂಟೆ ಸುಮಾರಿಗೆ ಊಟ ಮುಗಿದು ಎಲ್ಲರೂ ನಡುಮನೆಯಲ್ಲಿ ಕುಳಿತು ಮಾತಾಡುತ್ತಿದ್ದರು

" ಈಗ ನಿಮಗೆ ಒಂದು ಮನೆಯ ಬದಲಾಗಿ ಎರಡು ಮನೆಯಾಯಿತು, ಸುಂದರಮ್ಮನವರೇ "

ಎಂದು ಹಾಸ್ಯದ ಧ್ವನಿಯಿಂದ ಪದ್ಮಾ ಹೇಳಿದಳು

ಸುಂದರಮ್ಮ ಅದಕ್ಕೆ ಉತ್ತರ ಕೊಡಬಹುದಾದ್ದೇನೂ ಇರಲಿಲ್ಲ ಪದ್ಮಾ ತನ್ನನ್ನು ಕುಚೋದ್ಯ ಮಾಡುತ್ತಿರುವಳೆಂದು ಭಾವಿಸಿ ಹಾಸ್ಯದ ದನಿಯಿಂದ ಹೇಳಿದಳು

" ಆನಂದಪುತ್ರಿಯಿಂದ ನಮಗೆ ಬಹಳ ಉಪಕಾರವಾಗಿದೆ ಲತಾ. ಮನೆ ಬಾಡಿಗೆಗೆ ಕೊಡಿಸಿ, ಫರ್ನಿಚರ್ ಕೊಂಡುಕೊಳ್ಳಲು ಮಂಗೇಶನಿಗೆ ಬಹಳ ಸಹಾಯ ಮಾಡಿದ್ದಾರೆ "

ಇದನ್ನು ಕೇಳಿ ಲತಾಂಗಿಯ ಕಿವಿಗಳು ನಿಮಿರಿದವು ಮನೆಯ ವಿಚಾರ ಮಂಗೇಶ ಅವಳಿಗೆ ಏನೂ ಹೇಳಿರಲಿಲ್ಲ ತಾಯಿ ತನ್ನ ಗುಟ್ಟು ಹೊರಗೆ ಹಾಕುತ್ತಿರುವಳೆಂದು ಮಂಗೇಶ ಬೆದರಿದ

" ಕುರ್ಚಿ ಮೇಜುಗಳು ಮೊದಲುಗೊಂಡು ಕಿಟಕಿ ಬಾಗಿಲುಗಳಿಗೆ ಹಾಕಿರುವ ಪರದೆಗಳನ್ನು ಆರಿಸುವುದರಲ್ಲೂ ಇವರಿಗೆ ಹೆಚ್ಚು ಅನುಭವವಿದೆ ಏಕೆ ಈ ಸಾಮಾನುಗಳು ಚೆನ್ನಾಗಿಲ್ಲವೇ ?"

ಎಂದು ಮೆರುಗಿನ ಮಾತಾಡಿದ

" ನೀನು ಊರಲ್ಲಿಲ್ಲದ್ದರಿಂದ ಈ ಕೆಲಸ ನನ್ನ ಮೇಲೆ ಬಿತ್ತು ಹಣ ಖರ್ಚು ಮಾಡುವವರಿದ್ದರೆ ಇಂತಹ ನಾಲ್ಕು ಮನೆಗಳಿಗೆ ಬೇಕಾದ ಸಾಮಾನು ಗಳನ್ನು ಆರಿಸಬಲ್ಲೆ "

ಎಂದು ಪದ್ಮಾ ಹೇಳಿದಳು.

ತನ್ನ ಪರೋಕ್ಷದಲ್ಲಿ ಬೆಂಗಳೂರಲ್ಲಿ ಏನು ನಡೆದಿದೆಯೆಂಬುದನ್ನು ಲತಾಂಗಿ ಊಹಿಸಿ ತಿಳಿದುಕೊಂಡಳು ತನಗೆ ಬೇಡವಾದ ಪತಿ ತಾನು ಊರಲಿಲ್ಲದಿರುವಾಗ ಪದ್ಮಳ ಪ್ರಣಯಕ್ಕಾಗಿ ಪ್ರಯತ್ನಿಸಿರಬಹುದೇ ? ಅಸೂಯೆ ಅಥವಾ ಕೋಪದ ನೆರಳೂ ಅವಳ ಮನಸ್ಸಿನ ಮೇಲೆ ಬೀಳಲಿಲ್ಲ. ಗಂಡನಲ್ಲಿ ತನ್ನ ಅಪಚಾರಕ್ಕೆ ಕಾರಣ ತಾನಾಗಿ ದೊರಕಿತೆಂದು ತಿಳಿದಳು. ಪ್ರಕಟವಾಗಿ ಹೇಳಿದಳು,

" ನಾನಿದ್ದಿದ್ದರೆ ಇಷ್ಟೊಂದು ದುಡ್ಡು ಕರ್ಚು ಮಾಡಿಸುತ್ತಲೇ ಇರಲಿಲ್ಲ"

" ಪ್ರತಿ ದಿನ ನಾವು ಈ ಸಾಮಾನುಗಳನ್ನು ಕೊಂಡುಕೊಳ್ಳುವೆವೆ ? ಒಂದು ಸಾರಿ ತಂದರೆ ಯಾವಾಗಲೂ ಇರುತ್ತದೆ "

ಎಂದು ಪದ್ಮಾ ಸಮಾಧಾನ ಹೇಳಿದಳು

ಸ್ವಲ್ಪ ಯೊತ್ತು ಯಾರೂ ಮಾತಾಡಲಿಲ್ಲ ಲಕ್ಷ್ಮಿ ಅರಳಿದ ಕಣ್ಣು ಗಳಿಂದ ಅತ್ತಿಗೆ ಮತ್ತು ಪದ್ಮಳ ಮುಖ ನೋಡುತ್ತಿದ್ದಳು ಅತ್ತಿಗೆ ಆನಂದಪುತ್ರಿಗಿಂತ ರೂಪವತಿ ಆದರೆ ಅತ್ತಿಗೆಯ ಮುಖವೇಕೆ ಬಾಡಿದೆ? ಅಣ್ಣ ಪ್ರತ್ಯೇಕ ಮನೆ ಮಾಡಿ ಇಷ್ಟೆಲ್ಲಾ ಬೆಲೆ ಬಾಳುವ ವಸ್ತುಗಳಿಂದ ಅಲಂಕರಿಸಿರುವಾಗ ಅವಳೇಕೆ ಈ ರೀತಿ ಮುಖ ಗಂಟು ಹಾಕಿಕೊಂಡಿದ್ದಾಳೆ ? ಲಕ್ಷ್ಮೀ ಶೈಶವ ದಾಟಿ ಕೈಶೋರದಲ್ಲಿ ಅಡಿಯಿಟ್ಟಿದ್ದರೂ ಮಕ್ಕಳಂತೆ ಸರಳ ಹೃದಯೆ ಆ ಪ್ರಶ್ನೆಗಳಿಗೆ ಸಮಾಧಾನವೇನೂ ತೋರಲಿಲ್ಲ

ಲಕ್ಷ್ಮಿಯನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು ಸುಂದರಮ್ಮನ ಕಡೆ ತಿರುಗಿ ಪದ್ಮಾ ಹೇಳಿದಳು

" ನಿಮ್ಮ ಮಗಳು ರತ್ನದಂತಹ ಹುಡುಗಿ ಯಾವಾಗ ಮದುವೆ ಮಾಡುತ್ತೀರಿ ಇವಳಿಗೆ ?"

" ನಾನು ಹೆಂಗಸು ಏನು ಮಾಡಬಲ್ಲೆ ತಾಯಿ ಲಕ್ಷ್ಮಿಗೆ ವರವನ್ನು ಹುಡುಕುವುದು ಅವಳ ಅಣ್ಣಂದಿರ ಮೇಲೆ ಬಿದ್ದ ಭಾರ."

ಸುಂದರಮ್ಮ ಕಹಿಯಾದ ದನಿಯಿಂದ ಈ ಮಾತು ಹೇಳಿ ಎದ್ದು ಒಳಗೆ ಹೋದಳು ಸಮಯ ಕಾಯುತ್ತಿದ್ದ ಮಂಗೇಶನೂ ಅಲ್ಲಿಂದ ಕಾಲ್ತೆಗೆದ ಮನೆಯ ವಾತಾವರಣ ತುಸು ಹಗುರವಾದಂತೆ ಲತಾಂಗಿ ಭಾವಿಸಿದಳು. ಅನಂತರ ಅವಳು ಪದ್ಮಳ ಸಂಗಡ ಬಹಳ ಹೊತ್ತು ಮಾತಾಡಿದಳು.

"ವಿಶ್ವಮಿತ್ರ" ಕಛೇರಿಯಲ್ಲಿ ಕೆಲಸ ಸಿಕ್ಕಬಹುದಾಗಿಯೂ ತಿಳಿಸಿದಳು. ಲತಾಂಗಿ ತನ್ನಂತೆ ವಿದ್ಯಾವತಿಯೆಂದೂ ಕೆಲಸಕ್ಕೆ ಸೇರಿ ಜೀವನಕ್ಕೆ ಸಂಪಾದಿಸಿ ಕೊಳ್ಳುವುದು ಅವಳ ಉದ್ದೇಶವೆಂದೂ ತಿಳಿದಾಗ ಪದ್ಮಾ ಹೇಳಿದಳು

"ನಿನ್ನ ಮಾತು ಕೇಳಿ ನನಗೆ ಸಂತೋಷವಾಯಿತು ಲತಾ ಗಂಡನ ದುಡಿಮೆಯಿಂದ ಜೀವಿಸುವ ಹೆಣ್ಣಿನ ಬಾಳು ಗುಲಾಮಗಿರಿಯೆಂದು ನಾನು ತಿಳಿದಿದ್ದೇನೆ ನಾಳೆಯೇ "ವಿಶ್ವಮಿತ್ರ" ಕಛೇರಿಗೆ ಹೋಗಿ ಸಂಪಾದಕರನ್ನು ನೋಡು ಬೇಕಾದರೆ ನಾನೂ ಸಂಗಡ ಬರುತ್ತೇನೆ"

ಲತಾಂಗಿಗೆ ಧೈರ್ಯವಾಯಿತು ಕೆಲಸದ ವಿಚಾರ ಪತಿಯ ಸಂಗಡ ಯಾವ ರೀತಿ ಪ್ರಸ್ತಾಪಿಸುವುದೆಂದು ಯೋಚಿಸುತ್ತಿದ್ದ ಅವಳು ತನ್ನ ಸಹಾಯಕ್ಕೆ ಗೆಳತಿಯೊಬ್ಬಳು ದೊರಕಿದಳೆಂದು ತಿಳಿದಳು

"ಸಂಗಡ ಬರುವ ಅಗತ್ಯವಿಲ್ಲ ನಾನೇ ಹೋಗುತ್ತೇನೆ ಆದರೆ ಮನೆಯಲ್ಲಾರಿಗೂ ನಾನು ಕೆಲಸಕ್ಕೆ ಹೋಗುವುದು ಇಷ್ಟವಿಲ್ಲ ಅದಕ್ಕಾಗಿಯೇ ಜಗಳವಾಗಿ ನಾನು ಮೈಸೂರಿಗೆ ಹೋದದ್ದು ಪುನಃ ಆ ಪ್ರಸ್ತಾಪ ಮಾಡುವುದು ಹೇಗೆ ಎಂದು ಯೋಚಿಸುತ್ತಿದ್ದೇನೆ"

ಎಂದು ಹೇಳಿದಳು ಮಂಗೇಶನ ಸಂಗಡ ಮಾತಾಡಿ ಎಲ್ಲವನ್ನೂ ಸರಿಪಡಿಸುವುದಾಗಿ ಪದ್ಮಾ ಭರವಸೆಯಿತ್ತಳು ಅದರಂತೆ ಮಾರುದಿನ ಕಾರ್ಖಾನೆಗೆ ಹೋದಾಗ ಮಧ್ಯಾಹ್ನ ವಿರಾಮ ಕಾಲದಲ್ಲಿ ಆಳಿನ ಮುಖಾಂತರ ಮಂಗೇಶನಿಗೆ ಹೇಳಿ ಕಳುಹಿಸಿದಳು ಮಂಗೇಶ ಕೂಡಲೆ ಬಂದ "ಕುಳಿತುಕೊಳ್ಳಿ ಮಂಗೇಶರಾವ್ ನಿಮ್ಮ ಸಂಗಡ ಮಾತಾಡಬೇಕಾಗಿದೆ" ಎಂದು ಪದ್ಮಾ ಅವನನ್ನು ಸ್ವಾಗತಿಸಿದಳು ಈಗ ಒಂದೆರಡು ದಿನಗಳಿಂದ ದಿನಕ್ಕೆ ಒಂದೆರಡು ಸಾರಿಯಾದರೂ ಏನಾದರೊಂದು ನೆವದಿಂದ ಮಂಗೇಶ ಅಲ್ಲಿಗೆ ಬರುತ್ತಿದ್ದ ಆ ದಿನ ಬೆಳಿಗ್ಗೆ ಯಜಮಾನರು ಲೆಕ್ಕದ ತನಿಖೆ ಮಾಡುತ್ತಾ ಕುಳಿತುಕೊಂಡದ್ದರಿಂದ ಇದುವರೆಗೆ ಬಂದಿರಲಿಲ್ಲ ಪದ್ಮಾ ತಾನಾಗಿ ಹೇಳಿ ಕಳುಹಿಸಿದ್ದರಿಂದ ಈಗ ಅವನು ಹಿಗ್ಗಿನ ಹೆಗುರತೆಯಿಂದ ಕುಣಿಯುತ್ತ ಬಂದು ಕುರ್ಚಿಯ ಮೇಲೆ ದೊಪ್ಪನೆ ಕುಕ್ಕರಿಸಿ ಹೇಳಿದ

"ಏನು ಸಮಾಚಾರ ಪದ್ಮಾ?"

"ಹೊಸ ಮನೆಯಲ್ಲಿ ಚೆನ್ನಾಗಿ ನಿದ್ರೆ ಬಂತೆ?"

" ಅದನ್ನು ಕೇಳುವುದಕ್ಕೇ ನನ್ನನ್ನು ಕರೆದದ್ದು !"

" ನಿಮ್ಮ ಮುಖ ನೋಡಿದರೆ ನಿದ್ರೆ ಮಾಡಿದಂತೆ ಕಾಣುವುದಿಲ್ಲ "

ಪದ್ಮಳ ಸಂದೇಹ ಮಂಗೇಶನ ಸ್ವಾಭಿಮಾನವನ್ನು ಎಚ್ಚರಗೊಳಿಸಿತು. ತನ್ನ ದಾಂಪತ್ಯ ಜೀವನದ ವಿಚಾರದಲ್ಲಿ ಅವಳ ಆಸಕ್ತಿ ಉದಯಿಸುತ್ತಿರುವುದ್ಮ ಪ್ರೇಮದ ಗುರುತೆಂದು ಭಾವಿಸಿ ಮಂಗನಂತೆ ಹಲ್ಲು ಕಿರಿದು ನಗೆ ಬೀರುತ್ತಾ ಹೇಳಿದ

" ನಿದ್ರೆ ಮಾಡದೆ ಉಂಟೇ ? ಮಲಗುವುದಕ್ಕೆ ಹೊತ್ತಾಯಿತು "

ರಾತ್ರಿಯ ವಾಸ್ತವಿಕ ಘಟನೆಗಳನ್ನು ಪದ್ಮಳ ಸೂಕ್ಷ್ಮ ಬುದ್ಧಿಯಿಂದ ಮರೆ ಮಾಡುವುದು ಮಂಗೇಶನ ನಗುವಿನ ಉದ್ದೇಶವಾಗಿತ್ತು ಮೈಸೂರು ಪ್ರವಾಸಾನಂತರ ಲತಾಂಗಿಯ ಪುರುಷದ್ವೇಷ ಮತ್ತಷ್ಟು ಉಗ್ರ ರೂಪ ತಾಳಿ ಅವಳು ಪತಿಯ ಅನುನಯ ಬೇಡಿಕಗಳನ್ನು ನಿರಾಕರಿಸಿ ನೆಲದ ಮೇಲೆ ಚಾಪೆ ಹಾಸಿಕೊಂಡು ಮಲಗಿ ರಾತ್ರಿ ಕಳೆದಳು ಮಂಗೇಶ ಖಿನ್ನ ಮನಸ್ಕ ನಾಗಿ ಕಛೇರಿಗೆ ಬಂದಿದ್ದ

" ಪತ್ನಿಯನ್ನು ಯಾವಾಗ ಕೆಲಸಕ್ಕೆ ಕಳುಹಿಸುತ್ತೀರಿ ? "

ಮಂಗೇಶ ಉತ್ತರ ಕೊಡದಿದ್ದುದನ್ನು ಕಂಡು ಪದ್ಮಾ " ಏಕ ? ಕಳುಹಿಸುವ ಇಷ್ಟವಿಲ್ಲವ ? " ಎಂದು ಕೇಳಿದಳು

" ಕೆಲಸ ಸಿಕ್ಕಿದ ಮೇಲಲ್ಲವೆ ಆ ಪ್ರಶ್ನೆ ?"

"ಕಲಸಸಿಕ್ಕಂತೆಯೇ 'ವಿಶ್ವಮಿತ್ರ' ಸಂಪಾದಕರು ಕಲಸ ಕೊಡುವುದಾಗಿ ಹೇಳಿದ್ದಾರಂತೆ ನಾಳೆ ಕಛೇರಿಗೆ ಹೋದರ ಆರ್ಡರ್ ಕೈಗ ಬರುತ್ತದೆ."

" ನಿಮಗಿದನ್ನು ಯಾರು ಹೇಳಿದರು ? ಲತಾಂಗಿಯೆ ?"

ಪದ್ಮಾ ತಲೆಯಾಡಿಸಿ ಸಮ್ಮತಿ ಸೂಚಿಸಿದಳು

ಮಂಗೇಶ ಸಿಡುಕಿನ ದನಿಯಿಂದ " ನನಗೊಂದೂ ತಿಳಿಯದು " ಎಂದು ಹೇಳಿದ

" ನೀವೇನನ್ನುವಿರೋ ಎಂಬ ಭಯದಿಂದ ಅವಳು ಹೇಳದಿರಬಹುದು. ಕಲಿತ ಹುಡುಗಿಯರನ್ನು ಕೆಲಸಕ್ಕೆ ಕಳುಹಿಸದೆ ಮನೆಯಲ್ಲಿಟ್ಟುಕೊಳ್ಳುವುದು ಸರಿಯಲ್ಲ ಮದುವರೆ ತಿಕ್ಕಿಕೊಂಡು ಮಕ್ಕಳು ಹೆರುವುದಕ್ಕೇ ವಿದ್ಯೆ ಕಲಿತದ್ದು? ನಿಮ್ಮ ತಾಯಿ ಹಿಂದಿನ ಕಾಲದವರು. ನಿಮಗೂ ಬುದ್ಧಿಯಿಲ್ಲವೇ ?"

ಹಠಾತ್ತಾಗಿ ಪದ್ಮಾ ಆನಂದಪುತ್ರಿ ಸೂಪರಿಂಡೆಂಟಾಗಿ ಮಾರ್ಪಟ್ಟು ಅಧಿಕಾರದ ಧ್ವನಿಯಿಂದ ಈ ಮಾತುಗಳನ್ನು ಹೇಳಿದಳು ಮಂಗೇಶ ಸ್ತಬ್ಧನಾಗಿ ಮುಖ ನೋಡಿದ ಪದ್ಮಾ ಮಾತು ಮುಂದುವರೆಸಿ,

"ನಾಳೆ ನೀವೇನು ಮಾಡಬೇಕು ಗೊತ್ತೆ ?"

"ನೀವು ಹೇಳಿದಂತೆ ಮಾಡುತ್ತೇನೆ"

"ಮಧ್ಯಾಹ್ನ ರಜಾ ತೆಗೆದುಕೊಂಡು ಲತಾಂಗಿಯನ್ನು 'ವಿಶ್ವಮಿತ್ರ' ಕಛೇರಿಗೆ ಕರೆದುಕೊಂಡು ಹೋಗಿ ಬನ್ನಿ"

"ಹಾಗೆಯೇ ಮಾಡುತ್ತೇನೆ"

ಸಂಜೆ ಪದ್ಮಾ ಮನೆಗೆ ಬಂದದ್ದನ್ನು ಕಂಡು ಲತಾಂಗಿ ಅಚ್ಚರಿಗೊಂಡಳು. ಕಛೇರಿಯಲ್ಲಿ ನಡೆದ ಮಾತುಕತೆಗಳನ್ನು ತಿಳಿಸಿ ಪದ್ಮಾ ಹೇಳಿದಳು.

"ನಾಳೆ ಅವರ ಸಂಗಡ ಹೋಗಿ ಆರ್ಡರ್ ತಂದುಬಿಡು ಸೋಮವಾರ ದಿಂದ ಕೆಲಸಕ್ಕೆ ಹೋಗಬಹುದು"

— ೩ —

ಪದ್ಮಾ ಆನಂದಪುತ್ರಿ ಯೋಚಿಸಿದಂತೆ ನಡೆಯಿತು.

ನಗರದ ಒಂದು ಮುಖ್ಯ ವಿಸ್ತರಣದಲ್ಲಿ ಮೂರಂತಸ್ತಿನ ದೊಡ್ಡ ಮನೆಯೊಂದರಲ್ಲಿ "ವಿಶ್ವಮಿತ್ರ" ದಿನ ಪತ್ರಿಕೆಯ ಕಛೇರಿ ಕೆಳಗಿನ ಅಂತಸ್ತಿನಲ್ಲಿ ಅಚ್ಚುಕೂಟ ಎರಡನೆಯ ಅಂತಸ್ಥಿನಲ್ಲಿ ವ್ಯವಸ್ಥಾಪಕ ಮತ್ತು ಸಂಪಾದಕ ಕಛೇರಿಗಳು ಮೂರನೆಯ ಅಂತಸ್ಥಿನಲ್ಲಿ ಪತ್ರಿಕೆಯ ಸಂಪಾದಕ ಲೀಲಾಧರ ಜೋಷಿಯ ವಾಸ ಅತಿಥಿಗಳಿಗಾಗಿ ಒಂದೆರಡು ಕೊಟಡಿಗಳೂ ಅಲ್ಲಿ ಸಜ್ಜುಗೊಳಿಸಲ್ಪಟ್ಟಿದ್ದವು.

ದ್ವಿತೀಯ ಮಹಾ ಯುದ್ಧಾನಂತರ ಪರಾಜಿತ ಜರ್ಮನ್ ರಾಷ್ಟ್ರವನ್ನು ವಿಜಯಶಾಲಿ ಮಿತ್ರವರ್ಗಗಳು ತಮ್ಮ ತಮ್ಮಲ್ಲಿ ಹಂಚಿಕೊಂಡಂತೆ "ವಿಶ್ವಮಿತ್ರ" ಪತ್ರಿಕೆಯ ವ್ಯವಸ್ಥಾಪಕ ವರ್ಗ ಮಲಬಾರಿಗಳಿಗೆ, ಅಚ್ಚು ಕೂಟದ ಯಾಂತ್ರಿಕ ವಿಭಾಗ ತಮಿಳರಿಗೆ, ಸಂಪಾದಕೀಯ ಮತ್ತು ಮೊಳೆ

ಜೋಡಿಸುವ ಶಾಖೆಗಳು ಮೈಸೂರಿನವರಿಗೆ ಹಂಚಿಕೆಯಾಗಿತ್ತು. ಪತ್ರಿಕೆಯ ಮಾಲಿಕ ರಾಮ ದಯಾಲ್‌ಸಿಂಹ ಆಡಳಿತದ ಮೇಲೆ ತನ್ನ ಹಿಡಿತ ಭದ್ರವಾಗಿರಲು ಈ ವಿಭಜನೆ ಅನುಕೂಲವೆಂದು ಭಾವಿಸಿ ಆಚರಣೆಗೆ ತಂದಿದ್ದ. ಮದ್ರಾಸಿನ ಆತನ ದಿನಪತ್ರಿಕಾ ಕಛೇರಿಯಲ್ಲಿ ಬೇಕಾದ್ದಕ್ಕಿಂತ ಹೆಚ್ಚು ಸಂಖ್ಯೆಯ ಕೆಲಸಗಾರರಿದ್ದದ್ದು ಇದಕ್ಕೆ ಅನುಕೂಲವಾಯಿತು. ಅವರಲ್ಲಿ ಅನನುಭವಸ್ಥರಾದ ಕೆಲವರನ್ನು ಅನುಭವಸ್ಥರೆಂದು ಹೇಳಿ ಬೆಂಗಳೂರು ಕಛೇರಿಗೆ ವರ್ಗಾಯಿಸಿದ. ಲೀಲಾಧರ ಜೋಷಿ ಪತ್ರಿಕೆಯ ಮುಖ್ಯ ಸಂಪಾದಕ ಮತ್ತು ವ್ಯವಸ್ಥಾಪಕನಾಗಿದ್ದ ಎಲ್ಲರಿಗಿಂತ ಹೆಚ್ಚು ವೇತನ ಪಡೆಯುತ್ತಿದ್ದರೂ ಮಾಲಿಕನ ಈ ಏರ್ಪಾಡಿಗೆ ಅವನು ಒಪ್ಪಬೇಕಾಯಿತು. ಅದರಿಂದ ಒಂದು ರೀತಿಯಲ್ಲಿ ತನ್ನ ಜವಾಬ್ದಾರಿ ಕಡಿಮೆಯಾಯಿತೆಂದು ಭಾವಿಸಿ ಅವನು ಸಂಪಾದಕೀಯ ವಿಭಾಗವನ್ನುಳಿದು ಬೇರೆ ಶಾಖೆಗಳ ಆಡಳಿತಕ್ಕೆ ಪ್ರವೇಶಿಸುತ್ತಿರಲಿಲ್ಲ

ಮೈಸೂರಿಂದ ಹಿಂದಿರುಗಿದ ಮೂರು ನಾಲ್ಕು ದಿನಗಳ ಮೇಲೆ ಒಂದು ದಿನಮಧ್ಯಾಹ್ನ ಜೋಷಿ ಕಛೇರಿಯಲ್ಲಿ ಕುಳಿತು ಸ್ಟೆನೋಗ್ರಾಫರಿಗೆ ಹೇಳಿ ಬರೆಯಿಸುತ್ತಿದ್ದ. "ವಿಶ್ವಮಿತ್ರ" ಪತ್ರಿಕೆಯ ಅಗ್ರಲೇಖನ, ಸಂಪಾದಕೀಯ ವರ್ಗದ ಮೇಲ್ವಿಚಾರಣೆ ಈ ಎರಡು ಕೆಲಸಗಳಲ್ಲದೆ ಸಂಸ್ಥೆಯ ಮಾಲಿಕ ಮದ್ರಾಸಿಂದ ಪ್ರಕಟಿಸುತ್ತಿದ್ದ ಆಂಗ್ಲ ದಿನ ಪತ್ರಿಕೆಗೆ Heard on the Streets ಎಂಬ ಹರಟೆ ಕಾಲಮನ್ನು ಪ್ರತಿ ದಿನ ಬರೆದು ಕಳುಹಿಸುವುದು ಜೋಷಿಯ ಕೆಲಸವಾಗಿತ್ತು ಇದಕ್ಕಾಗಿ ಅವನು ಪ್ರತಿ ದಿನ ಪ್ರಾತಃಕಾಲ ಬೊಂಬಾಯ್, ಮದ್ರಾಸ್, ಕಲ್ಕತ್ತಾಗಳಲ್ಲಿ ಪ್ರಕಟವಾಗುವ ಭಾರತೀಯ ದಿನ ಪತ್ರಿಕೆಗಳ ಅಗ್ರ ಲೇಖನ ಮತ್ತು ರಾಜಕೀಯ ವಾರ್ತೆಗಳನ್ನೂ, ಮುಂದಾಳುಗಳ ಭಾಷಣಗಳನ್ನೂ, ಸರ್ಕಾರಿ ಪ್ರಕಟನೆಗಳನ್ನೂ ಓದಿ ಹಾಸ್ಯ ವಿಮರ್ಶೆಗೆ ತಕ್ಕ ಭಾಗಗಳನ್ನು ಕೆಂಪು ಪೆನ್ಸಿಲಿನಲ್ಲಿ ಗುರುತು ಮಾಡುತ್ತಿದ್ದ. ಒಂದೊಂದು ದಿನ ಈ ಆಯ್ಕೆಗಾಗಿಯೇ ಎರಡು ಮೂರು ಗಂಟೆಗಳು ಕಳೆದುಹೋಗುತ್ತಿದ್ದವು.

ಪತ್ರಿಕೆ ಪ್ರಾರಂಭವಾದಾಗ ಅಗ್ರ ಲೇಖನ, ಹರಟೆ ಎರಡನ್ನೂ ಸ್ಟೆನೋಗ್ರಾಫರಿಗೆ ಹೇಳಿ ಬರೆಯಿಸಿ ಟೈಪ್ ಆಗಿ ಬಂದ ಮೇಲೆ ಎರಡನ್ನೂ

ಉಪ ಸಂಪಾದಕರಿಗೆ ಭಾಷಾಂತರಕ್ಕೆ ಕಳುಹಿಸುವುದು ಮೊದಲು ಮೊದಲು ಜೋಷಿಯ ಅಭ್ಯಾಸವಾಗಿತ್ತು. ಅದರ ಕಾರಣ ಜನ್ಮತಃ ಅವನು ಕನ್ನಡಿಗನಾಗಿದ್ದರೂ ೨೦ ವರ್ಷಗಳ ಕಾಲ ಭಾರತದ ಪ್ರಮುಖ ನಗರಗಳಲ್ಲಿ ಆಂಗ್ಲ ಭಾಷಾ ಪತ್ರಿಕೆಗಳ ಪ್ರತಿನಿಧಿಯಾಗಿ ಕೆಲಸ ಮಾಡಿ ತಾಯ್ನುಡಿಯನ್ನು ಮರೆತಿದ್ದದ್ದೇ. ಈಗ ಕನ್ನಡದಲ್ಲಿ ಬರೆಯುವುದೆಂದರೆ ಕಷ್ಟವಾಗಿ ಕಂಡಿತು. ಆದರೆ ತಾನು ಇಂಗ್ಲೀಷಲ್ಲಿ ಬರೆದುದನ್ನು ಕನ್ನಡಕ್ಕೆ ಭಾಷಾಂತರಿಸಿದಾಗ ಕೆಲವು ಸಂದರ್ಭಗಳಲ್ಲಿ ಲೇಖನದ ಉದ್ದೇಶ, ಶಕ್ತಿ ಮಾಯವಾಗಿ ಓದುಗರಲ್ಲಿ ಅಪಾರ್ಥ ವುಂಟುಮಾಡಿದ್ದನ್ನು ಕಂಡಾಗ ಭಾಷಾಂತರ ಕಾರ್ಯ ಮೂಲ ಲೇಖನದಷ್ಟೇ ತೊಡಕಿನದೆಂದು ಗೋಚರವಾಯಿತು. ಶ್ರಮ ವಹಿಸಿ ತಾನೇ ಕನ್ನಡದಲ್ಲಿ ಬರೆಯಲು ಪ್ರಾರಂಭಿಸಿದ. ಬರಬರುತ್ತಾ ಲೇಖನಗಳು ಯಶಸ್ವಿಯಾದವು. ಬರೆಯುವ ವಿಷಯಗಳಲ್ಲಿ ಅವನ ದೀರ್ಘಾನುಭವ, ಖಚಿತವಾಗಿ ವ್ಯಕ್ತವಾದ ಸ್ಪಷ್ಟಾಭಿಪ್ರಾಯಗಳು, ಪಕ್ಷಪಾತ ರಹಿತವಾದ ನಿರ್ಭೀಕ ನಿರೂಪಣೆ, ಇವುಗಳಿಗೆ "ವಿಶ್ವಮಿತ್ರ"ದ ಅಗ್ರ ಲೇಖನಗಳು ಹೆಸರಾಗಿ ದೇಶಾದ್ಯಂತ ಪತ್ರಿಕೆಯ ಪ್ರಚಾರ ಹೆಚ್ಚಿತು. ಲೇಖನದ ಕೈ ಬರಹದ ಪ್ರತಿಯನ್ನು ತಪ್ಪಿಲ್ಲದಂತೆ ತಯಾರಿಸುವುದೊಂದೇ ಈಗ ಜೋಷಿಗಿದ್ದ ಕಷ್ಟ. ಕಾರಣ ಕಛೇರಿಗೆ ಬಂದ ಕೂಡಲೆ "ಹರಟೆ" ಕಾಲಮನ್ನು ಸ್ಟೆನೋಗ್ರಾಫರಿಗೆ ಹೇಳಿ ಬರೆಸಿ ಆಮೇಲೆ ಸ್ವತಃ ಕನ್ನಡ ಅಗ್ರಲೇಖನ ಬರೆಯಲು ಕುಳಿತುಕೊಳ್ಳುತ್ತಿದ್ದ.

ಸ್ಟೆನೊಗ್ರಾಫರುಗಳ ವಿಚಾರದಲ್ಲಿಯೂ ಇದೇ ರೀತಿಯ ತೊಂದರೆ ಜೋಷಿಯ ಅನುಭವವಾಗಿತ್ತು. ಬೆಂಗಳೂರಲ್ಲಿ ದೊರಕುತ್ತಿದ್ದ ಮಹಿಳಾ "ಸ್ಟೆನೋ"ಗಳಿಗೆ ಸಾಕಾದಷ್ಟು ಆಂಗ್ಲ ಸಾಹಿತ್ಯ ಪರಿಚಯವಿರುತ್ತಿರಲಿಲ್ಲ. ಹೇಳಿದ ಪದದ ಅರ್ಥ ಮತ್ತು ಅಕ್ಷರ ಯೋಜನೆಯನ್ನು ತಿಳಿದುಕೊಳ್ಳಲು ಅವರು ದಿನಕ್ಕೆ ಅನೇಕ ಸಾರಿ ನಿಘಂಟಿನ ಆಶ್ರಯ ಪಡೆಯಬೇಕಾಗಿತ್ತು. ಎರಡು ಸಾರಿ ತಿದ್ದಿಕೊಟ್ಟ ಹೊರತಾಗಿ ಶುದ್ಧ ಪ್ರತಿ ಸಿದ್ಧವಾಗುತ್ತಿರಲಿಲ್ಲ. ಇದರಿಂದ "ಹರಟೆ" ಬರೆದು ಮುಗಿಸುವುದರಲ್ಲಿ ದಿನದ ಅರ್ಧಭಾಗ ಕಳೆದು ಹೋಗುತ್ತಿತ್ತು.

ಮಹಿಳಾ ಸ್ಟೆನೋಗ್ರಾಫರುಗಳಲ್ಲಿದ್ದ ಮತ್ತೊಂದು ದೋಷವೆಂದರೆ ಅವರು ಈ ವೃತ್ತಿಯನ್ನು ಅವಲಂಬಿಸುವ ಉದ್ದೇಶ ಜೀವನನಿರ್ವಾಹವಲ್ಲ,

ಪುರುಷರ ಮಧ್ಯೆ ವಿಲಾಸಿನಿಯರಂತೆ ಕಾಲಕಳೆಯುತ್ತಾ ವಿಲಾಸವಿಹಾರಗಳಿಗೆ ಬೇಕಾದ ಹಣಗಳಿಸುವುದು ಸರಿಯಾದ "ಪ್ರಿಯ"ನು ಸಿಕ್ಕಾಗ ಮದುವೆ ಯಾಗುವುದು ಮದುವೆಯಾದ ಮೇಲೂ ಕೆಲವರು ಈ ವೃತ್ತಿಯನ್ನೇ ಅನುಸರಿಸುತ್ತಿದ್ದರು ಕಛೇರಿಯ ಶಿಸ್ತು ವ್ಯವಸ್ಥೆಗಳಿಗೆ ಇದರಿಂದ ತೊಂದರೆಯಾಗುವುದೆಂದು ತಿಳಿದಿದ್ದರೂ ಜೋಷಿ ಯಜಮಾನನ ಅಪೇಕ್ಷೆ ಯಂತೆ, ಆಗತಾನೆ ಬೆಂಗಳೂರಿನ ವ್ಯಾಪಾರಿ ಸಂಸ್ಥೆಗಳಲ್ಲಿ ಪ್ರಚಾರಕ್ಕೆ ಬಂದಿದ್ದ ಸಂಪ್ರದಾಯಕ್ಕೆ ಅನುಸಾರವಾಗಿ ನಾಲ್ಕಾರು ಮಂದಿ ಮಹಿಳಾ ಸ್ಟೆನೋಗ್ರಾಫರುಗಳನ್ನು ನೇಮಿಸಿಕೊಂಡಿದ್ದ ಅವರಲ್ಲಿ ಇಬ್ಬರು ಮಲ ಬಾರಿಗಳು, ಉಳಿದವರು ಆಂಗ್ಲೋ ಇಂಡಿಯನ್ನರು ತನಗಾಗಿ ನೇಮಿಸಿ ಕೊಂಡಿದ್ದ ಇಬ್ಬರು ಮಹಿಳೆಯರೂ ಕೆಲಸಕ್ಕೆ ಸಹಾಯಕ್ಕಿಂತ ಅಡಚಣೆ ಯೆಂದು ತಿಳಿದು ಆಸ್ಥಾನದಲ್ಲಿ ಈಗ ಪುರುಷನೊಬ್ಬನನ್ನು ತೆಗೆದುಕೊಂಡಿದ್ದ. ಹರಟೆಯ ತುಂಡುಗಳನ್ನು ಸ್ಟೆನೋಗ್ರಾಫರಿಗೆ ಹೇಳಿ ಬರೆಯಿಸುತ್ತಿದ್ದಂತೆ ಅಟೆಂಡರ್ ವಿಸಿಟಿಂಗ್-ಕಾರ್ಡು ತಂದು ಕೊಟ್ಟ ಅದರ ಮೇಲೆ ದುಂಡಾದ ಅಕ್ಷರಗಳಲ್ಲಿ,

ಮಿಸ್ಟರ್ ಮತ್ತು ಮಿಸೆಸ್ ಮಂಗೇಶರಾವ್

ಎಂದು ಇಂಗ್ಲೀಷಲ್ಲಿ ಬರೆಯಲ್ಪಟ್ಟಿತ್ತು

ಮೈಸೂರಲ್ಲಿ ಅಂಬುಜಮ್ಮನ ಮನೆಯಲ್ಲಿ ಲಂತಾಂಗಿಯನ್ನು ನೋಡಿ ದುದನ್ನು ಜೋಷಿ ಮರೆತಿರಲಿಲ್ಲ ತನ್ನ ಪತಿ ಮಂಗೇಶರಾವ್ ನಗರದ ಸಾಬೂನು ಕಾರ್ಖಾನೆಯೊಂದರಲ್ಲಿ ಕೆಲಸ ಮಾಡುತ್ತಿರುವುದಾಗಿ ಅವಳು ತಿಳಿಸಿದ್ದುದರಿಂದ ಆಗಂತುಕರಾರೆಂಬುದನ್ನು ಅರಿತುಕೊಳ್ಳುವುದು ಜೋಷಿಗೆ ಕಷ್ಟವಾಗಲಿಲ್ಲ ಅವರನ್ನು ಕರೆತರುವಂತೆ ಅಟೆಂಡರಿಗೆ ತಿಳಿಸಿದ

ಸಂಪಾದಕ ಕಛೇರಿಯಲ್ಲಿ ದೊಡ್ಡ ಟೇಬಲಿನ ಹಿಂದೆ ಕುಳಿತಿದ್ದ ಜೋಷಿ ತಾನು ಮೈಸೂರಲ್ಲಿ ಕಂಡ ಜೋಷಿಯಿಂದ ಪ್ರತ್ಯೇಕವಾದ ವ್ಯಕ್ತಿಯೆಂಬು ದನ್ನು ಲತಾಂಗಿ ನೋಡುತ್ತಲೇ ತಿಳಿದುಕೊಂಡಳು ಯಾರ ಕಾಮು ಕತೆಯ ತೀವ್ರದೃಷ್ಟಿ ಆಗ ತನ್ನನ್ನು ವಿವಸ್ತ್ರಗೊಳಿಸಿದಂತೆ ಭಾವಿಸಿದ್ದಳೋ ಆ ದೃಷ್ಟಿ ಈಗ ಜೋಷಿಯಲ್ಲಿರಲಿಲ್ಲ ಅದರ ಸ್ಥಾನವನ್ನು ಒಂದು ಬಗೆಯ ಸರಳತೆಯ ಸಂಯಮ ಆಕ್ರಮಿಸಿಕೊಂಡಿತ್ತು

ಮಂಗೇಶನಿಗೆ ಕುಳಿತುಕೊಳ್ಳುವಂತೆ ಹೇಳಿ ಜೋಷಿ ಲತಾಂಗಿಯ ಕಡೆ ತಿರುಗಿ " ಅರ್ಜಿ ಬರೆದುಕೊಂಡು ಬಂದಿದ್ದೀರಾ ?" ಎಂದು ಕೇಳಿದ.

ಪದ್ಮಾ ಅರ್ಜಿಯನ್ನು ಸಿದ್ಧಗೊಳಿಸಿ ಕಾರ್ಖಾನೆಯಲ್ಲಿ ಟೈಪ್ ಮಾಡಿ ಕಳುಹಿಸಿದ್ದಳು ಲತಾಂಗಿ ಅದನ್ನು ತೆಗೆದು ಜೋಷಿಯ ಕೈಗೆ ಕೊಟ್ಟಳು.

ಜೋಷಿ ಓದಿ ಕೆಳಗಿಟ್ಟು " ನಿಮ್ಮನ್ನು ನೂರು ರೂಪಾಯಿ ಮಾಸಿಕ ವೇತನದ ಮೇಲೆ ಮಹಿಳೆಯರ ಮತ್ತು ಮಕ್ಕಳ ಪುಟಗಳಿಗೆ ಸಂಪಾದಕಿಯಾಗಿ ತೆಗೆದುಕೊಳ್ಳುತ್ತೇನೆ ಪ್ರತಿವಾರ ಪ್ರಕಟವಾಗುವ ಅನುಬಂಧದಲ್ಲಿ ನೀವು ಆ ವಿಭಾಗಗಳಿಗೆ ಲೇಖನಗಳನ್ನು ಬರೆಯಬೇಕು " ಎಂದು ಹೇಳಿ ಅಟೆಂಡರನ್ನು ಕರೆದು ಎರಡು ಕಾಫಿ ತರುವಂತೆ ತಿಳಿಸಿದ

ಕಛೇರಿಯ ಹಿಂಭಾಗದ ಮನೆಯಲ್ಲಿ ಕೆಲಸಗಾರರಿಗಾಗಿ ಕ್ಯಾಂಟೀನ್ ಇತ್ತು. ಅಟೆಂಡರ್ ಕಾಫಿ ತರುವುದರೊಳಗೆ ನೇಮಕದ ಆರ್ಡರಿನ ನಕಲು ಸಿದ್ಧವಾಯಿತು ಕಾಫಿಯನ್ನು ಅತಿಥಿಗಳಿಗೆ ಕೊಡಿಸಿ ನಕಲನ್ನು ಟೈಪ್ ಮಾಡಲು ಕಳುಹಿಸಿದ

" ಕಾಫಿ ತೆಗೆದುಕೊಳ್ಳಿ ಆರ್ಡರನ್ನೂ ಈಗಲೇ ಕೊಟ್ಟುಬಿಡುತ್ತೇನೆ." ಎಂದು ಹೇಳಿದ

" ನೀವು ತೆಗೆದುಕೊಳ್ಳುವುದಿಲ್ಲವೇ ?"

ಮಂಗೇಶ ಒತ್ತಾಯಪಡಿಸಿದ ಅವನ ಮಾತಿನೊಡನೆ ಲತಾ ತನ್ನ ದೃಷ್ಟಿಯನ್ನೂ ಸೇರಿಸಿದಳು

" ಈಗಲೆ ನಾನು ಎರಡು ಸಾರಿ ಕಾಫಿ ಕುಡಿದಿದ್ದೇನೆ ಪುನಃ ಬೇಡ. ಅಪೇಕ್ಷಿಸುವುದಾದರೆ ನೀವು ಇಂದಿನಿಂದಲೇ ಕೆಲಸಕ್ಕೆ ಪ್ರಾರಂಭಿಸ ಬಹುದು."

ಜೋಷಿ ಹೇಳಿದ್ದನ್ನು ಕೇಳಿ ಲತಾ ಪತಿಯ ಮುಖ ನೋಡಿದಳು. ಮಂಗೇಶ ಸ್ವಲ್ಪ ಹೊತ್ತು ಸುಮ್ಮನಿದ್ದು, " ಸೋಮವಾರದಿಂದ ಕೆಲಸಕ್ಕೆ ಹಾಜರಾಗಬಹುದು " ಎಂದು ಉತ್ತರ ಕೊಟ್ಟ

" ನಿಮ್ಮ ವಾಸವೆಲ್ಲಿ ?"

" ಮಲ್ಲೇಶ್ವರದಲ್ಲಿ, —ನೆ ಕ್ರಾಸ್ "

" ಮಲ್ಲೇಶ್ವರದಿಂದ ನೇರವಾಗಿ ಬರುವ ಬಸ್ಸಲ್ಲಿ ನೀವು ಪ್ರತಿದಿನ ಬಂದು

ಹೋಗಬಹುದು ಒಂದು ಪಾಸ್ ತೆಗೆದುಕೊಂಡರೆ ಅನುಕೂಲ "

ಅದೇ ರೀತಿ ಮಾಡುವುದಾಗಿ ಲತಾ ತಿಳಿಸಿದಳು ಅಷ್ಟರಲ್ಲಿ ಟೈಪಿಸ್ಟ್ ಆರ್ಡರನ್ನು ಸಿದ್ಧಮಾಡಿ ತಂದ ಜೋಷಿ ರುಜು ಮಾಡಿ ಲತಾಂಗಿಯ ಕೈಯಲ್ಲಿ ಕೊಟ್ಟು "ಸೋಮವಾರ ಕೆಲಸಕ್ಕೆ ಬನ್ನಿ ನಿಮಗೆ ಉಪಯುಕ್ತ ವಾಗುವ ಕೆಲವು ಪತ್ರಿಕೆಗಳನ್ನು ತರಿಸಿಡುತ್ತೇನೆ" ಎಂದು ಹೇಳಿದ

ಲತಾ ಆರ್ಡರ್ ತೆಗೆದುಕೊಂಡು ಜೋಷಿಗೆ ನಮಸ್ಕಾರ ಮಾಡಿ ಹೊರಗೆ ಬಂದಳು ಸಮೀಪದ ಸ್ಟ್ಯಾಂಡಿನಲ್ಲಿ ಬಸ್‌ಗಾಗಿ ಕಾದು ನಿಂತಿದ್ದಾಗ ಅವಳು ಗಂಡನಿಗೆ ಹೇಳಿದಳು

"ಬಾಯಿಗೆ ಬೀಗ ಹಾಕಿಕೊಂಡು ಗುಂಡು ಕಲ್ಲಿನಂತೆ ಕುಳಿತುಬಿಟ್ಟಿರಲ್ಲಾ! ಮಾತಾಡಿದರೆ ಮುತ್ತು ಸುರಿದುಹೋಗುತ್ತಿತ್ತೇ ?"

"ಕೆಲಸಕ್ಕೆ ಸೇರುವವಳು ನೀನು ನಾನೇನು ಮಾತಾಡುವುದಿದೆ ?"

"ಹಾಗಾದರೆ ಸಂಗಡೇಕೆ ಬಂದಿರಿ ?"

"ಬರುವ ಇಷ್ಟವಿರಲಿಲ್ಲ. ಪದ್ಮಳ ಒತ್ತಾಯದಿಂದ ಬಂದೆ."

"ನಾಳಿನಿಂದ ಪದ್ಮಾ ಹೇಳಿದಂತೆ ಮಾಡಿರಿ ಅವಳೇ ನಿಮ್ಮ ಒಡತಿ."

"ನೀನು ದೊಡ್ಡ ಪತ್ರಿಕೆಯೊಂದರ ಸಂಪಾದಕಿಯಾದ ಮೇಲೆ ನಾನು ಮತ್ತೊಬ್ಬ ಒಡತಿಯನ್ನು ಹುಡುಕಿಕೊಳ್ಳದೆ ಏನು ಮಾಡಲಿ ?"

ಲತಾ ವಿನೋದಕ್ಕಾಗಿ ಹೇಳಿದ ಮಾತನ್ನು ಮಂಗೇಶ ಯಥಾರ್ಥವೆಂದು ತಿಳಿದು ಗಂಭೀರವಾಗಿ ಉತ್ತರ ಕೊಟ್ಟ.

"ಹಾಗಾದರೆ ನಿಮ್ಮ ಇಷ್ಟ ನಾನು ಕೆಲಸಕ್ಕೆ ಹೋಗಬಾರದೆಂದೇ ?"

"ಹೋಗಬಾರದೆಂದು ನಾನು ಹೇಳುವುದಿಲ್ಲ ಪ್ರತಿ ದಿನ ಮನೆಯಿಂದ ಹೊರಗೆ, ಗಂಡಸರ ಮಧ್ಯೆ ನಾಲ್ಕು ಗಂಟೆಗಳನ್ನು ಕಳೆಯುವ ಹೆಂಗಸು ಒಂದು ಮನೆಯಲ್ಲಿ ಒಬ್ಬನ ಹೆಂಡತಿಯಾಗಿ ಸಂಸಾರ ಮಾಡುವುದು ಹೇಗೆ ಸಾಧ್ಯ ?"

"ಹಾಗಾದರೆ ನಾನು ಗಂಡಂದಿರನ್ನು ಹುಡುಕುವುದಕ್ಕಾಗಿ ಕೆಲಸಕ್ಕೆ ಸೇರವೆನೆಂದು ಭಾವಿಸುತ್ತೀರಾ ?"

"ನನ್ನ ಭಾವನೆಯೇನೇ ಇರಲಿ, ಜನರು ಹಾಗೆ ಹೇಳುವುದು ಖಂಡಿತ"

"ನೀವು ಕಛೇರಿಯಲ್ಲಿ ಕುಳಿತು ಈ ಮಾತುಗಳನ್ನು ಯೋಚಿಸಿದಂತೆ

ಕಾಣುತ್ತದೆ ನಿಮ್ಮ ಅಭಿಪ್ರಾಯವೇನು ? ನಿಮ್ಮ ತಾಯಿಯ ಕೈ ಬೊಂಬೆ ಯಾಗಿ ಕಂಡ ಕಂಡವರ ಸಹವಾಸ ಮಾಡಬೇಕೆಂದೇ ?"

ಮಾತು ದೂರ ಹೋಯಿತೆಂದು ಭಾವಿಸಿ ಮಂಗೇಶ ಮಾರುತ್ತರ ಕೊಡಲಿಲ್ಲ ಅಷ್ಟರಲ್ಲಿ ಮಲ್ಲೇಶ್ವರದ ಬಸ್ ಬಂದದ್ದರಿಂದ ಇಬ್ಬರೂ ಅದರಲ್ಲಿ ಕುಳಿತರು

—೪—

ಲತಾಂಗಿ ಹೋದ ಮೇಲೆ ಜೋಷಿ ಸ್ವಲ್ಪ ಕಾಲ ಯೋಚಿಸುತ್ತ ಸುಮ್ಮನೆ ಕುಳಿತಿದ್ದ ಬಳಿಕ ಅಂದಿನ ಅಗ್ರ ಲೇಖನ ಬರೆಯಲು ಲೇಖನಿ ಕೈಗೆ ತೆಗೆದುಕೊಂಡ

ಆದರೆ ಬರವಣಿಗೆ ಸಾಗಲಿಲ್ಲ ಒಂದು ವಾರ ಕಳೆದ ಮೇಲೆ ಪುನಃ ಲತಾಂಗಿಯನ್ನು ನೋಡಿ ಅವನ ಮನಸ್ಸು ವಿಚಲಿತವಾಗಿತ್ತು

ರಾಜಕೀಯ—ಪತ್ರಿಕೋದ್ಯಮಗಳಂತೆ ಪ್ರೇಮ ವ್ಯವಹಾರದಲ್ಲಿಯೂ ಜೋಷಿ ನುರುಗಿದ ಕೈ ಪತ್ರಿಕಾ ಪ್ರತಿನಿಧಿಯಾಗಿ ಭಾರತಾದ್ಯಂತ ಪರ್ಯಟನ ಮಾಡಿ ಕರಾಚಿಯಿಂದ ಕಲ್ಕತ್ತೆ, ಹಿಮಾಲದಿಂದ ಕನ್ಯಾಕುಮಾರಿಯವರೆಗಿನ ಎಲ್ಲ ಪ್ರಾಂತಗಳ ಪರಿಚಯ ಮಾಡಿಕೊಂಡಿದ್ದ ಉನ್ನತ ಮಟ್ಟದ ರಾಜಕೀಯ ದಿಂದ ವೇಶ್ಯಾಜೀವನದವರೆಗೆ ಸಮಾಜವನ್ನು ಆವರಿಸಿದ್ದ ಅಧರ್ಮ, ಸ್ವಾರ್ಥ, ಆತ್ಮವಂಚನೆ, ಕಾಪಟ್ಯಗಳು ಅವನಿಗೆ, ಪ್ರತ್ಯಕ್ಷ ಅನುಭವವಾಗಿದ್ದವು. ದೇಶ ಭಕ್ತಿ ರಾಷ್ಟ್ರೀಯತೆಗಳ ಮರೆಯಲ್ಲಿ ಜನರು ಸ್ವಾರ್ಥ ಸಾಧನೆಯ ವಾಣಿಜ್ಯ ನಡೆಸುವಂತೆ ಗೌರವಸ್ಥ ಮಹಿಳೆಯರು ಸ್ವಾತಂತ್ರ್ಯ ಸಂಸ್ಕೃತಿಗಳ ಮರೆಯಲ್ಲಿ ವೇಶ್ಯಾಜೀವನ ನಡೆಸುವುದನ್ನು ಅವನು ಎಲ್ಲ ದೊಡ್ಡ ನಗರ ಗಳಲ್ಲಿಯೂ ನೋಡಿದ್ದ

ಆದರೆ ತನ್ನ ಪರಿಚಯದ ಸ್ತ್ರೀಯರಲ್ಲಿ ಲತಾಂಗಿ ಅನೇಕ ವಿಷಯ ಗಳಲ್ಲಿ ಅದ್ವಿತೀಯೆ ಎಂದು ಅವನಿಗೆ ತೋರಿತು ತುಲಸಿಯ ಪೂರ್ವೋತ್ತರ ಅಂಬುಜಮ್ಮನಿಂದ ಅವನಿಗೆ ತಿಳಿದಿತ್ತು ಅವಳ ಸಂಬಂಧಿಯಾದ ಲತಾಂಗಿ

ಮದುವೆಯಾಗಿದ್ದರೂ ವಂಶ ಪಾರಂಪರ್ಯವಾಗಿ ನಡೆದು ಬಂದು ರಕ್ತಗತ ವಾಗಿದ್ದ ಕುಲವೃತ್ತಿಯ ಆಕರ್ಷಣೆಯಿಂದ ದೂರವಾಗಿದ್ದಳೆಂಬುದನ್ನು ಅವನು ಊಹಿಸಿ ತಿಳಿದಿದ್ದನು ಅಂಬುಜಮ್ಮನ ಮನೆಯಲ್ಲಿ ಲತಾಂಗಿಯ ನಮ್ರ ಸಂಯುತ ವರ್ತನೆ, ತನ್ನ ಹಿಡಿತದಿಂದ ಪಾರಾಗಲು ಅವಳು ತೋರಿಸಿದ ಚತುರತೆ, ಹಣದ ವಿಚಾರದಲ್ಲಿ ಅವಳ ಅನಾಸಕ್ತಿ, ಕುಲಟೆಯ ಸುಲಭ ಮಾರ್ಗವನ್ನು ಬಿಟ್ಟು ದುಡಿತದಿಂದ ಹಣ ಸಂಪಾದಿಸಲು ಅವಳು ಮಾಡುತ್ತಿರುವ ಪ್ರಯತ್ನ, ಇವು ಅವಳ ಬಗೆಗೆ ಗೌರವ ಹುಟ್ಟಿಸಿದ್ದವು ಇಂತಹ ಜಾತಿ ಹೆಣ್ಣನ್ನು ಒಂದು ದಿನದ ವಿಲಾಸ ಭೋಗಕ್ಕಾಗಿ ಬಲಿ ಕೊಡುವುದು ಅಧರ್ಮ, ಧೂರ್ತತೆ, ದಾನವೀತ್ವದ ಪರಮಾವಧಿಯೆಂದು ಜೋಷಿ ಭಾವಿಸಿದನು ಲತಾಂಗಿ ಗೌರವದಿಂದ ಎಲ್ಲರಂತೆ ಜೀವನ ನಡೆಸಲು ತನ್ನಿಂದಾದ ಸಹಾಯವನ್ನು ಮಾಡಬೇಕೆಂದು ನಿರ್ಧರಿಸಿಕೊಂಡನು. ಅಟೆಂಡರ್ ತಂದು ಕೊಟ್ಟ ಕಾರ್ಡನ್ನು ನೋಡಿದಾಗ ಪೂರ್ವ ನಿರ್ಧಾರಿತವಾದ ಈ ಭಾವನೆಗಳು ಮನಸ್ಸಿನಲ್ಲಿ ಜಾಗರಿತವಾಗಿ ಅವನ ಮುಖ ಮುದ್ರೆ ಗಂಭೀರ ವಾಯಿತು ಲತಾಂಗಿ ಕಛೇರಿಯಲ್ಲಿ ಕಂಡದ್ದು ಈ ಪರಿವರ್ತಿತ ಜೋಷಿಯನ್ನು

ಮನೆಯ ಎರಡನೆಯ ಅಂತಸ್ತಿನಲ್ಲಿ ಸಂಪಾದಕೀಯ ಕಛೇರಿಯಿತ್ತೆಂದು ಹೇಳಿತ್ತಷ್ಟೇ ಈ ಅಂತಸ್ತಿನಲ್ಲಿ ಒಂದು ದೊಡ್ಡ ಹಾಲ್, ಪಾರ್ಶ್ವದಲ್ಲಿ ನಾಲ್ಕು ಕೊಟಡಿಗಳು, ವರಾಂಡಾ, ಬಿಸಿಲು ಮುಚ್ಚು ಇದ್ದುವು. ಕೊಟಡಿಗಳಲ್ಲಿ ಒಂದು ಜೋಷಿಯ ಕಛೇರಿ ಅದರ ಒಂದು ಪಕ್ಕದಲ್ಲಿ ಅವನ ಗುಮಾಸ್ತೆ ಮತ್ತು ಟೈಪಿಸ್ಟರ ಕೊಟಡಿ ಇನ್ನೊಂದು ಪಾರ್ಶ್ವದ ಕೊಟಡಿ ಬಂದವರೊಡನೆ ಕುಳಿತು ಮಾತಾಡುವ ದಿವಾನ್ ಖಾನೆಯಾಗಿ ಸಜ್ಜು ಗೊಳಿಸಲ್ಪಟ್ಟಿತ್ತು ನಾಲ್ಕನೆಯ ಕೊಟಡಿ ಖಾಲಿ ಹಾಲಲ್ಲಿ ಮಧ್ಯೆ ಉಪ ಸಂಪಾದಕ ಅಥವಾ ನ್ಯೂಸ್ ಎಡಿಟರ ಸ್ಥಾನ ಇನ್ನೊಂದು ಪಾರ್ಶ್ವ ದಲ್ಲಿ ಟೆಲಿಪ್ರಿಂಟರ್, ವಿವಿಧ ದಿನ ಪತ್ರಿಕೆಗಳ ಕಟ್ಟುಗಳು ತುಂಬಿದ ನಾಲ್ಕಾರು ಷೆಲ್ಫ್‌ಗಳು ಅಂದಿನ ಅಗ್ರಲೇಖನವನ್ನು ಬರೆದು ಮುಗಿಸಿದ ಕೂಡಲೆ ಜೋಷಿ ಗುಮಾಸ್ತನನ್ನು ಕರೆಸಿ ದಿವಾನ್ ಖಾನೆಯನ್ನು ಕೊನೆಯ ಕೊಟಡಿಗೆ ಸಾಗಿಸಿ ಅದರ ಸ್ಥಳದಲ್ಲಿ ಮಹಿಳಾ ಸಂಪಾದಕಿಯ ಮೇಜು ಹಾಕಿಸುವಂತೆ

ಹೇಳಿದ

ಸೋಮವಾರ ಲತಾಂಗಿ ಕಛೇರಿಗೆ ಬರುವಷ್ಟರಲ್ಲಿ ಅವಳ ಸ್ಥಾನ ಸಿದ್ಧವಾಗಿತ್ತು. ಸ್ವಯಂ ಜೋಷಿ ಸಂಪಾದಕ ವರ್ಗಕ್ಕೆ ಅವಳ ಪರಿಚಯ ಮಾಡಿಕೊಟ್ಟ ಅನಂತರ ತನ್ನ ಮೇಜಿನ ಮುಂದೆ ಕುಳ್ಳಿರಿಸಿಕೊಂಡು ಹೇಳಿದ.

"ಪತ್ರಿಕೆಗಳು ರಾಜ್ಯಾಂಗದ ನಾಲ್ಕನೆಯ ಆಧಾರಸ್ತಂಭ ರಾಜಕೀಯ ಪಾರಿಭಾಷೆಯಲ್ಲಿ Fourth Estate ಎಂದು ಅದನ್ನು ಕರೆಯುತ್ತಾರೆ. ಪತ್ರಿಕಾವೃತ್ತಿ ಆಡಳಿತದಷ್ಟೇ ಜವಾಬ್ದಾರಿಯುತವಾದದ್ದು ಪತ್ರಿಕೆಗಳು ಜನತಾ ಹೃದಯದ ಪ್ರತಿಬಿಂಬಗಳು ಜನತೆಯ ಅಭಿಪ್ರಾಯಗಳನ್ನು ರೂಪುಗೊಳಿಸುವ ಹಿರಿಯ ಜವಾಬ್ದಾರಿ ಪತ್ರಿಕೆಗಳಿಗೆ ಸೇರುತ್ತದೆ ನೀನು ಬರೆಯುವುದನ್ನು ೧೦ ಸಾವಿರ ಮಂದಿ ಓದುವರೆಂಬುದನ್ನು ಮರೆಯಬೇಡ"

ಎಂದು ಹೇಳಿ ಬಳಿಕ ಪತ್ರಿಕೆಯ ಕಟ್ಟೊಂದನ್ನು ಕೊಟ್ಟು "ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ಲೇಖನಗಳನ್ನು ಪ್ರಕಟಿಸುವ ಪತ್ರಿಕೆಗಳು ಇದರಲ್ಲಿವೆ ನೀನು ಈ ದಿನ ಇವುಗಳನ್ನು ಸಾವಧಾನದಿಂದ ಓದಿ "ವಿಶ್ವಮಿತ್ರ"ದ ಮಹಿಳಾ ಮತ್ತು ಮಕ್ಕಳ ಪುಟಗಳು ಯಾವ ರೂಪದಲ್ಲಿರಬೇಕೆಂಬುದನ್ನು ಯೋಚಿಸು ನಾಳೆ ಪುನಃ ಮಾತಾಡೋಣ" ಎಂದನು

ಲತಾಂಗಿಯ ಪತ್ರಿಕಾ ವೃತ್ತಿ ಈ ರೀತಿ ಜೋಷಿಯ ಕೃಪಾಶ್ರಯ ಶುಭಾಶಯಗಳಿಂದ ಪ್ರಾರಂಭವಾಯಿತು

— ೫ —

ಎರಡು ದಿನಗಳು ಕಳೆದವು ಜೋಷಿಯ ಸಂಗಡ ಪುನಃ ಮಾತಾಡುವ ಅವಕಾಶ ಲತಾಂಗಿಗೆ ದೊರಕಲಿಲ್ಲ ಮೂರನೆಯ ದಿನ ತಾನೇ ಅವನ ಕಛೇರಿಗೆ ಹೋಗಿ ಉಪ ಸಂಪಾದಕರ ಸಂಗಡ ಕುಳಿತು ಕೆಲಸ ಮಾಡಲು ಅನುಮತಿ ಕೊಡಬೇಕಾಗಿ ಕೇಳಿದಳು

"ಏಕೆ ಪ್ರತ್ಯೇಕ ಕೊಟಡಿ ನಿನಗಿಷ್ಟವಿಲ್ಲವೇ ?"

"ಇಲ್ಲದೆ ಉಂಟ ? ಆದರೆ ಎಲ್ಲರ ಸಂಗಡ ಕುಳಿತು ಕೆಲಸ ಕಲಿಯ

ಬೇಕೆಂಬುದು ನನ್ನ ಆಸೆ"

"ಕನ್ನಡ ದಿನ ಪತ್ರಿಕಾ ಕಛೇರಿಯಲ್ಲಿ ಉಪ ಸಂಪಾದಕರ ಕೆಲಸ ಟೆಲಿಪ್ರಿಂಟರ್‌ನಲ್ಲಿ ಬರುವ ವಾರ್ತೆಗಳನ್ನು ಸಂಗ್ರಹಿಸಿ ಕನ್ನಡಕ್ಕೆ ಭಾಷಾಂತರಿಸುವುದು ಮತ್ತು ಸ್ಥಳೀಯ ಬಾತ್ಮೀದಾರರು ಕಳುಹಿಸುವ ಸುದ್ದಿಗಳನ್ನು ತಿದ್ದಿ ಬರೆಯುವುದು ಎರಡನೆಯದು ನಿನ್ನಿಂದಾಗುವುದಿಲ್ಲ ಅದಕ್ಕೆ ಸ್ಥಳೀಯ ವಿದ್ಯಮಾನ ರಾಜಕೀಯಗಳ ಪರಿಚಯವಿರುವುದು ಅಗತ್ಯ ಸುಲಭವಾದ ತುಂಡು ಸುದ್ದಿಗಳನ್ನು ಭಾಷಾಂತರಿಸಲು ಕೊಡುವಂತೆ ಹೇಳುತ್ತೇನೆ"

ಜೋಷಿ ಅದರಂತೆ ನ್ಯೂಸ್ ಎಡಿಟರಿಗೆ ಸೂಚನೆ ಕೊಟ್ಟ ನಾಲ್ಕನೆಯ ದಿನದಿಂದ ಲತಾಂಗಿ ಉಪ ಸಂಪಾದಕರ ಸಂಗಡ ಕುಳಿತು ಕೆಲಸ ಮಾಡಲು ಪ್ರಾರಂಭಿಸಿದಳು.

ನ್ಯೂಸ್ ಎಡಿಟರ್ ಆನಂದರಾಯ ನಗರದ ಅನೇಕ ದಿನ ಪತ್ರಿಕೆಗಳಲ್ಲಿ ಕೆಲಸ ಮಾಡಿ ಅನುಭವ ಪಡೆದ ಹಿರಿಯ ಪತ್ರಿಕೋದ್ಯೋಗಿ ಜೋಷಿ ಗ್ರೈರ್ ಹಾಜರಿಯಲ್ಲಿ ಅಗ್ರ ಲೇಖನಗಳನ್ನು ಬರೆಯುತ್ತಿದ್ದ ಇಂಗ್ಲಿಷ್ ಪತ್ರಿಕೆಯೊಂದರ ಪ್ರತಿನಿಧಿಯಾಗಿ, ಜೋಷಿ ಹಿಂದೊಂದು ಸಾರಿ ಬೆಂಗಳೂರಿಗೆ ಬಂದಿದ್ದಾಗ ಆನಂದ ರಾಯನ ಪರಿಚಯವಾಗಿತ್ತು "ವಿಶ್ವಮಿತ್ರ" ಪ್ರಾರಂಭ ಮಾಡಿದಾಗ ಜೋಷಿ ಹಿಂದಿನ ಪರಿಚಯ ನೆನಪಿಗೆ ತಂದುಕೊಂಡು ಆನಂದರಾಯನನ್ನು ಕರೆಸಿ ಆಗ ಅವನಿಗೆ ಬರುತ್ತಿದ್ದುದಕ್ಕಿಂತ ಎರಡರಷ್ಟು ಸಂಬಳದ ಮೇಲೆ ನ್ಯೂಸ್ ಎಡಿಟರಾಗಿ ಮಾಡಿದ್ದ ಈ ಉಪಕಾರಕ್ಕೆ ಪ್ರತೀಕಾರವಾಗಿ ಆರು ತಿಂಗಳು ತುಂಬುವುದರಲ್ಲಿ ಆನಂದರಾಯ ರಹಸ್ಯವಾಗಿ ಜೋಷಿಯ ವಿರುದ್ಧ ಪ್ರಚಾರಕ್ಕೆ ಪ್ರಾರಂಭಿಸಿದ "ಎಲ್ಲ ಕೆಲಸ ನಾವು ಮಾಡುತ್ತಿರುವಾಗ ಸಾವಿರ ರೂಪಾಯಿನ ಈ ಬಿಳಿ ಆನೆಯೇಕೆ ?" ಎಂದು ಅವನು ಉಪ ಸಂಪಾದಕನೊಬ್ಬನ ಸಂಗಡ ಹೇಳಿದ್ದು ಜೋಷಿಯ ಕಿವಿಗೂ ಬಿದ್ದಿತ್ತು ಲತಾಂಗಿ ಮಹಿಳಾ ಪುಟದ ಸಂಪಾದಕಿಯಾಗಿ ನೇಮಕವಾದ ಮೇಲೆ ಅವನ ಸಂತಾಪ ಸಾವಿರ ಮಡಿಯಾಗಿ ಬಿಸಿ ನೀರು ಹಾಕಿದ ಸುಣ್ಣ ಕಲ್ಲಿನಂತೆ ಪಕಪಕ ಕುದಿಯತೊಡಗಿತು "ನನ್ನನ್ನೊಂದುಮಾತು ಕೇಳಬೇಡವೆ? ರೂಪಕ್ಕೆ ಮರುಳಾಗಿ ಕೆಲಸ ಕೊಟ್ಟಿದ್ದಾರೆ" ಎಂದು ಭಾವಿಸಿ ಸಮಯ ಕಾಯುತ್ತಿದ್ದ. ಲತಾಂಗಿ ಭಾಷಾಂತರಿಸಿದ ತುಂಡು ಸುದ್ದಿಗಳು ಅವನ

ಪರಿಶೀಲನೆಗೆ ಬಂದಾಗ ಮುಖ ತಿರುಗಿಸಿ, ಹುಬ್ಬು ಗಂಟು ಹಾಕಿ, ಸುದ್ದಿಯ ಇಂಗ್ಲಿಷ್ ಮೂಲ ತರಿಸಿಕೊಂಡು ಓದಿ, ಧ್ಯಾನಮಗ್ನವಾದ ಬಕಪಕ್ಷಿಯಂತೆ ಒಂದೆರಡು ಕ್ಷಣಗಳು ಕಣ್ಣು ಮುಚ್ಚಿಕೊಂಡಿದ್ದು ಬಳಿಕ ಬೇರೊಬ್ಬ ಉಪ ಸಂಪಾದಕನನ್ನು ಕರೆಸಿ ಪುನರ್ಭಾಷಾಂತರಿಸಲು ಕೊಟ್ಟ ಈ ಮೂಕಾಭಿನಯ ಮೊದಲ ಸಾರಿ ನಡೆದಾಗ ಲತಾಂಗಿ ಕುಗ್ಗಿದಳು ಎರಡನೆಯ ಸಾರಿ ಆಸಕ್ತಿಯಿಂದ ನೋಡುತ್ತಿದ್ದಳು ಮೂರನೆಯ ಸಾರಿ ಗಟ್ಟಿಯಾಗಿ ನಕ್ಕುಬಿಟ್ಟಳು

ಉಪ ಸಂಪಾದಕ ವರ್ಗದಲ್ಲಿ ಶ್ರೀನಾಥ ಮಾತ್ರ ಲತಾಂಗಿಯೊಡನೆ ಸಹಾನುಭೂತಿಯಿಂದ ವರ್ತಿಸುತ್ತಿದ್ದ ಹಠಾತ್ತಾಗಿ ಕಛೇರಿಯಲ್ಲಿ ನಗುವಿನ ಲಹರಿ ಚಿನ್ನದ ಗೆಜ್ಜೆ ಧ್ವನಿಯಂತೆ ಕಲಕಲ ನುಡಿಯುವುದನ್ನು ಕೇಳಿ ಶ್ರೀನಾಥ ತಲೆಯೆತ್ತಿ ನೋಡಿದ ಮೇಜಿನ ಸುತ್ತ ಕುಳಿತಿದ್ದ ಇತರ ಉಪ ಸಂಪಾದಕರೂ ಆಶ್ಚರ್ಯದಿಂದ ಲತಾಂಗಿಯ ಕಡೆ ತಿರುಗಿದರು ಎಲ್ಲರ ಮುಖದಲ್ಲಿಯೂ ಅಸ್ಫುಟವಾದ ಕಿರುನಗೆ

ಆ ದಿನ ಮಧ್ಯಾಹ್ನ ದಿವಾನ್ ಖಾನೆಯಲ್ಲಿ ಕಾಫಿ ಕುಡಿಯುತ್ತ ಕುಳಿತಿದ್ದಾಗ ಶ್ರೀನಾಥ ಕೇಳಿದ

" ನಿಮ್ಮ ನಗು ಆನಂದರಾಯರ ಕಿವಿಗಳಿಗೆ ಫಿರಂಗಿ ಹೊಡೆದಂತೆ ಕೇಳಿರಬೇಕು ಲತಾದೇವಿ "

" ನನ್ನ ನಗು ಅವರಿಗೆ ಕರ್ಣ ಶೂಲೆಯಾದರೆ ಕಿವಿಗೆ ಹತ್ತಿ ಇಟ್ಟುಕೊಂಡು ಬರಲಿ "

" ನೀವು ಆ ಮುಂಗುಸಿಯ ವಿಚಾರದಲ್ಲಿ ಎಚ್ಚರವಾಗಿದ್ದರೆ ಉತ್ತಮ. ನಾನು ಕೆಲಸಕ್ಕೆ ಸೇರಿದಾಗ ಮಂಗಳಂ ಎಂದೊಬ್ಬ ಟೈಪಿಸ್ ಇದ್ದಳು ಅವಳು ಆಫೀಸಿಗೆ ಜಾರ್ಜೆಟ್ ಸೀರೆ ಉಟ್ಟುಕೊಂಡು ಬರುತ್ತಿದ್ದಳೆಂಬ ಕಾರಣದಿಂದ ಟರ್ಮಿನೇಷನ್ ನೋಟೀಸ್ ಕೊಡಿಸಿದ ಆಸಾಮಿ ಈತ ಇಂತಹವರ ವಿಚಾರದಲ್ಲಿ ಎಚ್ಚರವಾಗಿದ್ದರೆ ಒಳ್ಳೇದು "

ಲತಾ ಸ್ವಲ್ಪ ಹೊತ್ತು ಮಾತಾಡಲಿಲ್ಲ. ಆ ಮೇಲೆ " ಮಕ್ಕಳ ಪುಟದ ಲೇಖನ ಬರೆದಿದ್ದೇನೆ ಅದನ್ನೇನು ಮಾಡುವುದು ?" ಎಂದು ಕೇಳಿದಳು.

" ಅದನ್ನು ನ್ಯೂಸ್ ಎಡಿಟರಿಗೆ ಒಪ್ಪಿಗೆಗೆ ಕಳುಹಿಸ ಬೇಡಿ. ನಾನೊಂದು ಸಾರಿ ತಿದ್ದಿ ಕೊಡುತ್ತೇನೆ ನೀವೇ ಸಂಪಾದಕರ ಕೈಗೆ ಕೊಟ್ಟು ಬನ್ನಿ."

ಮಕ್ಕಳಿಗಾಗಿ ಏನು ಬರೆಯುವುದು ಎಂದು ಲತಾ ಮೂರು ನಾಲ್ಕು ದಿನಗಳು ಯೋಚನೆ ಮಾಡಿದಳು ದೇಶ ಭಾಷೆಗಳ ಶಿಶು ಸಾಹಿತ್ಯದಲ್ಲಿ ಪ್ರಕಟ ವಾಗುತ್ತಿದ್ದ ಪುರಾಣ ಪುಣ್ಯ ಕತೆಗಳ ತರಳಾವತರಣಗಳು, ಕಟ್ಟುಬಿಚ್ಚಿದ ಕಲ್ಪಿತ ಕತೆಗಳು ಅವಳಿಗೆ ಬೇಸರವನ್ನುಂಟುಮಾಡಿದ್ದವು ಇಪ್ಪತ್ತನೆಯ ಶತಮಾನದ ಮಧ್ಯದಲ್ಲಿಯೂ ಮಕ್ಕಳು ಇದನ್ನೇಕೆ ಓದಬೇಕು ? ಬರೆಯಲು ಹೊಸ ವಿಷಯಗಳಿಲ್ಲವೇ ? ಕೊನೆಗೆ ಹೊಸ ಮಾದರಿಯ ಮೂರು ಸಣ್ಣ ಲೇಖನಗಳನ್ನು ಬರೆದಳು ಮೊದಲನೆಯದು "ಮಕ್ಕಳೂ ಹೂವುಗಳೂ" ಎಂದು ಮಕ್ಕಳ ಜೀವನದ ಮೇಲೆ ಆಟದ ವಸ್ತುಗಳು ಪರಿಣಾಮಕಾರಿಯಾಗು ವಂತೆ ಹೂವುಗಳೂ ಪರಿಣಾಮಕಾರಿಯಾಗ ಬಹುದು ಮಕ್ಕಳ ಸಂಸ್ಕೃತಿ ಕಲೆಯುಹಾದಿಯಲ್ಲಿ ಬೆಳೆಯಲು ಆಟದ ವಸ್ತುಗಳಿಗಿಂತ ಹೂವುಗಳು ಅವಶ್ಯಕ ಮಕ್ಕಳ ಬಾಳನ್ನು ಪುಷ್ಪಮಯವಾಗಿ ಮಾಡಿ—ಎಂಬುದು ಲೇಖನದ ಸಾರಾಂಶ ಎರಡನೆಯ ಲೇಖನ ಬೃಂದಾವನದ ಪ್ರಕೃತಿ ದೃಶ್ಯಗಳ ಸರಳ ವಿವರಣೆ ಮೂರನೆಯದು ಪಂಚತಂತ್ರದ ಕತೆಯೊಂದರ ವಿಕೃತ ಹಾಸ್ಯಾವತರಣ ಶ್ರೀನಾಥ ಅವುಗಳನ್ನೋದಿ ಮೆಚ್ಚಿದ ಕೆಲವು ಸಣ್ಣ ತಪ್ಪುಗಳನ್ನು ತಿದ್ದಿದ

ಮರುದಿನ ಲತಾಂಗಿ ಜೋಷಿಯನ್ನು ನೋಡಿ ಲೇಖನಗಳನ್ನು ಕೊಟ್ಟಳು ಜೋಷಿ ಅವಳನ್ನು ಕುಳಿತುಕೊಳ್ಳುವಂತೆ ಹೇಳಿ ಮೂರನ್ನೂ ಓದಿದ ಬೃಂದಾವನದ ವರ್ಣನೆಯನ್ನು ಓದಿದಾಗ ಕ್ಷಣಕಾಲ ಅವನ ಮುಖದಲ್ಲಿ ಮಿದುನಗೆ ಮೂಡಿತು ಕಣ್ಣುಗಳು ಲತಾಂಗಿಯ ಕಡೆ ತಿರುಗಿದವು ಓದಿ ಮುಗಿಸಿ ಹೇಳಿದ.

"ನನ್ನ ನಿರೀಕ್ಷಣೆಗಿಂತ ಚನ್ನಾಗಿ ಬರೆದಿದ್ದಿ ಲತಾ ಪತ್ರಿಕೋದ್ಯಮಕ್ಕೆ ಬೇಕಾದ ಪ್ರತಿಭೆ ನಿನ್ನಲ್ಲಿದೆಯೆಂದು ನಾನು ಭಾವಿಸಿದ್ದು ನಿಜವಾಯಿತು. ಪ್ರತಿವಾರ ಒಂದೊಂದು ಪಂಚತಂತ್ರದ ಕತೆ ಕೊಡುತ್ತಿರು ಅದಕ್ಕೆ ಚಿತ್ರಗಳನ್ನೂ ಬರೆಯಿಸುತ್ತೇನೆ"

ಲತಾ ಹೋಗುವದಕ್ಕೆ ಎದ್ದಳು

"ನಿನ್ನ ಭಾಷಾಂತರದ ಕೆಲಸ ಹೇಗೆ ನಡೆಯುತ್ತಿದೆ ?"

ಎಂದು ಜೋಷಿ ಕೇಳಿದ

" ಏ ಪಿ. ಐ. ತುಂಡು ಸುದ್ದಿಗಳನ್ನು ಭಾಷಾಂತರಿಸುತ್ತೇನೆ ನ್ಯೂಸ್ ಎಡಿಟರ್ ಸರಿಯಾಗಿಲ್ಲವೆಂದು ಅವುಗಳನ್ನು ಪುನಃ ಬೇರೆಯವರಿಗೆ ಭಾಷಾಂತರಕ್ಕೆ ಕೊಡುತ್ತಾರೆ "

ಜೋಷಿ ಸ್ವಲ್ಪ ಹೊತ್ತು ಯೋಚಿಸಿ ಹೇಳಿದ

" ಸ್ವತಂತ್ರವಾಗಿ ಬರೆಯುವ ಶಕ್ತಿಯಿರುವಾಗ ಭಾಷಾಂತರದ ಗೋಳು ನಿನಗೆ ಬೇಡ ನಾಳಿನಿಂದ ಸ್ಥಳೀಯ ಸುದ್ದಿಗಳ ಸಂಪಾದಕನಿಗೆ ಸಹಾಯಕಳಾಗಿರು ಈಗ ಆ ವಾರ್ತೆಗಳು ಉದ್ದುದ್ದವಾಗಿ ಪ್ರಕಟವಾಗುತ್ತಿವೆ. ಸಂಗ್ರಹಿಸಿ ಪುನಃ ಬರೆಯುವುದು ಅಗತ್ಯ ಮತ್ತೊಂದು ವಿಚಾರ ನಿನ್ನ ಬರವಣಿಗೆ ಮುದ್ದಾಗಿದೆ ನನಗೆ ಕನ್ನಡ ಬರೆಯುವುದೆಂದರೆ ತೊಡಕು ಪ್ರತಿ ದಿನದ ಅಗ್ರಲೇಖನ ಡಿಕ್ಟೇಟ್ ಮಾಡುತ್ತೇನೆ ನೀನು ಬರೆಯಬಹುದು "

ಲತಾಂಗಿಯ ಪತ್ರಿಕಾವೃತ್ತಿ ಅಂದಿನಿಂದ ಅವಳೇ ಆಗಾಗ ಹೇಳುತ್ತಿದ್ದಂತೆ " ಇಂಟರೆಸ್ಟಿಂಗ್ " ಅಂದರೆ ಮನೋರಂಜಕವಾಗಿ ಸಾಗಲು ಪ್ರಾರಂಭವಾಯಿತು ಶ್ರೀನಾಥ ಸ್ಥಳೀಯ ಸುದ್ದಿಗಳ ಸಂಪಾದಕನಾಗಿದ್ದ ಪ್ರಾತಃಕಾಲ ೧೦ ಗಂಟೆಗೆ ಕಛೇರಿಗೆ ಬರುತ್ತಲೆ ಅಂಚೆಯಲ್ಲಿ ಬಂದ ಸುದ್ದಿಗಳಲ್ಲಿ ತೊಡಕಾದ್ದನ್ನು ತಾನಿಟ್ಟುಕೊಂಡು ಉಳಿದುದನ್ನು ಲತಾಂಗಿಗೆ ಕೊಡುವನು ಲತಾಂಗಿ ಅವುಗಳನ್ನು ಓದಿ ಸಂಗ್ರಹವಾಗಿ ಬರೆಯುವಳು ಅವಳು ಬರೆದುದನ್ನು ಶ್ರೀನಾಥ ಪರಿಶೀಲಿಸಿ ಕಳುಹಿಸುತ್ತಿದ್ದುದರಿಂದ ಆನಂದರಾಯ ನಿರಾಕರಿಸುವಂತಿರಲಿಲ್ಲ.

ಒಂದೊಂದು ದಿನ ಜೋಷಿ ಲತಾಂಗಿಯನ್ನು ಕರೆಸಿಕೊಂಡು ಅಗ್ರಲೇಖನ ಹೇಳಿ ಬರೆಯಿಸುವನು ರಾಜಕೀಯ ಪತ್ರಿಕೋದ್ಯಮಗಳನ್ನು ಕುರಿತು ಸ್ವಾರಸ್ಯವಾಗಿ ಮಾತಾಡುವನು ಮಕ್ಕಳ ಪುಟಕ್ಕೆ ಉಪಯುಕ್ತವಾಗುವ ಸೂಚನೆಗಳನ್ನು ಕೊಡುವನು ಅವನ ಆಳವಾದ ಅನುಭವ, ರಾಜಕೀಯದಲ್ಲಿ ಅವನ ಸೂಕ್ಷ್ಮ ದೃಷ್ಟಿ ಇವು ಲತಾಂಗಿಯನ್ನು ಅಚ್ಚರಿಗೊಳಿಸಿದವು ಈ ಸಂದರ್ಭಗಳಲ್ಲಿ ವೈಯಕ್ತಿಕವಾಗಿ ಯಾವ ಮಾತೂ ನಡೆಯುತ್ತಿರಲಿಲ್ಲ

ಈ ರೀತಿ ನಾಲ್ಕೈದು ತಿಂಗಳುಗಳು ಕಳೆದವು ವಿಶ್ವಮಿತ್ರ ಕಛೇರಿಯಲ್ಲಿ ಲತಾಂಗಿ ಎಲ್ಲರ ಪರಿಚಯದ ಸಾಮಾನ್ಯ ವ್ಯಕ್ತಿಯಾದಳು. ಮೊದಲು ಅವಳ

ವಿಚಾರದಲ್ಲಿ ದುರಭಿಪ್ರಾಯವನ್ನುಂಟಾಗಿದ್ದ ಆನಂದರಾಯನೂ ಈಗ ದಾರಿಗೆ ಬಂದಿದ್ದ ಮಕ್ಕಳ ಮತ್ತು ಮಹಿಳಾ ಪುಟಗಳು ಪ್ರಾರಂಭವಾದ ಮೇಲೆ ಪತ್ರಿಕೆಯ ಪ್ರಚಾರ ಹೆಚ್ಚುತ್ತಾ ಬರುತ್ತಿರುವುದನ್ನು ಕಂಡು ಅವನಿಗೆ ಸಂತೋಷವಾಗಿತ್ತು ಲತಾಂಗಿ ಊಟ ಮುಗಿಸಿಕೊಂಡು ಹನ್ನೊಂದು ಗಂಟೆಯ ಬಸ್ಸಲ್ಲಿ ಕಛೇರಿಗೆ ಬರುವಳು ಜೋಷಿ ಮತ್ತು ಶ್ರೀನಾಥರ ಹೊರತಾಗಿ ಉಳಿದವರ ಸಂಗಡ ಹೆಚ್ಚು ಮಾತಾಡುತ್ತಿರಲಿಲ್ಲ

ಸುಂದರಮ್ಮ ಮತ್ತು ಲಕ್ಷ್ಮಿ ಎರಡು ವಾರಗಳ ನಂತರ ತಮ್ಮ ಮನೆಗೆ ಹೊರಟುಹೋದರು ಪದ್ಮಳ ಸಹಾಯದಿಂದ ಕೆಲಸದವಳು ಸಿಕ್ಕಿದ್ದರಿಂದ ಲತಾಂಗಿಗೆ ಅವರು ಹೋದದ್ದರಿಂದ ಕಷ್ಟವೇನೂ ಆಗಲಿಲ್ಲ ಪ್ರತಿದಿನ ಒಂದು ಸಾರಿಯಾದರೂ ಪದ್ಮಾ ಮನೆಗೆ ಬರುವಳು ಇಬ್ಬರೂ ಮಾತಾಡುತ್ತ ಹೊತ್ತು ಕಳಯುವರು

ಹಿಂದೆ ಮನೆಗೆ ೫೦ ರೂಪಾಯಿ ಕೊಡಲಾರದವನಾಗಿದ್ದ ಮಂಗೇಶ ಕೂಡಾ ಈಗ ಧಾರಾಳವಾಗಿ ಹಣ ಕರ್ಚು ಮಾಡುವನು ಒಂದು ದಿನ ಅವನು ಲತಾಂಗಿಯ ವೇತನವನ್ನು ಅವಳೇ ಇಟ್ಟುಕೊಂಡು ಬೇಕಾದ ವಸ್ತುಗಳನ್ನು ಕೊಂಡುಕೊಳ್ಳುವಂತೆ ಹೇಳಿದಾಗ ಲತಾ ಒಪ್ಪಲಿಲ್ಲ ೭೫ ರೂಪಾಯಿಗಳನ್ನು ಗಂಡನ ಕೈಗೆ ಕೊಟ್ಟು ಉಳಿದುದನ್ನು ತನ್ನ ಕರ್ಚಿಗಿಟ್ಟುಕೊಂಡಳು

ಈ ರೀತಿ ಕೆಲವು ತಿಂಗಳುಗಳು ಕಳೆದವು ಅನಂತರ ಜೋಷಿ, ಲತಾಂಗಿ, ಮಂಗೇಶ, ಸುಂದರಮ್ಮ ಇವರ ಜೀವನದ ಮೇಲೆ ಪರಿಣಾಮಕಾರಕ ವಾದ ಘಟನೆಗಳು ಒಂದೊಂದಾಗಿ ನಡೆಯಲು ಮೊದಲಾಯಿತು

# ಐದನೆಯ ತರಂಗ

— ೧ —

ಒಂದು ಶನಿವಾರದ ದಿನ ಪ್ರಾತಃಕಾಲ ಲತಾಂಗಿ ಕಛೇರಿಗೆ ಬಂದು ಕುಳಿತು ಕೊಂಡಕೂಡಲೆ " ಎಡಿಟರ್ ನಿಮ್ಮನ್ನು ಕರೆಯುತ್ತಾರೆ" ಎಂದು ಆಳು ತಿಳಿಸಿದ ಆ ದಿನ ಎರಡು ಗಂಟೆಗೆ ಕಛೇರಿ ಮುಗಿಯುವುದರಿಂದ ಪೇಟೆಗೆ ಹೋಗಿ ತನಗೆ ಬೇಕಾದ ಕೆಲವು ಬಟ್ಟೆ ಮತ್ತು ಟಾಯಲೆಟ್ ಸಾಮಾನು ಗಳನ್ನು ತೆಗೆದುಕೊಂಡು ಹೋಗಬೇಕೆಂದು ಲತಾ ಎಂದಿನಂತೆ ಮಿಲ್ ಸೀರೆ ಯನ್ನುಡದೆ ಗುಲಾಬಿ ಬಣ್ಣದ ಹೊಸ ಮಾದರಿ ಜಾರ್ಜೆಟ್ ಸೀರೆಯನ್ನುಟ್ಟು ಬಂದಿದ್ದಳು

ಎದ್ದು ನೆರಗನ್ನು ಸರಿಪಡಿಸಿಕೊಂಡು ಸಂಪಾದಕ ಕಛೇರಿಗೆ ಹೋದಳು. ಜೋಷಿ ಅವಳನ್ನು ಹಸನ್ಮುಖನಾಗಿ ಸ್ವಾಗತಿಸಿ ಕುಳಿತುಕೊಳ್ಳುವಂತೆ ಹೇಳಿ ಕೆಲವು ಕಾಗದಗಳನ್ನು ಮುಂದೆ ಹಾಕಿ ಹೇಳಿದ

" ಮಕ್ಕಳ ಮತ್ತು ಮಹಿಳಾ ಪುಟಗಳನ್ನು ಪ್ರಾರಂಭ ಮಾಡಿದ ಮೇಲೆ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿ ಅನೇಕರು ಪತ್ರ ಬರೆದಿದ್ದಾರೆ ಅವುಗಳನ್ನು ತೋರಿಸಲು ಹೇಳಿ ಕಳುಹಿಸಿದೆ "

ಲತಾ ಒಂದೆರಡು ಕಾಗದಗಳನ್ನು ಓದಿದಳು ಮಕ್ಕಳಿಗಾಗಿ ಬರೆಯು ತ್ತಿರುವ ಲೇಖನಗಳು ಚನ್ನಾಗಿವೆಯೆಂದೂ, ಭಾನುವಾರದ ಪತ್ರಿಕೆಗಳನ್ನು ಹೆಚ್ಚಾಗಿ ಕಳುಹಿಸಬೇಕೆಂದೂ ಅನೇಕ ಮಂದಿ ಏಜೆಂಟರು ಬರೆದಿದ್ದರು. ಓದುಗರಲ್ಲಿ ಕೆಲವರು ಮಹಿಳಾ ಪುಟಹನ್ನು ಶ್ಲಾಘಿಸಿ ಸಂಪಾದಕಿಯ ಪರಿಚಯ ಮಾಡಿಕೊಳ್ಳಲು ಅಪೇಕ್ಷಿಸಿದ್ದರು ಅವರಲ್ಲಿ ಹೆಚ್ಚು ಮಂದಿ ಗಂಡಸರೆಂದು ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ

ಲತಾ ಕಾಗದಗಳನ್ನು ಹಿಂದಿರುಗಿ ಕೊಟ್ಟು " ಈ ಪ್ರಶಂಸೆ ನನಗೆ ಸಲ್ಲತಕ್ಕದಲ್ಲ ಅನುಭವವಿಲ್ಲದ ನನ್ನನ್ನು ಪ್ರೇರೇಪಿಸಿ ಬರೆಯುವಂತೆ

ಮಾಡಿದವರು ನೀವೇ" ಎಂದಳು

"ಇತರ ದಿನಗಳಿಗಿಂತ ಈಗ ಭಾನುವಾರದ ಪ್ರತಿ ಒಂದೂವರೆಯಷ್ಟು ಹೆಚ್ಚಿಗೆ ಕರ್ಚಾಗುತ್ತಿದೆ ಏಜೆಂಟರು ಇನ್ನೂ ಹೆಚ್ಚು ಪ್ರತಿ ಬೇಕೆಂದು ಬರೆಯುತ್ತಿದ್ದಾರೆ ಅದಕ್ಕೆ ನಾನೊಂದು ಯೋಚನೆ ಮಾಡಿದ್ದೇನೆ."

ಲತಾ ಉತ್ತರ ಕೊಡದೆ ಉತ್ಸುಕತೆಯಿಂದ ಜೋಷಿಯ ಮುಖ ನೋಡುತ್ತಿದ್ದಳು ಜೋಷಿ ಮಾತು ಮುಂದುವರೆಸಿದ,

"ಮದ್ರಾಸಿಂದ ಪತ್ರಿಕೆಯ ಮಾಲೀಕರು ಬಂದಿದ್ದಾರೆ ಮಧ್ಯಾಹ್ನ ೧ ಗಂಟೆಗೆ ಕಛೇರಿಗೆ ಬರುತ್ತಾರೆ ಮಹಿಳೆಯರು ಮತ್ತು ಮಕ್ಕಳಿಗಾಗಿಯೇ ವಾರಪತ್ರಿಕೆಯೊಂದನ್ನು ಹೊಸದಾಗಿ ಪ್ರಾರಂಭಿಸುವಂತೆ ನಾನು ಅವರಿಗೆ ಸೂಚಿಸುತ್ತೇನೆ ಅವರು ಬರುವುದರೊಳಗಾಗಿ ಪತ್ರಿಕೆಗೆ ಒಂದು ಒಳ್ಳೇ ಹೆಸರು ಯೋಚಿಸಿದ್ದರೆ ಉತ್ತಮ"

ಲತಾ ಸ್ವಲ್ಪಹೊತ್ತು ಸುಮ್ಮನಿದ್ದು "ಹೆಸರಿಗೇನು ಕಷ್ಟ ಮಹಿಳಾಸಖೀ ಎಂದರೆ ಚೆನ್ನಾಗಿರುವುದಿಲ್ಲವೇ ?" ಎಂದಳು

"ಚೆನ್ನಾಗಿದೆ, ಆದರೆ ಉದ್ದ ಎರಡು ಮೂರು ಅಕ್ಷರಗಳಲ್ಲಿ ಮುಗಿದರೆ ಮಾರುವವರಿಗೆ ಸುಲಭ"

ಲತಾ ಯೋಚಿಸಿ ಹೇಳಿದಳು—"ಲಲನಾ, ಲಾವಣ್ಯ, ಸೋದರಿ, ಬಾಲಮಿತ್ರ, ಬಾಲಸಖೀ"

"ಇವೆಲ್ಲಕ್ಕಿಂತ ನೀನು ಮೊದಲು ಹೇಳಿದ್ದು ಚೆನ್ನಾಗಿದೆ ಮಹಿಳಾಸಖೀ ಅಥವಾ ಬರೀ "**ಸಖೀ**" **ಮಕ್ಕಳ ಮತ್ತು ಮಹಿಳೆಯರ ವಾರ ಪತ್ರಿಕೆ** ಎಂದರೆ ಪ್ರಕಟನೆಗೂ ಅನುಕೂಲ"

ಲತಾಗೂ ಹಾಗೆಯೇ ತೋರಿತು ಮಂದಹಾಸದಿಂದ ಸಮ್ಮತಿ ಸೂಚಿಸಿದಳು

"ಹೆಸರಿಟ್ಟಮಾತ್ರಕ್ಕೆ ನಿನ್ನ ಜವಾಬ್ದಾರಿ ಕಳೆಯುವುದಿಲ್ಲ, ಲತಾ. ನೀನು ಅದರ ಸಂಪಾದಕಿಯಾಗಬೇಕು"

ಜೋಷಿಯ ಮಾತಲ್ಲಿ ಹಾಸ್ಯದ ಸೂಚನೆಯಿರಲಿಲ್ಲ ಗಂಭೀರ ವಾಗಿಯೇ ಅವನು ಹೇಳಿದ

"ನನ್ನಿಂದ ಅದು ಸಾಧ್ಯವೇ ?"—ಲತಾ ಉತ್ತರ ಕೊಟ್ಟಳು.

"ಏಕೆ ಸಾಧ್ಯವಿಲ್ಲ ? ಇಲ್ಲಿಗೆ ಬಂದಾಗ ಬರೆಯಬಲ್ಲೆನೆಂಬ ವಿಶ್ವಾಸವೂ ನಿನ್ನಲ್ಲಿರಲಿಲ್ಲ ಈ ನಾಲ್ಕಾರು ತಿಂಗಳಲ್ಲಿ ಆ ಶಕ್ತಿಯನ್ನು ಸಂಪಾದಿಸಿ ಕೊಂಡಿರುವೆ ಅದರ ವಿಕಾಸಕ್ಕೆ ವಾರ ಪತ್ರಿಕೆ ಸರಿಯಾದ ಸಾಧನ"

ಎಂದು ಹೇಳಿ ಜೋಷಿ ಲತಾಂಗಿಯನ್ನು ದಿಟ್ಟಿಸಿ ನೋಡಿದ ನಾಲ್ಕು ತಿಂಗಳ ಮೇಲೆ ಮೊದಲ ಸಾರಿ ಅವನ ನೋಟ ಕಾಮದ ತೀವ್ರತೆಯಿಂದ ಚಮುಕಿತವಾದಂತೆ ಅವಳಿಗೆ ಭಾಸವಾಯಿತು ಆ ದೃಷ್ಟಿಯು ಪಾರದರ್ಶಕತೆ ಲಾಲಸೆಯ ಚುಂಬನದಿಂದ ಅಂಗಾಂಗಳನ್ನು ಸ್ಪರ್ಶಿಸಿದಂತೆ ಭಾವಿಸಿದಳು ಅವಳ ನೋಟ ಲಜ್ಜೆಯಿಂದ ಕೆಳಗಿಳಿಯಿತು

ಇತರರಾರಾದರೂ ತನ್ನನ್ನು ಆ ರೀತಿ ನೋಡಿದ್ದರೆ ಲತಾ ಸಿಡಿದೇಳು ತ್ತಿದ್ದಳು ಆದರೆ ಜೋಷಿಯ ದೃಷ್ಟಿ ಕಾಮದಿಂದ ಕಳಂಕಿತವಾಗಿದ್ದರೂ ಸೌಂದರ್ಯಾರಾಧನೆಯ ಸರಳತೆಯಿಂದ ಕೂಡಿ ಲತಾಂಗಿಗೆ ಅಪ್ರಿಯವಾಗಿ ಕಾಣಲಿಲ್ಲ ಬೃಂದಾವನದಲ್ಲಿ ನಡೆದ ಘಟನೆಗಳು ಅವಳ ಮನಸ್ಸಿನ ಮೇಲೆ ಒಂದು ಬಗೆಯ ವಿಚಿತ್ರ ಪರಿಣಾಮವನ್ನುಂಟುಮಾಡಿದ್ದವು ನೂತನ ಪರಿಚಿತ ನಾದರೂ ಜೋಷಿ ತನಗೆ ಅನ್ಯನಲ್ಲವೆಂದು ಅವಳು ಭಾವಿಸಿದಳು ತನ್ನ ಸಾಕು ತಂದೆ ವಿಠಲರಾಯರಿಗೂ ಜೋಷಿಗೂ ಇದ್ದ ವಯಸ್ಸು ಮತ್ತು ರೂಪದ ಹೋಲಿಕೆ ಇದಕ್ಕೆ ಸಹಾಯಕವಾಯಿತು ನಿರೀಕ್ಷಿಸಿದ್ದನ್ನು ಪಡೆದು ಅವಳ ಸುಪ್ತ ಚೈತನ್ಯ ತೃಪ್ತಿ ಹೊಂದಿತು

"ನಾಲ್ಕು ತಿಂಗಳಿಂದ ನಿನ್ನನ್ನು ಮರೆಯಲು ಪ್ರಯತ್ನಿಸಿ ವಿಫಲನಾದೆ ಲತಾ ಮರೆಯಾಗಿದ್ದ ನನ್ನ ಆಸೆ ಇಂದು ಪುನಃ ಎಚ್ಚೆತ್ತಿದೆ ತರುಣರಿಗೆ ಸಹಜವಾದ ಆತುರ ಕಾಮನೆಗಳಿಂದ ನಿನ್ನನ್ನು ಅಪೇಕ್ಷಿಸುತ್ತಿದ್ದೇನೆ."

ಎಂದು ಹೇಳಿದ ಲತಾ ಉತ್ತರ ಕೊಡಲಿಲ್ಲ ಸ್ತಬ್ಧಳಂತೆ ಸುಮ್ಮನೆ ಕುಳಿತಿದ್ದಳು ಸ್ವಲ್ಪಹೊತ್ತು ಕಳೆದ ಮೇಲೆ ಜೋಷಿ ಪುನಃ ಹೇಳಿದ.

"ನಿನ್ನ ಕೆಲಸಕ್ಕೂ ಇದಕ್ಕೂ ಸಂಬಂಧವಿದೆಯೆಂದು ಭಾವಿಸಬೇಡ, ಲತಾ ಕೆಲಸ ಕೊಟ್ಟದ್ದಕ್ಕೆ ಪ್ರತಿಯಾಗಿ ನಿನ್ನಿಂದ ನಾನೇನನ್ನೂ ಅಪೇಕ್ಷಿಸು ತ್ತಿಲ್ಲ ನನ್ನನ್ನೊಲಿಸಲು ನೀನೇನೂ ಮಾಡಬೇಕಾಗಿಲ್ಲ ನಿನ್ನ ಸ್ನೇಹಕ್ಕಾಗಿ ನಾನು ಹಾರೈಸುತ್ತಿದ್ದರೆ ಅದು ನನ್ನ ವೈಯಕ್ತಿಕ ಆಸೆ. ಬೇಡಿಕೆಯ ಹೊರತು ಒತ್ತಾಯವಲ್ಲ."

ಲತಾ ತಲೆಯೆತ್ತಿ ಜೋಷಿಯ ಮುಖ ನೋಡಿದಳು ಒಂದು ಅಪೂರ್ವ ಶಾಂತಿ, ಸಂಯಮ, ಪ್ರೇಮ ಅವನ ಮುಖದಲ್ಲಿ ಮೂಡುತ್ತಿರುವುದನ್ನು ಕಂಡಳು ಉದ್ವೇಗ ರಹಿತವಾದ ಸರಳ ಕಂಠದಿಂದ "ನಿಮ್ಮ ವಿಶಾಲ ಹೃದಯವನ್ನು ತಿಳಿದೇ ನಾನು ನಿಮ್ಮ ಹತ್ತಿರ ಕೆಲಸಕ್ಕೆ ಸೇರಿದೆ" ಎಂದಳು

ಸ್ವಲ್ಪಹೊತ್ತು ಇಬ್ಬರೂ ಮಾತಾಡಲಿಲ್ಲ ಬಳಿಕ ಜೋಷಿ ಪ್ರಶ್ನಿಸಿದ,

"ಬೆಂಗಳೂರಲ್ಲಿ ನಿನ್ನ ಸಮೀಪದ ಬಂಧುಗಳು ಯಾರಾದರೂ ಇದ್ದಾರೆಯೆ ?"

ಲತಾ ತಲೆಯಾಡಿಸಿದಳು

"ನನ್ನನ್ನು ನಿನ್ನ ಆತ್ಮೀಯನಂತೆ ಭಾವಿಸು ನಿನಗೇನಾದರೂ ತೊಂದರೆಯಾದರೆ, ಸಹಾಯ ಬೇಕಾದರೆ ಸಂಕೋಚವಿಲ್ಲದೆ ನನಗೆ ತಿಳಿಸು ಈಗ ನನಗೊಂದೇ ಚಿಂತೆ"

"ನಿಮ್ಮ ಚಿಂತೆಯನ್ನು ನಾನು ಕಳೆಯಬಲ್ಲೆನೇ ?"

"ಕಳೆಯಲಾರೆ, ಲತಾ ಅದು ಕಾಲದ ಅತಿಕ್ರಮದಿಂದ ಆದ ಲೋಪ ನಾನು ವಯಸ್ಸಿನಲ್ಲಿ ಹತ್ತುವರ್ಷ ಚಿಕ್ಕವನಾಗಿ ಎರಡು ವರ್ಷಗಳ ಹಿಂದೆ ನಿನ್ನನ್ನು ನೋಡಿದ್ದರೆ ನಮ್ಮ ಕತೆಯೇ ಬೇರೆಯಾಗುತ್ತಿತ್ತು"

ಜೋಷಿಯ ಅಭಿಪ್ರಾಯ ಲತಾಗೆ ಅರಿವಾಯಿತು ಅವಳು ಅದಕ್ಕೆ ಉತ್ತರ ಕೊಡಲಿಲ್ಲವಾದರೂ ಆ ಕೊಟಡಿಯ ಅದೃಶ್ಯ ವಾತಾವರಣದಲ್ಲಿ ಎರಡು ಅದೃಶ್ಯ ಚೈತನ್ಯಗಳು ದೈಹಿಕವಾದ ರೂಪವಯೋಧರ್ಮಗಳನ್ನು ಮರೆತು, ಅಪಾರ್ಥಿವ ಪ್ರೇಮದ ಅಗುರ ಆನಂದದಲ್ಲಿ ಸಮ್ಮಿಳಿತವಾದವೆಂದು ಅವಳು ಅರಿತಳು

ಅಭ್ಯಾಗತನೊಬ್ಬನ ಬರವನ್ನು ತಿಳಿಸಲು ಆಳು ಒಳಗೆ ಬಂದಾಗ ಅವರ ಭಾವ ಸಮಾಧಿ ಭಂಗವಾಯಿತು

— ೨ —

ಲತಾಂಗಿ ಚಿಗರಿಯಂತೆ ನೆಗೆಯುತ್ತಾ ಉಪ ಸಂಪಾದಕರ ಕಛೇರಿಗೆ ಬಂದಳು. ಜೋಷಿಯ ಪ್ರೇಮಾಲಾಪದಿಂದ ಅವಳ ಮನಸ್ಸು ಹಗುರವಾಗಿತ್ತು. ದೀರ್ಘಕಾಲ ಹುಡುಕಿದ ಮೇಲೆ ಕಷ್ಟ ಸುಖಗಳಲ್ಲಿ ನೆರವು ಕೊಡುವ ಜೀವದ ಗೆಳೆಯನೊಬ್ಬನು ಸಿಕ್ಕಿದುದಾಗಿ ಅವಳು ಭಾವಿಸಿದಳು.

ಅಷ್ಟರಲ್ಲಿ ಪತ್ರಿಕೆಯ ಪ್ರೊಪ್ರೈಟರ್ ಮಧ್ಯಾಹ್ನ ಕಛೇರಿಗೆ ಬರುವ ಸುದ್ದಿ ಎಲ್ಲ ಕಡೆಗೂ ಹರಡಿತ್ತು. ಅಚ್ಚುಕೂಟದಲ್ಲಿ ಮೊಳೆ ಜೋಡಿಸುವವರು, ಯಂತ್ರ ನಡೆಸುವವರು ಅವಸರದಿಂದ ಕೆಲಸ ಮಾಡಲು ಪ್ರಾರಂಭಿಸಿದ್ದರು. ವ್ಯವಸ್ಥಾಪಕ ಕಛೇರಿಯ ಗುಮಾಸ್ತರು, ನೌಕರರು ಮೇಜು ಕುರ್ಚಿಗಳನ್ನು ಸರಿಪಡಿಸಿಕೊಂಡು ಉಳಿದಿದ್ದ ಕಾಗದ ಪತ್ರಗಳ ವಿಲೇವಾರಿಗೆ ತೊಡಗಿದರು. ಟೈಪಿಸ್ಟ್ ಮಹಿಳೆಯರೊಡನೆ ಗುಮಾಸ್ತರ ಚಕ್ಕಂದ ನಿಂತು ಚಟಪಟ ಶಬ್ಧಕ್ಕಾರಂಭವಾಯಿತು.

ಕಛೇರಿಯ ಒಂದೊಂದು ಶಾಖೆಗೂ ಒಂದೊಂದು ಟೆಲಿಫೋನ್. ಅವುಗಳನ್ನು ಸಾರ್ವಜನಿಕ ಟೆಲಿಫೋನಿನೊಡನೆ ಸಂಬಂಧಿಸಲು ಒಂದು ಸಣ್ಣ ಖಾಸಗಿ ಎಕ್ಸ್‌ಚೇಂಜ್. ಅದನ್ನು ನಡೆಸಲು ನಿಯುಕ್ತಳಾಗಿದ್ದ ಆಂಗ್ಲೋ ಇಂಡಿಯನ್ ಯುವತಿ ಸಿಗರೇಟ್ ಆರಿಸಿ ಓದುತ್ತಿದ್ದ ಪತ್ತೇದಾರಿ ಕತೆಯನ್ನು ಮುಚ್ಚಿಟ್ಟು ಕೇಳಿದ ನಂಬರುಗಳನ್ನು ಬೇಗ ಬೇಗ ಕೊಡಲು ಮೊದಲು ಮಾಡಿದಳು.

ಎರಡನೆ ಅಂತಸ್ಥಿನ ಸಂಪಾದಕ ಕಛೇರಿಯಲ್ಲಿಯೂ ಇದೇ ಶಿಸ್ತು, ಸಂಭ್ರಮ! ಗಂಟೆಗೆರಡುಸಾರಿ ಹೊರಗೆ ಎದ್ದು ಹೋಗುತ್ತಿದ್ದ ಉಪ ಸಂಪಾದಕ ವರ್ಗದವರು ಚಿತ್ರದ ಬೊಂಬೆಗಳಂತೆ ಕುಳಿತು ಟೆಲಿಪ್ರಿಂಟರಿಂದ ಹರಿದ ಕಾಗದದ ತುಂಡುಗಳನ್ನು ತದೇಕ ಚಿತ್ತದಿಂದ ಪರಿಶೋಧಿಸುತ್ತಿದ್ದರು. ಕಾಗದದ ಮೇಲೆ ಲೇಖನಿಯ ಹೆಜ್ಜೆ ಸದ್ದು ಕೇಳುವಂತಹ ಮೌನ!

ಇದನ್ನು ನೋಡಿ ಲತಾ ಕಿಲಕಿಲನೆ ನಕ್ಕು ಶ್ರೀನಾಥನನ್ನು ಕೇಳಿದಳು.

"ಇವರೇಕೆ ಹೀಗೆ ಕುಳಿತಿದ್ದಾರೆ? ಮಾಲಿಕ ಬಂದರೇನಾಯಿತು! ಅವನೇನು ಯಮದೂತನೇ?"

"ಅದಕ್ಕಿಂತ ಒಂದು ಕೈ ಮೇಲು" ಶ್ರೀನಾಥ ಮೆಲ್ಲನೆ ಹೇಳಿದ— "ಯಮದೂತ ಮಾನವನಿಗೆ ಮುಕ್ತಿ ಕೊಡುತ್ತಾನೆ ಒಂದು ಸಾರಿ ಸತ್ತ ಮೇಲೆ ಪುನಃ ಸಾಯುವುದಿಲ್ಲ ಇಲ್ಲಿಯ ಸ್ಥಿತಿ ಹಾಗಲ್ಲ ಕ್ಷಣಕ್ಷಣದಲ್ಲೂ ಗಂಡ ಒಂದುಸಾರಿ ಮಾಲಿಕ ಬಂದು ಹೋದರೆ ಯಾರ ಕೆಲಸ ಉಳಿಯುತ್ತದೆ, ಯಾರ ಕೆಲಸ ಹೋಗುತ್ತದೆ ಎಂಬ ನಂಬಿಕೆಯೇ ಇಲ್ಲ !"

"ಹಾಗೆಲ್ಲಾ ಮಾಡಿದರೆ ಜೋಷಿ ಸುಮ್ಮನಿರುವರೆ ?"

"ಸಂಪಾದಕ ವರ್ಗದ ಹೊರತಾಗಿ ಬೇರೆ ಆಡಳಿತಕ್ಕೆ ಅವರು ಪ್ರವೇಶಿಸುವುದಿಲ್ಲ ವ್ಯವಸ್ಥಾಪಕ ವಿಭಾಗದ ಅಧಿಕಾರಿಗಳು ಅಲ್ಪ ಕಾರಣಗಳಿಗಾಗಿ ಜನರನ್ನು ಹೊರಗೆ ಕಳುಹಿಸುತ್ತಿದ್ದಾರೆ ಇಲ್ಲಿಯ ಕೆಲಸವೆಂದರೆ ನೀರ ಗುಳ್ಳೆಯಂತೆ ಅಸ್ಥಿರ ಮಾಲಿಕರು ಬಂದರೆ ಯಾರನ್ನಾದರೂ ಬಲಿ ತೆಗೆದುಕೊಳ್ಳದೆ ಹೋಗುವುದೇ ಇಲ್ಲ ಅದಕ್ಕಾಗಿಯೇ ನಾನು ಅವರಿಗೆ "ನರಭಕ್ಷಕ ಸಿಂಹ" ಎಂತ ಹೆಸರಿಟ್ಟಿದ್ದೇನೆ"

ಶ್ರೀನಾಥನ ಮಾತು ಆನಂದರಾಯನಿಗೆ ಕೇಳುತ್ತಿರಲಿಲ್ಲ ತುಟಿ ಆಡಿಸುವುದು ಮಾತ್ರ ಕಾಣಿಸುತ್ತಿತ್ತು ಅಷ್ಟಕ್ಕೇ ಅವನು ಹುಬ್ಬುಗಳನ್ನೇರಿಸಿ ಶ್ರೀನಾಥನ ಕಡೆಗೆ ಕುದೃಷ್ಟಿ ಬೀರಿದ

"ಮುದಿ ಹದ್ದು ನಮ್ಮನ್ನೇ ನೋಡುತ್ತಿದೆ" ಎಂದು ಹೇಳಿ ಶ್ರೀನಾಥ ಬರೆಯಲು ತೊಡಗಿದ.

ರಾಮದಯಾಲ್ ಸಿಂಹನಿಗೆ ೫೦ ವರ್ಷ ವಯಸ್ಸು ದ್ವಿತೀಯ ಮಹಾ ಯುದ್ಧದ ಅನಂತರ ವಾಣಿಜ್ಯ ಕೈಗಾರಿಕೋದ್ಯಮಗಳಲ್ಲಿ ಪರಿಶ್ರಮಿಸಿ ೫೦–೭೦ ಲಕ್ಷ ರೂಪಾಯಿಗಳನ್ನು ದುಡಿದಿದ್ದ ನಾಲ್ಕಾರು ಹತ್ತಿ ಗಿರಣಿಗಳೂ, ಒರಿಸ್ಸಾದಲ್ಲಿ ಕೆಲವು ಕಲ್ಲಿದ್ದಲ ಗಣಿಗಳೂ ಅವನಿಗೆ ಸೇರಿದ್ದವು ಭಾರಿ ಭಾರಿ ಮಿಲಟರಿ ಕಂಟ್ರಾಕ್ಟುಗಳನ್ನೂ ಮಾಡುತ್ತಿದ್ದ.

ಪತ್ರಿಕೆಗಳನ್ನು ನಡೆಸುವುದೆಂದರೆ ಅವನಿಗೊಂದು ಗೀಲು, ಹಾಗೂ ರಕ್ಷಣೋಪಾಯ ಕೇಂದ್ರ ಪ್ರಾಂತೀಯ ಶಾಸನ ಸಭೆಗಳ ಚುನಾವಣೆಗೆ ನಿಂತಾಗ, ಮಂತ್ರಿಗಳು, ಆದಾಯ ತೆರಿಗೆ ಮತ್ತು ಸೈನ್ಯ ಶಾಖೆಯ ಅಧಿಕಾರಿಗಳು ಮುಂತಾದವರ ಸಂಗಡ ವ್ಯವಹರಿಸುವಾಗ, ಪತ್ರಿಕೆಗಳ ಒಡೆತನ ಸಹಾಯಕ ಮತ್ತು ರಕ್ಷಣೆಯ ಸಾಧನವೆಂದು ಅವನಿಗೆ ತಿಳಿದಿತ್ತು ಅದಕ್ಕಾಗಿ

ಅವನು ಬೊಂಬಾಯ್, ಕಲ್ಕತ್ತ, ಮದ್ರಾಸ್ ನಗರಗಳಲ್ಲಿ ಒಂದೊಂದು ದೈನಿಕ ಪತ್ರಿಕೆಗಳನ್ನು ನಡೆಸುತ್ತಿದ್ದ "ವಿಶ್ವಮಿತ್ರ" ಮೈಸೂರಲ್ಲಿ ಅವನ ಪ್ರಪ್ರಥಮ ಉದ್ಯಮ ಅದರ ಸಹಾಯದಿಂದ ಸಂಚಾರ, ಅರಣ್ಯ, ಎಕ್ಸೈಜ್ ಮುಂತಾದ ಪ್ರಭುತ್ವ ಶಾಖೆಗಳ ಮೇಲೆ ಬಲಿ ಬೀರಿ ಧನಗಳಿಸುವುದು ಅವನ ಉದ್ದೇಶವಾಗಿತ್ತು

ಹನ್ನೆರಡು ಗಂಟೆ ಸುಮಾರಿಗೆ ರಾಮದಯಾಲನು ಕಛೇರಿಗೆ ಬಂದ. ಜೋಷಿಯ ಅಂತರ್ಭವನದಲ್ಲಿ ಇಬ್ಬರೂ ಒಂದು ಗಂಟೆ ಕಾಲ ಮಾತಾಡುತ್ತಿದ್ದರು ಅನಂತರ ಲತಾಂಗಿಗೆ ಕರೆ ಬಂತು

ಲತಾ ಭವನಕ್ಕೆ ಬಂದಾಗ ರಾಮದಯಾಲ್, ಜೋಷಿ ಇಬ್ಬರೂ ಕಿಟಕಿಯ ಹತ್ತಿರ ನಿಂತು ಆಸಕ್ತಿಯಿಂದ ಏನೋ ಮಾತಾಡುತ್ತಿದ್ದರು. ದಯಾಳ್ ಬಳಿಯ ಖಾದಿ ನಿಲುವಂಗಿ ಧರಿಸಿದ್ದ ತಲೆಯ ಮೇಲೆ ಗಾಂಧಿ ಟೋಪಿ. ಲತಾ ಎರಡು ಹೆಜ್ಜೆ ಮುಂದೆ ಹೋಗಿ ನಿಂತಳು. ಜೋಷಿ ಕೂಡಲೆ ಅವಳ ಕಡೆ ತಿರುಗಿ,

"ಈಕೆಯೇ ನಮ್ಮ ಹೊಸ ಸಂಪಾದಿಕೆ ಲತಾದೇವಿ ?

ಎಂದು ಹೇಳಿ ಪರಿಚಯ ಮಾಡಿಕೊಟ್ಟ.

ಲತಾ ನಮಸ್ಕಾರ ಮಾಡಿದಳು ದಯಾಳ್ ಪ್ರತಿ ನಮಸ್ಕಾರ ಮಾಡಿ ಕುಳಿತುಕೊಳ್ಳುವಂತೆ ಸನ್ನೆ ಮಾಡಿ ತಾನೂ ಕುಳಿತುಕೊಂಡ ದಯಾಳನಿಗೆ ಕನ್ನಡ ಬರುತ್ತಿರಲಿಲ್ಲ ಇಂಗ್ಲಿಷಲ್ಲಿಯೇ ಮಾತು ಕತೆ ನಡೆಯಿತು

"ನಿಮ್ಮ ಮಹಿಳಾ ಮತ್ತು ಮಕ್ಕಳ ಪುಟಗಳು ಜನಪ್ರಿಯವಾಗಿದೆಯೆಂದು ಜೋಷಿ ಹೇಳುತ್ತಾರೆ ಮಕ್ಕಳಿಗಾಗಿಯೇ ಒಂದು ಹೊಸ ವಾರ ಪತ್ರಿಕೆ ಪ್ರಾರಂಭಿಸಬೇಕೆಂದು ನನ್ನ ಯೋಚನೆ. ನೀವದರ ಸಂಪಾದಕತ್ವವನ್ನು ನಿರ್ವಹಿಸಬಲ್ಲಿರಾ ?"

ದಯಾಳ್ ಪ್ರಶ್ನಿಸಿದ ಕೆಂಪಾದ ಕೆನ್ನೆ ಮತ್ತು ರಂಗಿನ ತುಟಿಗಳ ಈ ೨೪ ವರ್ಷಗಳ ಯುವತಿ ಸಂಪಾದಕೀಯ ಜವಾಬ್ದಾರಿಗೆ ಅರ್ಹಳೇ ಎಂಬ ಸಂದೇಹ ಅವನಿಗೆ ಹುಟ್ಟಿತ್ತು.

"ನೀವಾ ಕೆಲಸವನ್ನು ನನಗೆ ಕೊಡುವುದಾದರೆ ಸಂತೋಷದಿಂದ ನಿರ್ವಹಿಸುತ್ತೇನೆ."

ಎಂದು ಲತಾ ಇಂಗ್ಲಿಷಲ್ಲೇ ಉತ್ತರ ಕೊಟ್ಟಳು.

ಅವಳ ಸ್ಪುಟವಾದ ಉಚ್ಚಾರಣೆ, ಧೈರ್ಯದ ಮಾತು ದಯಾಳನಿಗೆ ಸಮಾಧಾನ ಉಂಟು ಮಾಡಿತು "ಸಂಪಾದಕೀಯ ಜವಾಬ್ದಾರಿ ಬಹಳ ದೊಡ್ಡದು ಮದ್ರಾಸ್, ಬೊಂಬಾಯ್, ಕಲ್ಕತ್ತಾಗಳಲ್ಲಿ ನಾನು ಆರೇಳು ಪತ್ರಿಕೆಗಳನ್ನು ನಡೆಸುತ್ತಿದ್ದೇನೆ ಬಹು ಮಂದಿ ಸ್ತ್ರೀಯರು ನನ್ನ ಕಛೇರಿಗಳಲ್ಲಿ ಟೈಪಿಸ್ಟುಗಳಾಗಿ, ಗುಮಾಸ್ತರಾಗಿ ಕೆಲಸ ಮಾಡುತ್ತಾರೆ ಸಂಪಾದಕ ವರ್ಗದಲ್ಲೂ ಒಬ್ಬಿಬ್ಬರಿದ್ದಾರೆ ಆದರೆ ಮಹಿಳೆಯನ್ನು ಪ್ರಧಾನ ಸಂಪಾದಿಕೆಯಾಗಿ ತೆಗೆದುಕೊಳ್ಳುವುದು ಇದೇ ಮೊದಲ ಸಾರಿ" ಎಂದು ಹೇಳಿದ.

ಲತಾ ಉತ್ತರ ಕೊಡಲಿಲ್ಲ ಜೋಷಿ ಮಧ್ಯೆ ಪ್ರವೇಶಿಸಿ ಹೇಳಿದ. "ಇವರ ಸಾಮರ್ಥ್ಯದ ವಿಚಾರದಲ್ಲಿ ನೀವು ಸಂದೇಹ ಪಡುವ ಅಗತ್ಯವಿಲ್ಲ ಮಿಸ್ಟರ್ ಸಿಂಹ ನಾಲ್ಕು ತಿಂಗಳ ಅನುಭವದಿಂದ ನಾನು ಈ ಮಾತು ಹೇಳುತ್ತಿದ್ದೇನೆ ಇವರ ಲೇಖನಗಳು ಪ್ರಾರಂಭವಾದ ಮೇಲೆ ಭಾನುವಾರದ ವಿಶೇಷ ಸಂಚಿಕೆಯ ಪ್ರಚಾರ ಒಂದಕ್ಕೆರಡರಷ್ಟು ಹೆಚ್ಚಿದೆ"

ಸಿಂಹ ಸ್ವಲ್ಪ ಹೊತ್ತು ಯೋಚಿಸಿ ಬಳಿಕ ನುಡಿದ, "ಹಾಗಾದರೆ ಹೊಸ ವಾರ ಪತ್ರಿಕೆಯ ಅಗತ್ಯವೇನಿದೆ? ಮಿಸ್ಟರ್ ಜೋಷಿ, ನಾನು ಹೇಳುವುದನ್ನು ಕೇಳಿ ದಿನ ಪತ್ರಿಕೆಗೆ ಇವರೀಗ ಪ್ರತಿ ವಾರ ಬರೆಯುತ್ತಿದ್ದಾರೆ ಪತ್ರಿಕೆಯ ಹಿತದೃಷ್ಟಿಯಿಂದ ಮುಂದೆಯೂ ಬರೆಯುವುದು ಅಗತ್ಯ ಆದ್ದರಿಂದ ಹೊಸ ವಾರ ಪತ್ರಿಕೆಗೆ ಬದಲಾಗಿ ಮಾಸ ಪತ್ರಿಕೆಯನ್ನು ಪ್ರಾರಂಭಿಸೋಣ. ಏನನ್ನುತ್ತೀರಿ?"

ಜೋಷಿ ಒಪ್ಪಿಕೊಂಡ ವ್ಯವಹಾರಿಕ ದೃಷ್ಟಿಯಿಂದ ಸೂಚನೆ ಉತ್ತಮವಾಗಿ ಕಂಡಿತು

"ಹೆಸರು ಗೊತ್ತಾಗಿದೆಯೋ?"

"ಸಖೀ—ಮಹಿಳೆಯರ ಮತ್ತು ಮಕ್ಕಳ ಮಾಸ ಪತ್ರಿಕೆ ಮುಂದಿನ ತಿಂಗಳಿಂದ ಪ್ರಕಟನೆಯನ್ನು ಪ್ರಾರಂಭಿಸಬಹುದು"

"ಸಖೀ! ಹೆಸರು ಚೆನ್ನಾಗಿದೆ ಅಂದ ಮೇಲೆ ತಲಗು ತಮಿಳುಗಳಲ್ಲಿಯೂ ಏಕೆ ಪ್ರಕಟಿಸಬಾರದು? ಜೋಷಿ, ಇದೊಂದು ಉತ್ತಮ ಸಲಹೆ ಪ್ರಕಟನೆಯ ತಾರೀಖು ಒಂದೆರಡು ತಿಂಗಳು ಮುಂದೆ ಹೋದರೂ ಚಿಂತೆಯಿಲ್ಲ ಏಕ ಕಾಲ

ದಲ್ಲಿ ಮೂರು ಭಾಷೆಗಳಲ್ಲಿಯೂ ಪ್ರಕಟಿಸಲು ತಕ್ಕ ಏರ್ಪಾಡುಗಳು ನಡೆಯಲಿ. ತ್ರಿವರ್ಣ ಚಿತ್ರದ ಹೊದ್ದಿಕೆ, ಪುಟ ಪುಟದಲ್ಲಿ ದ್ವಿವರ್ಣ ಚಿತ್ರಗಳು, ಪ್ರತಿಯೊಂದು ಲೇಖನವೂ ಸಚಿತ್ರವಾಗಿರಬೇಕು ವಿದ್ಯಾಖಾತೆಗಳಿಂದ ಪಾಠ ಶಾಲೆಗಳಿಗೆ ಶಿಫಾರಸ್ಸು ಮಾಡಿಸಬಹುದು ಪ್ರತಿ ಭಾಷೆಯ ಸಂಚಿಕೆ ಸುಲಭವಾಗಿ ಹತ್ತಿಪ್ಪತ್ತು ಸಾವಿರ ಪ್ರಚಾರವಾಗುತ್ತದೆ ಬೇಕಾದ ಚಿತ್ರ ಕಾರರು ಮತ್ತು ಲೇಖಕರನ್ನು ಹುಡುಕುವ ಭಾರ ನಿಮ್ಮದು"

ಸಿಂಹನ ಉತ್ಸಾಹ ಶಿಖರಕ್ಕೇರಿತು ಪತ್ರಿಕೋದ್ಯಮ, ವ್ಯಾಪ್ತಿ, ಔನ್ನತ್ಯಗಳನ್ನು ಅರಿತ ಜೋಷಿಯಂತಹ ಅನುಭವಸ್ಥನಾದ ಸಂಪಾದಕ, ಪತ್ರಿಕಾ ವೃತ್ತಿಯಲ್ಲಿ ಹೊಸದಾಗಿ ಅಡಿಯಿಟ್ಟ ಲತಾಂಗಿಯಂತಹ ಸುಂದರ ಸುಸಂಸ್ಕೃತ ಯುವತಿ ಶ್ರೋತೃಗಳಾಗಿ ಎದುರಿಗಿದ್ದುದು ಸಿಂಹನಿಗೆ ಸಹಾಯಕ ವಾಯಿತು ಭಾವದ ಆವೇಗದಿಂದ ಕಿವಿಗಳು ನಿಮಿರಿದವು ಧ್ವನಿ ಉದ್ರಿಕ್ತ ವಾಯಿತು ಮಾತಿನ ನರಣಿಗೆ ಅನುಗುಣವಾಗಿ ಕೈಗಳು ಚಲಿಸುತ್ತಿದ್ದವು. ಜೋಷಿ ಲತಾಂಗಿ ಇಬ್ಬರೂ ಈ ಗಂಭೀರ ದೃಶ್ಯವನ್ನು ಆಸಕ್ತಿಯಿಂದ ನೋಡುತ್ತಿದ್ದಂತೆ ಮೇಜಿನ ಮೇಲಿದ್ದ ಟೆಲಿಫೋನ್ ಹೊಡೆಯಲು ಪ್ರಾರಂಭವಾಯಿತು

ಸಿಂಹ ಮಾತು ನಿಲ್ಲಿಸಿ "ಮದ್ರಾಸಿಂದ ಕಾಲ್ ಬಂದರೆ ತಿಳಿಸುವಂತೆ ಹೇಳಿದ್ದೆ" ಎನ್ನುತ್ತಾ ರಿಸೀವರನ್ನು ಕಿವಿಗಿಟ್ಟುಕೊಂಡ "ಹೆಲೋ! ಯಾರು ?" ಎಂದು ಕೇಳಿದ

ಟೆಲಿಫೋನಿನ ಆ ಕೊನೆಯಲ್ಲಿದ್ದ ವ್ಯಕ್ತಿ ಹೇಳಿದ್ದನ್ನು ಕೇಳಿ ಸಿಂಹನ ಮುಖ ಕೆಂಪೇರಿತು "ಯಾರೋ ಮಂಗೇಶನಂತೆ ಏನೋ ಅರಚಿಕೊಳ್ಳು ತ್ತಿದ್ದಾನೆ" ಎಂದ

ಲತಾ ಚಕಿತಯಾದಳು ಫೋನಲ್ಲಿ ಮಾತಾಡುತ್ತಿರುವುದು ತನ್ನ ಪತಿಯೆಂದು ಅವಳಿಗೆ ತಿಳಿಯಿತು "ಕ್ಷಮಿಸಿ ಸಾರ್ ಅವರು ನನ್ನ ಪತಿ ನನ್ನ ಸಂಗಡ ಮಾತಾಡಲಪೇಕ್ಷಿಸುತ್ತಿದ್ದಾರ" ಎಂದು ಹೇಳಿ ರಿಸೀವರ್ ತಗೆದು ಕೊಂಡಳು

"ಹೆಲೋ! ಲತಾ ಮಾತಾಡುತ್ತಿರುವುದು ಏನಾಯಿತು?" ಎಂದಳು.

"ಹೆಲೋ ಡಿಯರ್! ಮನೆಗೆ ಯಾವಾಗ ಬರುತ್ತಿ?"

" ಏನಂತಹ ಅವಸರ ?"

" ಶಿವಮೊಗ್ಗೆಯಿಂದ ಷರೀಫ್ ಬಂದಿದ್ದಾರೆ ಮಧ್ಯಾಹ್ನ ಸಿನಿಮಾಕ್ಕೆ ಹೋಗಲು ಪ್ರೋಗ್ರಾಂ ಹಾಕಿದ್ದೇನೆ "

" ನಿಮ್ಮ ಪ್ರೋಗ್ರಾಂ ಹಾಳಾಯಿತು ನಾನು ಎಲ್ಲಿಗೂ ಬರುವುದಿಲ್ಲ. ಆಫೀಸಿಗೆ ಫೋನ್ ಮಾಡಬೇಡವೆಂದು ಹೇಳಿರಲಿಲ್ಲವೇ ?"

ಎಂದು ಲತಾ ಬೇಸರದಿಂದ ರಿಸೀವರ್ ಕೆಳಗಿಟ್ಟಳು ಕನ್ನಡದಲ್ಲಿ ನಡೆದ ಮಾತುಕತೆ ಸಿಂಹನಿಗೆ ಅರ್ಥವಾಗಿರಲಿಲ್ಲ ಆದರೂ ಅವನ ಮುಖ ದಲ್ಲಿ ಮೂಡಿದ ಮಂದಹಾಸ ಅರ್ಥಗರ್ಭಿತವಾಗಿತ್ತು

" ಈಗಿನ ಕಾಲದ ವಿದ್ಯಾವತಿ ಮಹಿಳೆಯರು ವ್ಯವಹಾರ ಮತ್ತು ದಾಂಪತ್ಯ ಈ ಎರಡು ವಿಭಿನ್ನ ಕ್ಷೇತ್ರಗಳಲ್ಲಿ ನಡೆಸುತ್ತಿರುವ ದ್ವಿಮುಖ ಜೀವನಕ್ಕೆ ಒಂದು ನಮೂನೆಯಿದು!"

ಎಂದು ನಗುತ್ತಾ ಹೇಳಿದ

ಲತಾ ಅಪ್ರತಿಭಳಾದಳು ತಾನು ಕೆಲಸಕ್ಕೆ ಸೇರಿದ ಮೇಲೆ ಮಾಲಿಕನ ಸಂಗಡ ಮೊದಲ ಸಾರಿ ಮಾತಾಡುತ್ತಿರುವಾಗಲೇ ಈ ಅಪಮಾನದ ಪ್ರಸಂಗ ನಡೆಯಬೇಕೇ ? ಕಣ್ಣುಗಳಲ್ಲಿ ತುಂಬಿದ್ದ ನೀರನ್ನು ಕಷ್ಟದಿಂದ ತಡೆದು ಕೊಂಡಳು

ಅಷ್ಟರಲ್ಲಿ ಪುನಃ ಟೆಲಿಫೋನ್ ಹೊಡೆಯಿತು ಜೋಷಿ ರಿಸೀವರ್ ತೆಗೆದುಕೊಂಡು ಸಿಡುಕಿನ ಧ್ವನಿಯಿಂದ " ಯಾರುಬೇಕು ?" ಎಂದು ಕೇಳಿದ

ಸ್ವಿಚ್ ಬೋರ್ಡಿನ ಆಪರೇಟರ್ ಮಾತಾಡುತ್ತಿರಬಹುದೆಂದು ಅವನ ಭಾವನೆ ಆದರೆ ವಾಸ್ತವದಲ್ಲಿ ಮಂಗೇಶ ಮಾತಾಡುತ್ತಿದ್ದುದು ಲತಾ ಹಠಾತ್ತಾಗಿ ರಿಸೀವರ್ ಕೆಳಗಿಟ್ಟದ್ದು ಅವನಿಗೆ ಅರ್ಥವಾಗಲಿಲ್ಲ ಕೋಪದಿಂದ ಕೇಳಿದ,

" ಯಾರು ಬೇಕು ?"

"ನೀವು ಯಾರು ಮಾತಾಡುತ್ತಿರುವುದು ಅದನ್ನುಮೊದಲು ಹೇಳಿ."

" ನಾನು ಜೋಷಿ. ' ವಿಶ್ವಮಿತ್ರ ' ಪತ್ರಿಕೆಯ ಸಂಪಾದಕ "

ಧ್ವನಿ ಮಂಜು ಗಡ್ಡೆಯಂತೆ ಶೀತಲವಾಗಿತ್ತು ಆ ಕಡೆಯಿಂದ ಉತ್ತರ ಬರದಿದ್ದುದನ್ನು ಕಂಡು ಜೋಷಿ ಕೋಪದಿಂದ,

"ನೀವು ಯಾರ್ರಿ ಮಾತಾಡುವವರು ? ನಿಮಗೇನು ಬೇಕಾಗಿದೆ ? "

" ನಾನು ಮಂಗೇಶರಾವ್ ನಿಮಗೆ ತೊಂದರೆಯಾಗದಿದ್ದರೆ ನನ್ನ ಪತ್ನಿ ಲತಾ ಸಂಗಡ ಮಾತಾಡುತ್ತೇನೆ "

ಜೋಷಿ ರಿಸೀವರನ್ನು ಲತಾ ಕೈಗೆ ಕೊಟ್ಟ ಸಂಕೋಚ ಮತ್ತು ಅಪಮಾನದಿಂದ ಅವಳ ಕೈಗಳು ನಡುಗುತ್ತಿದ್ದವು ಪ್ರಯತ್ನ ಪೂರ್ವಕವಾಗಿ ಧ್ವನಿಯನ್ನು ಸ್ಥಿಮಿತಕ್ಕೆ ತಂದುಕೊಂಡು " ಪುನಃ ಏನಾಯಿತು ?" ಎಂದು ಎಂದು ಕೇಳಿದಳು

" ಅರ್ಧದಲ್ಲೇ ರಿಸೀವರ್ ಕೆಳಗಿಟ್ಟದ್ದೇಕೆ ?"

" ಮಾತಾಡಲು ಇಷ್ಟವಿಲ್ಲದ್ದರಿಂದ ಈಗ ಪುನಃ ಕೆಳಗಿಡುತ್ತೇನೆ. ನನ್ನನ್ನು ಈ ರೀತಿ ತೊಂದರಪಡಿಸಬೇಡಿ "

ಎಂದು ಹೇಳಿ ರಿಸೀವರನ್ನು ಕೆಳಗಿಟ್ಟಳು

ಕೊಟಡಿಯಲ್ಲಿ ನೀರವ ಸಿಂಹ ಎದ್ದು ಹೋಗಿ ಕಿಟಕಿಯ ಬಳಿ ನಿಂತಿದ್ದ ಜೋಷಿಯ ದೃಷ್ಟಿಯಲ್ಲಿ ಕುತೂಹಲ-ಚಿಂತೆ ಬೆರೆತಿದ್ದವು.

" ಕ್ಷಮಿಸಿ ಮಿಸ್ಟರ್ ಜೋಷಿ ಅವರ ವರ್ತನೆಗೆ ನಾನು ನಾಚಿಕೆ ಪಡಬೇಕಾಗಿದೆ "—ಲತಾ ಸಂಕೋಚದಿಂದ ನುಡಿದಳು

ಜೋಷಿ ಉತ್ತರ ಕೊಡಲಿಲ್ಲ ಸಿಂಹ ಲತಾಂಗಿಯ ಕಡೆ ತಿರುಗಿ ವ್ಯಂಗ್ಯದ ಬಿರುದನಿಯಿಂದ ಹೇಳಿದ,

" ಉದ್ಯೋಗದಲ್ಲಿರುವ ಮಹಿಳೆಯರಿಗೆ ದಾಂಪತ್ಯ ಜೀವನ ಒಂದು ಅಡಚಣೆ ಎಂಬ ನನ್ನ ಅಭಿಪ್ರಾಯ ಸ್ಥಿರವಾಯಿತು, ಲತಾದೇವಿ ಸ್ತ್ರೀಯರ ಸಮಾನತೆ ಸ್ವಾತಂತ್ರ್ಯಗಳನ್ನು ಅಪೇಕ್ಷಿಸುವವರು ಈ ಸಮಸ್ಯೆಯನ್ನು ಮೊದಲು ಬಿಡಿಸಬೇಕು "

" ನಾನು ನಿಮ್ಮ ಕ್ಷಮೆಯನ್ನು ಬೇಡುತ್ತೇನೆ, ಸಾರ್. ನಿಮ್ಮ ಮಾತು ಕೇಳಿ ಸಂಪಾದಕೀಯ ಜವಾಬ್ದಾರಿಯನ್ನು ನಾನು ನಿರ್ವಹಿಸಬಲ್ಲೆನೇ ಎಂದು ನನಗೇ ಸಂದೇಹವಾಗುತ್ತಿದೆ "

" ಸಂದೇಹಕ್ಕೆ ಕಾರಣವಿಲ್ಲ ಲತಾದೇವಿ ಜೀವನವೇ ಒಂದು ಸಮಸ್ಯೆ. ಆತ್ಮಶಕ್ತಿಯಿಂದ ನಾವು ಆ ತೊಡಕುಗಳನ್ನು ಬಿಡಿಸಬೇಕು ಬಿಡಿಸಲು ಅಶಕ್ತರಾದರೆ ಮುಳುಗುವೆವು ಕನ್ನಡ ನನಗೆ ಅರ್ಥವಾಗದಿದ್ದರೂ ಈಗ

ನಡೆದ ಮಾತುಗಳಿಂದ ನಿಮಗೆ ಅಂತಹ ಶಕ್ತಿ ಇದೆಯೆಂದು ನನಗೆ ಧೃಡವಾಗಿದೆ ಹೊಸ ಪತ್ರಿಕೆ ನಿಮ್ಮ ಸಂಪಾದಕತ್ವದಲ್ಲಿಯೇ ಪ್ರಾರಂಭವಾಗುವುದು ಪಾಂಚಾಲಿಯಂತೆ ನಿಮಗೆ ಐದು ಮಂದಿ ಪತಿಗಳಿದ್ದು ಅವರೆಲ್ಲ ಏಕ ಕಾಲದಲ್ಲಿ ನಿಮ್ಮೊಂದಿಗೆ ಮಾತಾಡಲು ಆತುರರಾಗಿದ್ದರೂ ನಮ್ಮ ಪತ್ರಿಕೆಗೆ ನೀವು ಬೇಕೇ ಬೇಕು ಮಿಸ್ಟರ್ ಜೋಷಿ ಮುಂದಿನ ಶನಿವಾರ ನಾನು ಪುನಃ ಬೆಂಗಳೂರಿಗೆ ಬರುತ್ತೇನೆ ಅಷ್ಟು ಹೊತ್ತಿಗೆ ಈ ಉದ್ಯಮದ ವಿವರಗಳು ಸಿದ್ಧವಾಗಿರಲಿ "

ಮಾತಾಡುತ್ತಿದ್ದಂತೆ ಸಿಂಹನ ಧ್ವನಿ ಮೃದುವಾಯಿತು ಗಂಭೀರವಾಯಿತು

" ನನ್ನಲ್ಲಿ ನೀವು ವ್ಯಕ್ತಪಡಿಸಿದ ವಿಶ್ವಾಸಕ್ಕಾಗಿ ವಂದನೆಗಳು ಅಪ್ಪಣೆಯಾದರೆ ಹೋಗುತ್ತೇನೆ "

ಲತಾ ಹೇಳಿದಳು. ಭೇಟಿ ಮುಗಿದು ಅವಳು ಹೊರಗೆ ಹೊರಟಾಗ ಜೋಷಿ ಸಂಗಡ ಬಂದ.

" ನನ್ನಿಂದ ನಿಮಗೆಷ್ಟು ತೊಂದರೆ !" ಎಂದಳು ಲತಾ

" ಎಷ್ಟು ತೊಂದರೆಯಾದರೂ ಸಂತೋಷದಿಂದ ಸಹಿಸುತ್ತೇನೆ ನಿನ್ನ ಗಂಡ ಹೀಗೇಕೆ ಮಾಡಿದ ? ಆ ದಿನ ನಿನ್ನ ಸಂಗಡ ಬಂದಿದ್ದಾಗ ಎಷ್ಟೊಂದು ನಮ್ರತೆಯಿಂದ ವರ್ತಿಸಿದ "

" ಅವರಿಗೆ ಶಿವಮೊಗ್ಗೆಯ ಸ್ನೇಹಿತನೊಬ್ಬನಿದ್ದಾನೆ ಅವನು ಬಂದರೆ ತಲೆ ತಿರುಗಿಬಿಡುತ್ತದೆ "

" ನೀನೀಗ ಹೋಗು, ಲತಾ ನಾನು ಸಿಂಹರ ಸಂಗಡ ಮಾತಾಡಿ ಎಲ್ಲವನ್ನೂ ನಿರ್ಧರಿಸುತ್ತೇನೆ "

" ಪುನಃ ನಿಮ್ಮನ್ನು ನೋಡುವುದು ?"

ಲತಾಂಗಿಯ ಪ್ರಶ್ನೆ ಅವಳ ಕಂಠದ ಉತ್ಸುಕತೆ ಜೋಷಿಯನ್ನು ಅಚ್ಚರಿಗೊಳಿಸಿತು. ದಿನ ಪತ್ರಿಕೆಯ ಸಂಪಾದಕೀಯ ವಿಭಾಗ ಭಾನುವಾರ ಕೆಲಸ ಮಾಡುತ್ತಿತ್ತಾದರೂ ಜೋಷಿಯ ಸೂಚನೆಯಂತೆ ಲತಾಂಗಿ ಆ ದಿನ ಬರುತ್ತಿರಲಿಲ್ಲ.

" ನಾಳೆ ಭಾನುವಾರ ನಿನಗೆ ರಜಾ ಅಲ್ಲವೇ ?"

" ನೀವು ಅಪೇಕ್ಷಿಸಿದರೆ ಭಾನುವಾರ ಬರುತ್ತೇನೆ "

" ಸಿಂಹರ ಸಂಗಡ ನಾನೂ ಮದ್ರಾಸಿಗೆ ಹೋಗಬೇಕಾಗಬಹುದೋ ಏನೋ ಸೋಮವಾರ ಮಾತಾಡೋಣ "

ಬೀಳ್ಕೊಡುವಾಗ ಜೋಷಿಯ ಕೈಗಳು ಲತಾಂಗಿಯ ಭುಜಗಳನ್ನು ಆದರದಿಂದ ಮುಟ್ಟಿದವು ಲತಾಂಗಿ ಪ್ರತ್ಯುತ್ತರವಾಗಿ ಕಿರುನಗೆ ಬೀರಿದಳು

— ೪ —

ಲತಾಂಗಿ ಮನೆಗೆ ಬಂದಾಗ ಬಾಗಿಲು ಬೀಗ ಹಾಕಿತ್ತು ಕೆಲಸದವಳು ಹೊರಗೆ ಕಾದು ಕುಳಿತಿದ್ದಳು

ಪ್ರತಿದಿನ ಕಛೇರಿಗೆ ಹೋಗುವ ಮೊದಲು ಅಡಿಗೆ ಊಟಗಳನ್ನು ಮುಗಿಸಿಕೊಳ್ಳುವುದು ಲತಾಂಗಿಯ ಪದ್ಧತಿ. ಮಂಗೇಶ ಪ್ರಾತಃಕಾಲ ಎಂಟು ಗಂಟೆಗೆ ಕಾರ್ಖಾನೆಗೆ ಹೋಗುತ್ತಿದ್ದ ಮಧ್ಯಾಹ್ನ ೧೨ ಗಂಟೆಗೆ ಬಂದು ಬೀಗ ತೆಗೆದು ಊಟಮಾಡಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಪುನಃ ಎರಡು ಗಂಟೆಗೆ ಹಿಂದಿರುಗುತ್ತಿದ್ದ ಸಂಜೆ ಮನೆಗೆ ಬಂದಮೇಲೆ ಲತಾ ಪುನಃ ಅಡಿಗೆಗಿಳಿಯುತ್ತಿದ್ದಳು

ಶನಿವಾರ ಈ ಕಾರ್ಯಕ್ರಮದಲ್ಲಿ ಬದಲಾವಣೆಯಾಗುತ್ತಿತ್ತು ಲತಾ ೯ ಗಂಟೆಗೆ ಕಛೇರಿಗೆ ಹೋಗಬೇಕಾಗಿದ್ದುದರಿಂದ ಆದಿನ ಬೆಳಿಗ್ಗೆ ಅಡಿಗೆ ಮಾಡುತ್ತಿರಲಿಲ್ಲ. ಏನಾದರೂ ತಿಂಡಿ ಮಾಡಿಟ್ಟು ಹೊರಟುಹೋಗುವಳು. ಮಧ್ಯಾಹ್ನ ೧ ಘಂಟೆಗೆ ಬಂದು ಅಡಿಗೆ ಮಾಡುವಳು ಈ ದಿನ ಕಛೇರಿಯಿಂದ ಹೊರಟಾಗಲೇ ೨ ಗಂಟೆಯಾಗಿತ್ತು. ಮನೆ ಸೇರುವಷ್ಟರಲ್ಲಿ ಹಸಿವಿನಿಂದ ಕಂಗೆಟ್ಟಿದ್ದಳು

" ಅಯ್ಯನೋರು ಇಷ್ಟೊತ್ತನಕ ಇದ್ರು ತಾಯಿ ಈಗ್ತಾನೆ ಬೀಗ ಹಾಕ್ಕೊಂಡು ಹೋದ್ರು "

ಎಂದು ಕೆಲಸದವಳು ಹೇಳಿದಳು

" ಏನ್ಮಾಡ್ತಿದ್ದರು ?"

" ಅದಾರೋ ಆವಯ್ಯನ ಸಂಗಡ ಮಾತಾಡ್ತಿದ್ದರು "

" ಯಾರು ಅವರು?"

" ಯಾರೋ ತಾಯಿ ಸ್ವಲ್ಪ ವಯಸ್ಸಾಗೈತೆ ಮೋಟಾರಲ್ಲಿ ಅಯ್ಯನೋರೂ ಅವರೂ ಬಂದ್ರು, ಪುನಃ ಮೋಟಾರಲ್ಲಿ ಹೋದ್ರು "

ಸಂಗಡಿದ್ದವನು ಷರೀಫ್ ಎಂಬುದು ಲಂತಾಗಿಗೆ ಧೃಢವಾಯಿತು. ಬಾಗಿಲು ತೆರೆದು ಒಳಗೆ ಹೋದಳು ಮೇಜಿನ ಮೇಲೆ ತಟ್ಟೆಯಲ್ಲಿ ಬಿಸ್ಕತ್ತು ಬಾಳೆಹಣ್ಣು, ದ್ರಾಕ್ಷಿ, ಅನಾನಸ್ ಮುಂತಾದುವು ಇಡಲ್ಪಟ್ಟಿದ್ದವು ಅವುಗಳನ್ನು ಮಂಗೇಶ ತನಗಾಗಿ ಇಟ್ಟಿರಬೇಕೆಂದು ತಿಳಿದಿದ್ದಳು ಒಂದು ಬಿಸ್ಕತ್ತ್ತು ಬಾಯಿಗಿಟ್ಟುಕೊಳ್ಳುತ್ತಿದ್ದಂತೆ ಷರೀಫ್ ತರಿಸಿರಬಹುದು ಎಂದು ಭಾವಿಸಿ ಅಸಹನೆಯಿಂದ ಪುನಃ ಅದನ್ನು ತಟ್ಟೆಯಲ್ಲಿಯೇ ಇಟ್ಟು ಒಳಗೆ ಹೋಗಿ ಬಟ್ಟೆ ಬದಲಾಯಿಸಿ ಕೈಕಾಲು ತೊಳೆದುಕೊಂಡು ಅಡಿಗೆಗಿಳಿದಳು. ಮಲಿನವಾದ ಬಟ್ಟೆಗಳನ್ನು ಕೊಟ್ಟು ಕೆಲಸದವಳನ್ನು ಒಗೆಯಲು ಕಳುಹಿಸಿದಳು.

ಸಂಜೆ ಐದು ಗಂಟೆಗೆ ಊಟ ಮುಗಿಯಿತು ಪದ್ಮಾ ಗೆಳತಿಯನ್ನು ನೋಡಲು ಬಂದಳು. ಅವಳ ಉಡುಪು ಅಲಂಕಾರಗಳನ್ನು ಕಂಡು ಲತಾ,

" ಏನು ಪ್ರೋಗ್ರಾಂ ಎಲ್ಲಿಗೆ ಹೊರಟಿರುವೆ ?"

ಎಂದು ಕೇಳಿದಳು

" ಸಿನಿಮಾಕ್ಕೋ ಸರ್ಕಸ್ಸಿಗೋ ಹೋಗೋಣವೆಂದು ಯೋಚಿಸಿದ್ದೇನೆ. ಆದೂ ನೀವು ಬಂದರೆ "

" ನಾನು ಬರುವಂತಿಲ್ಲ ಪದ್ಮಾ, ಬೆಳಗಿನಿಂದ ಸಾಕಾಗಿದೆ ಆಫೀಸಿನಿಂದ ಮೂರು ಗಂಟೆಗೆ ಮನೆಗೆ ಬಂದೆ ಅಡಿಗೆ ಮಾಡಿ ಈಗತಾನೆ ಊಟ ಮುಗಿಯಿತು "

" ಮಂಗೇಶರಾವ್ ಎಲ್ಲಿ ?"

" ಯಾರೋ ಸ್ನೇಹಿತರ ಸಂಗಡ ಹೊರಗೆ ಹೋಗಿದ್ದಾರೆ "

ಮಂಗೇಶ್ ಲತಾ ಇಬ್ಬರನ್ನೂ ಕರೆದುಕೊಂಡು ಸಿನಿಮಾಕ್ಕೆ ಹೋಗಬೇಕೆಂದು " ಪ್ಲಾನ್ " ಮಾಡಿಕೊಂಡು ಪದ್ಮಾ ಬಂದಿದ್ದಳು ವಾರಕ್ಕೊಂದು ದಿನವಾದರೂ ವಿನೋದವಾಗಿ ಸಂಜೆ ಕಳೆಯುವುದು ಅವಳ ಆಸೆ. ಸರಿ

ಯಾದ Male escort (ವೈಗಾವಲು ಪುರುಷ) ಇಲ್ಲದೆ ಅವಳ ಆಸೆ ಇದು ವರೆಗೆ ಭಂಗವಾಗಿತ್ತು. Boy friends ಸಂಗಡ ಹೋಗಿ ತನ್ನ ರೂಪ ಯೌವನಗಳ ಬಂಡವಾಳ ಕರ್ಚು ಮಾಡುವುದು ಅವಳಿಗಿಷ್ಟವಿರಲಿಲ್ಲ. ಮಂಗೇಶ ಪ್ರತ್ಯೇಕ ಮನೆ ಮಾಡಿದ ಮೇಲೆ ಅವಳ ಈ ಸಮಸ್ಯೆ ಪರಿಹಾರ ವಾಗಿತ್ತು ಮಂಗೇಶ ಲತಾಂಗಿಯರ ಸಂಗಡ ಸಂಕೋಚವಿಲ್ಲದೆ ಹೋಟಲು ಸಿನಿಮಾಗಳಿಗೆ ಹೋಗಿ ಬರುತ್ತಿದ್ದಳು ಒಂದೆರಡು ಸಾರಿ ತಾನೇ ಬಿಲ್ಲಿನ ಹಣ ಕೊಡಲು, ಟಿಕೆಟ್ ಕೊಳ್ಳಲು ಪ್ರಯತ್ನಿಸಿದಳು ಆದರೆ ಮಂಗೇಶ ಅದಕ್ಕೆ ಅವಕಾಶ ಕೊಡಲಿಲ್ಲ ಲತಾ ಈ ನಾಟಕ ನೋಡಿ ತನ್ನಲ್ಲಿ ತಾನೇ ನಗುವಳು

"ಅದೇಕೆ ಯಾವಾಗಲೂ ನೀವೇ ಹಣ ಕೊಡಬೇಕೇ ?"

ಎಂದು ಒಂದು ಸಾರಿ ಪತಿಯನ್ನು ಕೇಳಿದಳು

"ಹೌದು ಅದು ನಮ್ಮ ಹಕ್ಕು"

ಮಂಗೇಶ ಉತ್ತರ ಕೊಟ್ಟ

"ಸಂಪಾದಿಸುವ ಗಂಡಸರಲ್ಲವೇ ಲತಾ ? ಕೊಡಲಿ ಬಿಡು ನನಗೆ ದುಡ್ಡೇ ಉಳಿಯಿತು"

ಎಂದು ಪದ್ಮಾ ವಿನೋದದ ದನಿಯಿಂದ ಹೇಳಿದ್ದಳು.

"ಆದೇಕೆ ಸಂಪಾದಿಸುವುದಿಲ್ಲವೇ ? ನಮಗೂ ಕೊಡುವ ಹಕ್ಕಿದೆ"

"ಇದರಲ್ಲಿ ಇನ್ನೊಂದು ವಿಚಾರವಿದೆ ಪದ್ಮಾ Simple mathematics. ನಾನು ಲತಾ ಯಾರು ದುಡ್ಡು ಕೊಟ್ಟರೂ ಒಂದೇ ನಿನ್ನೊಬ್ಬಳ ಕರ್ಚು ನಮಗೆ ಭಾರವಲ್ಲ ಆದರೆ ನಿನ್ನ ಮೇಲೆ ನಮ್ಮಿಬ್ಬರ ಕರ್ಚನ್ನೂ ಹಾಕುವುದು ಯಾವ ನ್ಯಾಯ ?

ಎಂದು ಮಂಗೇಶ ಹೇಳಿದ್ದ. ಕೊನೆಗೆ ಸರದಿಯ ಮೇಲೆ ಒಬ್ಬೊಬ್ಬರು ಒಂದೊಂದು ವಾರ ದುಡ್ಡು ಕೊಡಬೇಕೆಂದು ಗೊತ್ತಾಗಿತ್ತು. ಈ ವಾರ ಪದ್ಮಳ ಸರದಿ ಅದಕ್ಕಾಗಿ ಪರ್ಸಲ್ಲಿ ಹತ್ತು ರೂಪಾಯಿ ನೋಟು ಹಾಕಿಕೊಂಡು ಬಂದಿದ್ದಳು. ಹಣ ಉಳಿಯಿತೆಂದು ಒಂದು ಕಡೆ ಸಂತೋಷ ! ವಿನೋದ ಭಂಗವಾಯಿತೆಂದು ಒಂದು ಕಡೆ ದುಃಖ. ಸಮಾಧಾನ ಮಾಡಿ ಕೊಂಡು,

"ಸಿನಿಮಾಕ್ಕೆ ಬರದಿದ್ದರೆ ಹೋಗಲಿ ಉಡುಪು ಬದಲಾಯಿಸಿಕೊ "ವಾಕ್" ಹೋಗೋಣ"–ಎಂದಳು

ಮಧ್ಯಾಹ್ನ ಉಟ್ಟಿದ್ದ ಜಾರ್ಜಟ್ ಸೀರೆಯನ್ನೇ ಲತಾಂಗಿ ಉಟ್ಟು ಸಿದ್ಧವಾದಳು ಮಾರ್ಗೋಸಾ ರಸ್ತೆಯಲ್ಲಿ ಇಬ್ಬರೂ "ವಾಕ್" ಹೊರಟರು.

ಕಲ್ಯಾಣ ನಗರದಲ್ಲಿ Lover's walk (ಪ್ರಣಯಿಗಳ ಬೀದಿ) ಎಂಬ ಹೆಸರಿಗೆ ಯಾವ ರಸ್ತೆ ಅರ್ಹವೆಂಬ ವಿಚಾರದಲ್ಲಿ ಯುವಕರ Gallop-pol (ಸಂಕ್ಷಿಪ್ತ ಮತ ಸಂಗ್ರಹ) ತೆಗೆದುಕೊಂಡರೆ ಮಾರ್ಗೋಸಾ ರಸ್ತೆ ಬಹು ಮತ ಪಡೆಯುವುದೆಂದು ಅನೇಕರ ಅಭಿಪ್ರಾಯ ಮಾರ್ಗೋಸಾ ರಸ್ತೆಯಲ್ಲಿ ಪದ್ಮಾ ಒಂದೆರಡು ವರ್ಷಗಳ ಪರಿಚಿತ ವ್ಯಕ್ತಿಯಾದರೂ ಸಂಜೆ ಅಲಂಕಾರ ಮಾಡಿಕೊಂಡು ತಿರುಗಾಡಲು ಬರುತ್ತಿದ್ದ ಸೊಗಸುಗಾರ ಅಭ್ಯರ್ಥಿ ಯುವಕರಾರೂ ಅವಳ ಕಡೆ ದೃಷ್ಟಿ ಬೀರುತ್ತಿರಲಿಲ್ಲ ಅವಳ ಎತ್ತರವಾದ ಆಕೃತಿ, ಬಲವಾದ ಮೈಕಟ್ಟು, ಮೇರೆಯಿಲ್ಲದ ಗಾಂಭೀರ್ಯ, ಇವು ಕೆಂಡಸಂಪಿಗೆಯ ಕಟು ಗಂಧದಂತೆ ಯುವಕ ರೂಪೀ ಭ್ರಮರಗಳನ್ನು ದೂರದಲ್ಲಿರಿಸಿದ್ದವು. ಇದನ್ನರಿತ ವಿಧ್ಯಾರ್ಥಿ ಕವಿಯೊಬ್ಬನು "ಒಂಟಿ ಸಲಗ'ದ ಹೆಣ್ಣು ಹೆಸರನ್ನು ಹುಡುಕಿ ಸಾಕಾಗಿ ಕೊನೆಗೆ ಪ್ರಾಚೀನ ನಾಟಕಕಾರರ ಸಂಕೇತದಂತೆ ಸಂಸ್ಕೃತವನ್ನಾಶ್ರಯಿಸಿ, **ಏಕಾಂಗಿನೀ ಗಜಗಾಮಿನೀ** ಎಂದು ಪದ್ಮಳಿಗೆ ನಾಮಕರಣ ಮಾಡಿದ್ದ ಅವನು ರಚಿಸಿದ ಈ ಹೆಸರಿನ ಪ್ರಣಯ ಗೀತೆ ಮಾಸ ಪತ್ರಿಕೆಯೊಂದರಲ್ಲಿ ಪ್ರಕಟವಾಗಿದೆಯೆಂದು ಅವನ ಗೆಳೆಯರು ಬಡಾಯಿ ಕೊಚ್ಚಿ ಕೊಳ್ಳುತ್ತಿದ್ದರು ಈ ಗಜಗಾಮಿನಿಯ ಸಂಗಡ ಚಿಗುರೆಕಂಗಳ ಚಲುವೆಯೊಬ್ಬಳನ್ನು ಕಂಡು ಮೊದಲು ಮೊದಲು ಕೆಲವರು ಆಕರ್ಷಿತರಾದರೂ ನಾಲ್ಕು ಹಜ್ಜೆ ಹಿಂಬಾಲಿಸುವ ಧೈರ್ಯ ಕೂಡಾ ಅವರಲ್ಲಾರಿಗೂ ಹುಟ್ಟಲಿಲ್ಲ. ಕೊನೆಗೆ ಹೂವಿಂದ ನಾರು ಸ್ವರ್ಗಕ್ಕೇರುವಂತೆ ಪದ್ಮಳ ಸಹಚಾರಿಣಿಯಾಗಿ ಲತಾಂಗಿಯೂ ಅಭ್ಯರ್ಥಿ ಯುವಕರ ಭಾಗಕ್ಕೆ ಅನಪೇಕ್ಷಿತೆಯಾದಳು

ಸಂಚಾರ ಮುಗಿಸಿಕೊಂಡು ಏಳು ಗಂಟೆ ಸುಮಾರಿಗೆ ಇಬ್ಬರೂ ಪದ್ಮಳ ಮನೆಗೆ ಬಂದರು. ಪದ್ಮಾ ಗೆಳತಿಯನ್ನು ಒಳಗೆ ಬರುವಂತೆ ಕರೆದಳು

ಪದ್ಮಳ ತಾಯಿ ಅಡಿಗೆ ಮನೆಯಲ್ಲಿ ಕೆಲಸದಲ್ಲಿದ್ದುದರಿಂದ ಅವರು ಬಂದದ್ದನ್ನು ನೋಡಲಿಲ್ಲ ಇಬ್ಬರೂ ಒಳಗಿನ ಕೊಟಡಿಗೆ ಹೋದರು. ಪದ್ಮಾ ಬಾಗಿಲು ಮುಚ್ಚಿದಾಗ ಲತಾಂಗಿಗೆ ಅರ್ಥವಾಯಿತು

"ಈ ಕೆಟ್ಟಚಾಳಿ ಬಿಡಬಾರದೇ, ಪದ್ಮಾ ?"

ಎಂದು ಅನುನಯದ ದನಿಯಿಂದ ಹೇಳಿದಳು

"ಅದು ಹೇಗೆ ಕೆಟ್ಟ ಚಾಳಿ ? ನಮ್ಮ ಹಾಸ್ಟಲ್ ಹುಡುಗಿಯರಲ್ಲಿ ಅನೇಕರಿಗೆ ಈ ಕೆಟ್ಟಚಾಳಿಯಿತ್ತು"

ಎಂದು ಆನಂದಪುತ್ರಿ ಅಲಮಾರಿಂದ ಡಬ್ಬಾ ಹೊರಗೆ ತೆಗೆದು ಸಿಗರೇಟ್ ತುಟಿಗೆ ಸಿಕ್ಕಿಸಿಕೊಂಡು ಬೆಂಕಿ ಹಚ್ಚಿದಳು

ಹೆಂಗಸರು ಧೂಮಪಾನ ಮಾಡುವುದು ಸಂಸ್ಕೃತಿಯ ಅಪವಾದವೆಂದು ಲತಾ ತಿಳಿದಿದ್ದಳು "ಐರೋಪ್ಯ ಮಹಿಳೆಯರು ಮಾಡುವುದಿಲ್ಲವೇ ? ನಾವೇಕೆ ಮಾಡಬಾರದು ?" ಎಂದು ಎಂದು ಪದ್ಮಳ ವಾದ

"ಭಾರತದ ಸಂಸ್ಕೃತಿಗೆ ಅದು ಹೊಂದುವುದಿಲ್ಲ ನಾವು ಇಂಗ್ಲಿಷ್ ವಿದ್ಯೆ ಕಲಿತರೂ ಗೌನ್ ಹಾಕಿಕೊಳ್ಳದೆ ಸೀರೆಯನ್ನೇ ಉಡುವೆವಲ್ಲವೇ ? ಅದರ ಮುಖ್ಯ ಕಾರಣ ಗೌನಿಗಿಂತ ಸೀರೆ ಕುಪ್ಪಸ ನಮಗೆ ಹೆಚ್ಚು ಶೋಭಿಸುತ್ತದೆ ಅದರಂತೆ ಸಿಗರೇಟ್ ವಿಚಾರ ಕೂಡಾ"

ಎಂದು ಲತಾಂಗಿ ಹೇಳುವಳು

"ಸಿಗರೇಟಿಗೂ ಸೀರೆಗೂ ಯಾವ ಸಂಬಂಧ ? ನನ್ನ ಅಜ್ಜಿ ಹೊಗೆ ಬತ್ತಿ ಸೇದುತ್ತಿದ್ದಳು ಸಂಸ್ಕೃತಿಯಲ್ಲಿ ಅಜ್ಜಿಗಿಂತ ಅನೇಕಪಾಲು ಮುಂದೆ ಹೋಗಿರುವ ನಾನು ಗ್ಲೋಡ್ ಪ್ಲೇಕ್ ಸಿಗರೇಟ್ ಸೇದುತ್ತೇನೆ"

"ಸಂಸ್ಕೃತಿಯಲ್ಲಿ ನೀನು ನಿನ್ನ ಅಜ್ಜಿಯ ಮಟ್ಟದಲ್ಲೇ ಇದ್ದಿದ್ದರೆ ಬೀಡಿ ಸೇದುತ್ತಿದ್ದೆಯೋ ಏನೋ ! ಮಂಗಳೂರಲ್ಲಿ ಕೂಲಿ ಹೆಂಗಸರು ಬೀಡಿ ಸೇದುತ್ತಾರ ಆದರೆ ಅವರು ಕೂಡಾ ನಿನ್ನಂತೆ ಇತರರಿಗೆ ಕಾಣದಂತೆ ಮರೆಯಲ್ಲಿ ಸೇದುತ್ತಾರ ಧೂಮಪಾನ ಮಹಿಳೆಯರಿಗೆ ಭೂಷಣವೆಂದು ನಿನ್ನ ಅಭಿಪ್ರಾಯವಾಗಿದ್ದರೆ ನಾಳೆ ಸಂಜೆ ಮಾರ್ಗೋಸಾ ರಸ್ತೆಯಲ್ಲಿ ಸಿಗರೇಟ್ ಹತ್ತಿಸು ಅದಕ್ಕಾಗಿ ಮನೆಗೆ ಬಂದು ಬಾಗಿಲು ಮುಚ್ಚಿ ಕೊಟಡಿಯಲ್ಲೇಕೆ ಕುಳಿತುಕೊಳ್ಳಬೇಕು ?"

" ನನಗೊಬ್ಬ ಶ್ರೀಮಂತ ಗಂಡ ಸಿಕ್ಕ, ಕೆಲಸ ಬಿಟ್ಟು ಕಾರಲ್ಲಿ ತಿರುಗಾಡುವಂತಾಗಲಿ, ಆಗ ಖಂಡಿತ ನೀನು ಹೇಳಿದಂತೆ ಮಾಡುತ್ತೇನೆ "

ಎಂದು ಆನಂದಪುತ್ರಿ ಹೇಳಿದ್ದಳು ಇಂದು ಲತಾಂಗಿ ಗೆಳತಿಯ ಆ ಮಾತುಗಳನ್ನು ನೆನಸಿಕೊಂಡು ತನ್ನಷ್ಟಕ್ಕೆ ತಾನೆ ನಕ್ಕಳು

" ಏಕೆ ನಗುತ್ತೀಯೆ ಲತಾ ? ನಿನಗೂ ಒಂದು ದಿನ ಅಭ್ಯಾಸ ವಾಗುತ್ತದೆ ಅದಿರಲಿ ಕಛೇರಿಯಲ್ಲಿ ಏನು ನಡೆಯಿತು ಹೇಳು ?"

ತಿರುಗಾಡಲು ಹೋಗಿದ್ದಾಗ ಲತಾಂಗಿ ಒಂದೆರಡು ಮಾತುಗಳಲ್ಲಿ ಟೆಲಿಫೋನ್ ಪ್ರಕರಣವನ್ನು ಸೂಚಿಸಿದ್ದಳು ಈಗ ಅದನ್ನು ವಿವರಿಸಿ ಕೊನೆಯಲ್ಲಿ ಹೇಳಿದಳು

" ಆಫೀಸಿಗೆ ಫೋನ್ ಮಾಡಕೂಡದೆಂದು ಅವರಿಗೆ ನಾನು ಮೊದಲೇ ಹೇಳಿದ್ದೆ ಶಿವಮೊಗ್ಗೆಯಿಂದ ಸ್ನೇಹಿತ ಬಂದ ಕೂಡಲೇ ಅದನ್ನು ಮರೆತು ಇಷ್ಟೊಂದು ರಗಳೆ ಮಾಡಿದರು ಇವರ ಸಂಗಡ ಬಾಳುವುದು ನನ್ನ ಹಣೆ ಬರಹ "

" ಯಾರು ಶಿವಮೊಗ್ಗೆಯ ಸ್ನೇಹಿತರು ?"

" ಅವನೊಬ್ಬ ಶ್ರೀಮಂತ, ಸುರೇಶ್ ಅಂತ ಹೆಸರು ತಂದೆಯ ಸ್ನೇಹಿತನಂತೆ ಈಗ ಮಗನ ಸ್ನೇಹವನ್ನು ಬೆಳಸಿಕೊಂಡಿದ್ದಾನೆ ಅವರನ್ನೊಮ್ಮೆ ಮನೆಗೆ ಕರೆಯ ಬೇಡಿರೆಂದು ನಾನು ಒಂದೆರಡು ಸಾರಿ ಹೇಳಿದೆ ಆದರೆ ಅವರಲ್ಲಿ ಕೇಳುತ್ತಾರ ನನ್ನ ಮಾತನ್ನು "

ಲತಾಂಗಿಯ ಬೇಸರದ ನುಡಿ ಕೇಳಿ ಪದ್ಮಾ ಮರುಗಿದಳು ಎದ್ದು ಗೆಳತಿಯ ಪಾರ್ಶ್ವದಲ್ಲಿ ಕುಳಿತುಕೊಂಡು ಕದಪುಗಳನ್ನು ಸವರುತ್ತಾ ಹೇಳಿದಳು.

''ನೀನು ಯೋಚಿಸಬೇಡ ನನ್ನ ಚಿನ್ನಾ ಎಲ್ಲಾ ಸರಿಹೋಗುತ್ತದೆ. ಜೋಷಿ ಇರುವಾಗ ನಿನಗೇನು ಭಯ ?''

'' ಜೋಷಿ ನನ್ನ ಭಾಗದ ದೇವರು ''

'' ದೇವರೂ ಅಲ್ಲ, ದಿಂಡಿರೂ ಅಲ್ಲ ಅವನು ನಿನ್ನನ್ನು ಮೋಹಿಸಿದ್ದಾನೆ, ಲತಾ. ಈ ರೂಪ ನೋಡಿದರೆ ಯಾರು ತಾನೆ ಬಯಸುವುದಿಲ್ಲ ''

ಎಂದು ಹೇಳಿ ಪದ್ಮಾ ಗೆಳತಿಯ ಕದಪುಗಳನ್ನು ಸ್ನೇಹದಿಂದ

ಮುದ್ದಿಸಿದಳು.

ಮೈಸೂರಲ್ಲಿ ತುಲಸಿ ತನ್ನನ್ನು ಅದೇ ರೀತಿ ಮುದ್ದಿಸಿದ್ದು ಲತಾಂಗಿಗೆ ನೆನಪಾಯಿತು ತುಲಸಿ ಮಧ್ಯದ ಅಮಲಲ್ಲಿದ್ದಳು ಧೂಮ ಪಾನ ದಿಂದಲೂ ಹೆಂಗಸರು ಅಮಲೇರುವರೇ ? ಎಂದು ಲತಾ ಯೋಚಿಸಿದಳು. ಪ್ರಕಟವಾಗಿ,

" ಬೇಡ ಪದ್ಮಾ ಹಾಗೆಲ್ಲ ಮಾಡಬೇಡ " – ಎಂದಳು

ಜೋಷಿ ಮತ್ತು ತನ್ನ ರಹಸ್ಯ ಪದ್ಮಳಿಗೆ ತಿಳಿದಿರಬಹುದೇ ಎಂಬ ಸಂದೇಹದಿಂದ ಪುನಃ ನುಡಿದಳು

" ಜೋಷಿಯ ವಿಚಾರವಾಗಿ ನೀನು ಹಾಗೆಲ್ಲಾ ಹೇಳಬಾರದು ಪದ್ಮಾ ಅವರು ವಯಸ್ಸಿನಲ್ಲಿ ನನಗಿಂತ ಎಷ್ಟೋ ಹಿರಿಯರು ನೋಡಿದರೆ ತಂದೆಯಂತೆ ಕಾಣಿಸುತ್ತಾರೆ ಕಷ್ಟದಲ್ಲಿ ಕೈಹಿಡಿದು ಕೆಲಸಕೊಟ್ಟರು ಅವರ ಉದ್ದೇಶವನ್ನು ಶಂಕಿಸುವುದು ಯಾವ ಧರ್ಮ ?"

" ವಯಸ್ಸು ಪ್ರೇಮಕ್ಕೆ ಅಡ್ಡಿಯಾಗುವುದಿಲ್ಲ ಲತಾ ನಾನು ಓದು ತ್ತಿದ್ದ ಶಾಲೆಯಲ್ಲಿ ಒಬ್ಬ ಪಾದ್ರಿಯಿದ್ದರು ಅವರು ಹುಡುಗಿಯರಿಗೆ ಏನು ಬುದ್ಧಿವಾದ ಹೇಳುತ್ತಿದ್ದರು ಗೊತ್ತೆ ? 'ಮದುವೆಯಾದರೆ ನಿಮಗಿಂತ ಹಿರಿಯ ರನ್ನು ಮದುವೆಯಾಗಿ Boy friendsನ ನಂಬಿ ಮೋಸಹೋಗಬೇಡಿ ಗಂಡ ದುಡಿದು ನಿಮಗೆ ಹಾಕುವನೇ ಅಥವಾ ನೀವು ದುಡಿದು ಗಂಡನಿಗೆ ಹಾಕ ಬೇಕೇ ಎಂಬುದೇ ಮದುವೆಯಲ್ಲಿ ಯೋಚಿಸಬೇಕಾದ ವಿಚಾರ' ಎಂದು ನನ್ನ ಗೆಳತಿಯರಲ್ಲಿ ಕೆಲವರು ಆ ಬುದ್ಧಿವಾದವನ್ನು ಉಪೇಕ್ಷಿಸಿ ಈಗ ಕಷ್ಟಪಡು ತ್ತಿದ್ದಾರೆ."

ಲತಾ ಉತ್ತರ ಕೊಡದಿದ್ದುದನ್ನು ಕಂಡು ಪದ್ಮಾ ಆ ಕಡೆ ತಿರುಗಿದಳು ಕಛೇರಿಯಲ್ಲಿ ನಡೆದ ಘಟನೆಗಳು, ಹೊತ್ತಾಗಿ ಊಟ ಮಾಡಿದ್ದು, ತಿರುಗಾಡಿ ಬಂದದ್ದು ಈ ಎಲ್ಲ ಕಾರಣಗಳಿಂದ ಲತಾ ಶ್ರಾಂತಳಾಗಿದ್ದಳು ಮೃದುವಾದ ಹಾಸಿಗೆಯ ಮೇಲೆ ಮಲಗಿದಾಗ ಕಣ್ಣುಗಳು ಮುಚ್ಚಿದವು ಮಾತು ಕೇಳು ತ್ತಿದ್ದಂತೆ ಜೊಂಪು ಹತ್ತಿತು

ಪದ್ಮಾ ಸ್ವಲ್ಪ ಹೊತ್ತು ಸುಮ್ಮನಿದ್ದಳು ಅನಂತರ ಮೃದುವಾಗಿ ನಕ್ಕು ಕೈಯಲ್ಲಿದ್ದ ಸಿಗರೇಟನ್ನು ಲತಾನ ತುಟಿಗಳಿಗಿಟ್ಟಳು. ಲತಾ ಉಸಿರು ಎಳೆ

ದಂತೆ ಹೊಗೆ ಗಂಟಲು ಹೊಕ್ಕು ಕೆಮ್ಮುತ್ತಾ ಹಠಾತ್ತನೆ ಎಚ್ಚರವಾಗಿ ಎದ್ದು ಕುಳಿತಳು

"ಏನು ಮಾಡಿದೆ ಪದ್ಮಾ!" ಎಂದು ಹೇಳುತ್ತಿದ್ದಂತೆ ಕೆಮ್ಮು ಹೆಚ್ಚಿ ಗಂಟಲು ಕಟ್ಟಿತು ತಿಸರು ಮುಸುರಾಗಿ ಪುನಃ ಹಾಸಿಗೆಯ ಮೇಲೆ ಬಿದ್ದಳು. ಪದ್ಮಾ ನೀರು ತಂದು ಕುಡಿಸಿದ ಮೇಲೆ ಸ್ವಲ್ಪ ಸಮಾಧಾನಕ್ಕೆ ಬಂದಳು

"ನೀನು ಬಹಳ ತುಂಟಳಾದೆ ಪದ್ಮಾ"–ಎಂದಳು

"ಸಿಗರೇಟ್ ವಾಸನೆಗೇ ನೀನು ಹೀಗಾಗುವೆಯೆಂದು ಯಾರು ತಿಳಿದಿದ್ದರು? ಸ್ವಲ್ಪ ಹೊತ್ತು ವಿಶ್ರಮಿಸಿಕೋ ಒಂದು ಔಷಧ ಕೊಡುತ್ತೇನೆ. ಆ ಮೇಲೆ ಮನೆಗೆ ಹೋಗುವೆಯಂತೆ"

ಎಂದು ಹೇಳಿ ಪದ್ಮಾ ಅಲಮಾರಿಂದ ಬ್ರಾಂದಿ ಬಾಟಲ್ ತೆಗೆದು ಸ್ವಲ್ಪ ನೀರಲ್ಲಿ ನಾಲ್ಕು ಚಮಚದಷ್ಟು ಹಾಕಿ ಕುಡಿಯಲು ಕೊಟ್ಟಳು

ಲತಾ ಗ್ಲಾಸ್ ಕೈಗೆ ತೆಗೆದುಕೊಂಡು ವಾಸನೆ ನೋಡಿ ಮುಖ ಸೊಟ್ಟಗೆ ಮಾಡಿ "ನಾನು ಕುಡಿಯುವುದಿಲ್ಲ" ಎಂದಳು

"ಯಾವಾಗಲೂ ಕುಡಿದಿಲ್ಲವೇ?"

"ಮಂಗಳೂರಲ್ಲಿ ಶೀತ ಹಿಡಿದಾಗ ತಂದೆಯವರೇ ಒಂದೆರಡು ಸಾಂ ಕೊಟ್ಟಿದ್ದಾರೆ"

"ಹಾಗಾದರೆ ಸಂಕೋಚವೇಕೆ? ಕುಡಿದುಬಿಡು. ಆರಿಹೋಗುತ್ತದೆ."

ಲತಾ ಕುಡಿದಳು ದೇಹದಲ್ಲಿ ಶಕ್ತಿ ಬಂದಂತೆ ಭಾಸವಾಯಿತು. ಎದ್ದು ನಿಂತು "ನಾನಿನ್ನು ಹೋಗುತ್ತೇನೆ, ಪದ್ಮಾ" ಎಂದಳು.

"ನಾನೂ ಸಂಗಡ ಬರುತ್ತೇನೆ" ಎಂದು ಪದ್ಮಾ ಹೊರಟಳು.

ಇಬ್ಬರ ಮನೆಗಳೂ ಒಂದೇ ರಸ್ತೆಯಲ್ಲಿ ಅರ್ಧ ಫರ್ಲಾಂಗ್ ದೂರದಲ್ಲಿದ್ದವು ಕೆಲಸದವಳು ಕಾದು ಹೊರಗೆ ಕುಳಿತಿದ್ದಳು. ಲತಾಂಗಿಯನ್ನು ಮನೆಯಲ್ಲಿ ಬಿಟ್ಟು ಪದ್ಮಾ ಹಿಂದಿರುಗಿದಳು ಉಡುಪು ಬದಲಾಯಿಸುವಷ್ಟು ಸಹನೆಯೂ ಲತಾಂಗಿಗಿರಲಿಲ್ಲ. "ನನಗೆ ನಿದ್ರೆ ಬರುತ್ತಿದೆ. ಬಾಗಿಲು ಹಾಕಿಕೊಂಡು ನೀನೂ ಮಲಗು. ಅವರು ಬಂದರೆ ಬಾಗಿಲು ತೆಗೆದುಕೊಂಡು ಊಟಮಾಡುವಂತೆ ಹೇಳು" ಎಂದು ದಾಸಿಗೆ ತಿಳಿಸಿ ಮಲಗಿದಳು

ಪದ್ಮಾ ಕೊಟ್ಟ ಪಾನೀಯದ ಅಮಲಿನಿಂದ ಅವಳಿಗೆ ನಿದ್ದೆ ಬಂದಿತು.

— ೫ —

ಮಂಗೇಶ ಮನೆಗೆ ಬಂದಾಗ ರಾತ್ರಿ ೧೦ ಗಂಟೆಯಾಗಿತ್ತು. ಸಂಗಡ ಷರೀಫ್‌ನೂ ಇದ್ದ. ಮಂಗೇಶ ಗೆಳೆಯನನ್ನು ಹೊರಗಿನ ಕೊಟಡಿಯಲ್ಲಿ ಕುಳ್ಳಿರಿಸಿ, ಒಳಗೆ ಹೋಗಿ ಕೆಲಸದವಳಿಗೆ ಮನೆಗೆ ಹೋಗುವಂತೆ ಹೇಳಿದ.

ಟೆಲಿಫೋನಿನಲ್ಲಿ ನಡೆದ ಮಾತು ಕಥೆಯಿಂದ ಅವನಿಗೆ ಹೆಂಡತಿಯ ಮೇಲೆ ಸ್ವಲ್ಪ ಕೋಪ ಬಂದಿತ್ತು. ಆದರೆ ಎದುರಿಸಿ ಮಾತಾಡುವ ಧೈರ್ಯ ವಿರಲಿಲ್ಲ. ಹಾಲಲ್ಲಿ ಬಟ್ಟೆ ತೆಗೆದಿಟ್ಟು ಮಲಗುವ ಮನೆಯ ಬಾಗಿಲಲ್ಲಿ ನಿಂತು ಇಣುಕಿ ನೋಡಿದ. ಲತಾ ನಿದ್ರೆ ಮಾಡುತಿದ್ದಂತೆ ಕಂಡಿತು. ಮಾತಾಡದೆ ಬಚ್ಚಲು ಮನೆಗೆ ಹೋಗಿ ಕೈ ಕಾಲುಗಳನ್ನು ತೊಳೆದು, ತಾನೇ ಬಡಿಸಿ ಕೊಂಡು ಊಟ ಮಾಡಿದ. ಮೇಜಿನ ಮೇಲೆ ಬಿಸ್ಕತ್, ಹಣ್ಣು ಹಾಗೆಯೇ ಇದ್ದದ್ದನ್ನು ಅವನು ಗಮನಿಸಲಿಲ್ಲ.

ಊಟಮಾಡಿ ಪುನಃ ಬಂದಾಗ ಲತಾಂಗಿ ಎಚ್ಚರಗೊಂಡಿದ್ದಳು. "ರೂಮಲ್ಲಿ ಯಾರಿದ್ದಾರೆ ?" ಎಂದು ಪತಿಯನ್ನು ಕೇಳಿದಳು.

"ಷರೀಫ್ ಅವರು ರಾತ್ರಿ ಇಲ್ಲೇ ಮಲಗುತ್ತಾರೆ. ರೇಸಿನ ಗಲಾಟೆ ಯಿಂದ ಹೋಟಲಲ್ಲಿ ಸ್ಥಳ ಸಿಕ್ಕಲಿಲ್ಲ."

"ಇವರನ್ನೆಲ್ಲಾ ನೀವೇಕೆ ಮನೆಗೆ ಕರೆತರುತ್ತೀರಿ ?"

ಲತಾ ಬೇಸರದಿಂದ ಹೇಳಿದಳು.

"ಬಂದವರನ್ನು ಬೇಡವೆನ್ನುವುದು ಸಾಧ್ಯವೇ ? ತಂದೆಯಿದ್ದಾಗ ಅವರು ನಮ್ಮ ಮನೆಯಲ್ಲೇ ಇಳಿದುಕೊಳ್ಳುತ್ತಿದ್ದರು."

ಲತಾಂಗಿ ಉತ್ತರ ಕೊಡಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಮಂಗೇಶ "ಸಂಜೆ ದಂಡಿಗೆ ಸಿನಿಮಾಕ್ಕೆ ಹೋಗಿದ್ದೆವು. ನೀನು ಬಾರದಿದ್ದು ದಕ್ಕೆ ಷರೀಫರು—"

ಎಂದು ಏನೋ ಹೇಳಲು ಪ್ರಾರಂಭಿಸಿದ. ಲತಾಂಗಿ ಅಡ್ಡಬಂದು "ನನ್ನನ್ನು ಸುಮ್ಮನೆ ಬೇಜಾರು ಪಡಿಸಬೇಡಿ. ನಿಮ್ಮ ಟೆಲಿಫೋನಿಂದ ಕಛೇರಿಯಲ್ಲಿ ಆದ ರಗಳೆ ನನಗೆ ತಲೆ ಚಿಟ್ಟು ಹಿಡಿಸಿದೆ" ಎಂದಳು.

"ಹಾಗಾದರೆ ನಾನು ಟೆಲಿಫೋನ್ ಮಾಡಿದ್ದು ತಪ್ಪೇ ?"

“ ನಾನು ಹಾಗೆ ಹೇಳಲಿಲ್ಲ ಮದ್ರಾಸಿನಿಂದ ಪತ್ರಿಕೆಯ ಮಾಲಿಕರು ಬಂದಿದ್ದಾರೆ ಮಕ್ಕಳ ಮಾಸಪತ್ರಿಕೆಯೊಂದನ್ನು ಪ್ರಾರಂಭಿಸುವ ಯೋಚನೆ ಯಿದೆ. ಆ ಸಂಬಂಧವಾದ ಮಾತುಕತೆ ನಡೆಯುತ್ತಿದ್ದಾಗಲೆ ಮೇಲಿಂದ ಮೇಲೆ ನಿಮ್ಮ ಕರೆ ಕೇಳಿಬಂತು ”

“ ನೀನು ಯಾವುದನ್ನೂ ತಿಳಿಸದೆ ಟೆಲಿಫೋನ್ ಕೆಳಗಿಟ್ಟಿದ್ದರಿಂದ ನಾನು ಪುನಃ ಕರೆಯಬೇಕಾಯಿತು ”

“ ಅದೇ ನಿಮ್ಮ ಮೊದಲ ಅವಿವೇಕ ಕಛೇರಿಯಲ್ಲಿ ·ಕೆಲಸ ಮಾಡು ವಾಗಲೂ ನಾನು ನಿಮ್ಮ ಪತ್ನಿಯೆಂಬುದನ್ನು ಮರೆತುಬಿಡಿ ನನ್ನ ಕೆಲಸ, ಸಂಸಾರ ಇವೆರಡು ಪ್ರತ್ಯೇಕ ವಿಚಾರಗಳು ಸಾಧ್ಯವಿದ್ದಮಟ್ಟಿಗೆ ಒಂದ ಕ್ಕೊಂದು ಸಂಬಂಧವಿಲ್ಲದಿರುವುದು ನನ್ನ ಇಚ್ಛೆ ”

“ ನೀನು ಹೀಗಾಗುವೆಯೆಂದು ತಿಳಿದೇ ನಾನು ಕೆಲಸಕ್ಕೆ ಸೇರಲು ಅಡ್ಡಿ ಬಂದದ್ದು ‘ ವಿಶ್ವಮಿತ್ರ ’ ಕಛೇರಿಯ ವಿಚಾರದಲ್ಲಿ ನನಗೆ ಮೊದ ಲಿಂದ ಸಂದೇಹ ಅಲ್ಲಿ ಏನೋ ನಡೆಯುತ್ತಿದೆ ಜೋಷಿಯನ್ನು ನೋಡಿ ದರೆ—”

“ ಸುಮ್ಮನಿರಿ ಅವರ ಹೆಸರೆತ್ತುವ ಯೋಗ್ಯತೆಯೂ ನಿಮಗಿಲ್ಲ.”

ಮಂಗೇಶನ ಕೋಪ ಇಮ್ಮಡಿಯಾಯಿತು “ ಯೋಗ್ಯತೆ ಇದೆಯೋ ಇಲ್ಲವೋ ನಾಳೆ ನಾನೇ ಬಂದು ನೋಡುತ್ತೇನೆ” ಎಂದು ಅರಚಿದ

ಲತಾ ಬೆಚ್ಚಿ ಹಾಸಿಗೆಯಿಂದೆದ್ದಳು ಪಕ್ಕದ ಮೇಜಿನ ಮೇಲಿದ್ದ ತಟ್ಟೆ ಕೆಳಗುರುಳಿತು. ಶಬ್ದವಾಯಿತು ಗಂಡನಷ್ಟೇ ದೊಡ್ಡ ದನಿಯಿಂದ ಅವಳು,

“ ನಿಮ್ಮ ಮಾತಿಗೆ ನಾನು ಹೆದರುವೆನೆಂದು ಭಾವಿಸಿದ್ದರೆ ಮರೆತುಬಿಡಿ. ಅಗತ್ಯವಾಗಿ ನಾಳೆ ಕಛೇರಿಗೆ ಬನ್ನಿ ಎಲ್ಲರ ಸಮಕ್ಷಮ ನಮ್ಮ ವಿಚಾರ ಇತ್ಯರ್ಥವಾಗಲಿ ”

ಎಂದು ಹೇಳಿದಳು ಮಾತಾಡುತ್ತಿದ್ದಂತೆ ಷರೀಫ್ ಹಾಲಿಗೆ ಬಂದು “ ಇದೇನು ಮಂಗೇಶರಾವ್. ನೀವು ಹೀಗೆಲ್ಲಾ ಮಾತಾಡುವುದನ್ನು ಯಾರು ತಾನೆ ಒಪ್ಪುತ್ತಾರೆ. ನೀವೇ ಕೆಲಸಕ್ಕೆ ಸೇರಿಸಿದ್ದಾಗಿ ಹೇಳಿದಿರಿ. ಈಗ ನೀವೇ ವಿರೋಧಿಸುತ್ತೀರಾ ?”

"ನಾನು ಕೆಲಸಕ್ಕೆ ಸೇರಿಸಿದ್ದು ಸಂಪಾದನೆಗಾಗಿ ಜೋಷಿಯು ಸೂಳೆಯಾಗಿ ಮೆರೆಯುವುದಕ್ಕಲ್ಲ"

ಮಂಗೇಶ ಬಿರುದನಿಯಿಂದ ಉತ್ತರ ಕೊಟ್ಟ

ಲತಾಂಗಿ ಉದ್ರಿಕ್ತೆಯಾದಳು ಪದ್ಮಳ ಮನೆಯಲ್ಲಿ ಕುಡಿದ ಪಾನೀಯ ಅವಳಿಗೆ ಉತ್ತೇಜನ ಕೊಟ್ಟಿತು ಮಂಚದಿಂದಿಳಿದು ಬಾಗಿಲ ಹತ್ತಿರಬಂದು ಕಿಡಿಗಳನ್ನು ಕಾರುವ ಕಣ್ಣುಗಳಿಂದ ಪತಿಯ ಮುಖ ನೋಡುತ್ತಾ ಹೇಳಿದಳು,

"ಅಂತಹ ಮಾತುಗಳನ್ನು ನಿಮ್ಮ ತಾಯಿ ತಂಗಿಯರಿಗೆ ಹೇಳಿ. ನಾನು ಸೂಳೆಯ ಮಗಳಾದರೂ ಗರತಿಯಂತೆ ನಡೆಯುತ್ತೇನೆ ಜೋಷಿಯ ಸೂಳೆಯಾಗಿ ಮೆರೆಯುವುದು ನನ್ನಿಷ್ಟವಾದಾಗ ಪ್ರಕಟವಾಗಿ ನಿಮಗೆ ತಿಳಿಸುತ್ತೇನೆ. ಕಳ್ಳತನದಲ್ಲಿ ಏನೂ ಮಾಡುವುದಿಲ್ಲ"

ಎಂದು ಹೇಳಿ ಮಂಚದ ಹತ್ತಿರಹೋಗಿ ದಿಂಬಿನ ಮೇಲೆ ತಲೆಯಿಟ್ಟು ಅಳುವುದಕ್ಕೆ ಪ್ರಾರಂಭಿಸಿದಳು.

ಮಂಗೇಶ ನಿರುತ್ತರನಾದ ಆಗ ಷರೀಪ್ ಅವನ ಸಹಾಯಕ್ಕೆ ಬಂದು "ಎಲ್ಲ ತಪ್ಪು ನಿನ್ನದು ಮಂಗೇಶರಾವ್ ಹಿಂದು ಮುಂದು ನೋಡದೆ ಬಾಯಿ ಹೋದಂತೆ ಮಾತಾಡಿ ಬಿಡುತ್ತೀರಿ ಹೆಂಗಸಿಗೆ ಸಲ್ಲಬೇಕಾದ ಗೌರವ ಕೂಡಾ ನೀವು ಕೊಡುತ್ತಿಲ್ಲ ನೀವು ಇವರ ಕ್ಷಮೆ ಬೇಡಿ ಸಮಾಧಾನ ಪಡಿಸಬೇಕು. ಜೋಷಿಯ ಮೇಲೆ ಸಂದೇಹ ಪಡಲು ಕಾರಣವೇನಿದೆ?" ಎಂದು ಹೇಳಿ ಹೊರಗೆ ಹೋದ

ಮಂಗೇಶನಿಗೆ ತೊಂದರೆಗಿಟ್ಟಿತು. ಅವನು ಸಮೀಪಕ್ಕೆ ಹೋದ ಕೂಡಲೆ ಲತಾ ಅಳುವನ್ನು ತಡೆದು "ಎಲ್ಲರ ಮುಂದೆ ಈ ರೀತಿ ಅಪಮಾನ ಪಡಿಸುವುದಕ್ಕೇ ನೀವು ನನ್ನನ್ನು ಮದುವೆಯಾದದ್ದು. ನಿಮಗಿಷ್ಟವಿಲ್ಲದಿದ್ದರೆ ಹೇಳಿಬಿಡಿ ತಂದೆಯ ಮನೆಗೆ ಹೋಗುತ್ತೇನೆ"–ಎಂದಳು

ಲತಾಂಗಿಯ ಕೋಪ ಕ್ಷಣಾರ್ಧದಲ್ಲಿ ಅಳುವಾಗಿ ಪರಿಣಮಿಸಿದುದು ಮಂಗೇಶನಿಗೆ ಆಶ್ಚರ್ಯವಾಗಿ ಕಂಡಿತು ಅನುನಯದ ಮಾತುಗಳಿಂದ ಸಮಾಧಾನಪಡಿಸಲು ಪ್ರಯತ್ನಿಸಿದ. ಲತಾಂಗಿಯ ಅಳುವು ಹೆಚ್ಚಿತು. ಕೊನೆಗೆ ಮೂರ್ಛಿತೆಯಂತೆ ನಿಶ್ಚೇಷ್ಟಿತೆಯಾಗಿ ಬಿದ್ದುಬಿಟ್ಟಳು. ಈ ಸಾರಿ ಅವನಿಗೆ ನಿಜವಾಗಿ ಭಯವಾಯಿತು. ರೂಮಿಗೆ ಹೋಗಿ ಷರೀಫನಿಗೆ

ತಿಳಿಸಿದ

"ಹಿಸ್ಟೀರಿಯಾ ಆಫೀಸಿನಲ್ಲಿ ಆದ ರಂಪ ತಿಳಿದೂ ಮನೆಗೆ ಬಂದು, ನೀವು ಈ ರಗಳೆಗೆ ಪ್ರಾರಂಭ ಮಾಡಿದ್ದು ಸರಿಯಲ್ಲ ಇದನ್ನು ಸ್ವಲ್ಪ ಕುಡಿಸಿ ಸರಿ ಹೋಗುತ್ತೆ "

ಎಂದು ಹೇಳಿ ಷರೀಫ್ ಪೆಟ್ಟಿಗೆಯಿಂದ ಬ್ರಾಂದಿ ಬಾಟಲ್ ತೆಗೆದು ಗಾಜಿನ ಬಟ್ಟಲಲ್ಲಿ ಬಗ್ಗಿಸಿ ಕೊಟ್ಟ

ಮಂಗೇಶ ಬಟ್ಟಲನ್ನು ತೆಗೆದುಕೊಂಡು ಹೋದಾಗ ಲತಾ ನಿಶ್ಚೇಷ್ಟಿತೆ ಯಾಗಿದ್ದಳು ತುಟಿಗಳಿಗೆ ಬಟ್ಟಲು ಹಿಡಿದು ಒಂದು ಗುಟುಕು ಕುಡಿಸಿದ. ಕಣ್ಣು ತೆರೆದಳು ಮುಖದಲ್ಲಿ ಅಸ್ಫುಟವಾದ ಮುಗುಳು ನಗೆ ಮೂಡಿತು ತಾನೇ ಬಟ್ಟಲನ್ನು ತೆಗೆದುಕೊಂಡು ಒಂದೇ ಸಾರಿಗೆ ಬಟ್ಟಲಲ್ಲಿದ್ದುದೆಲ್ಲವನ್ನೂ ಕುಡಿದು ಬಿಟ್ಟಳು

"ಇನ್ನಷ್ಟು ಕೊಡಲೇ ?"—ಮಂಗೇಶ ಕೇಳಿದ

ಪದ್ಮಳ ಮನೆಯಲ್ಲಿ ತೆಗೆದುಕೊಂಡದ್ದೇ ಲತಾಗೆ ಹೆಚ್ಚಾಗಿತ್ತು. ಅದರ ಅಮಲು ಇಳಿಯುವ ಮೊದಲೇ ಮತ್ತಷ್ಟು ಕುಡಿದದ್ದರಿಂದ ಅವಳು ಜ್ಞಾನಶೂನ್ಯೆಯಾಗಿ ತಾನೇನು ಹೇಳುತ್ತಿರುವೆನೆಂಬುದನ್ನು ತಿಳಿಯದೆ "ತಂದು ಕೊಡಿ" ಎಂದಳು

ಮಂಗೇಶ ಪುನಃ ಷರೀಫನ ಹತ್ತಿರ ಹೋಗಿ ಬಟ್ಟಲನ್ನು ತುಂಬಿ ತಂದ. ಲತಾ ತೆಗೆದುಕೊಂಡು ಕುಡಿದಳು ಚೆಲ್ಲಿ ಉಟ್ಟಿದ್ದ ಜಾರ್ಜೆಟ್ ಸೀರೆ ನೆನೆದುದನ್ನೂ ಅವಳು ಗಮನಿಸಲಿಲ್ಲ ಪತಿಯ ಕೈ ಹಿಡಿದಳೆದು ಪಾರ್ಶ್ವದಲ್ಲಿ ಕುಳ್ಳಿರಿಸಿಕೊಂಡಳು ಉಡಿಗೆ ಅಸ್ತವ್ಯಸ್ತವಾಗಿತ್ತು ಹೆರಳು ಬಿಚ್ಚಿ ನೀಲ ಭ್ರಮರಗಳಂತಿದ್ದ ಕೇಶರಾಶಿ ದಿಂಬಿನ ಮೇಲೆ ಹರಡಿತ್ತು

ಷರೀಫ್ ಹೊರಗೆ ನಿಂತು ನೋಡುತ್ತಿದ್ದ ಚಿನ್ನದ ಪುತ್ಥಲಿಯ ಮೇಲೆ ಗುಲಾಬಿಯ ರೇಖೆಗಳನ್ನು ಹರಡಿದ್ದಂತೆ ಅವನಿಗೆ ಕಾಣಿಸಿತು

ಲತಾ ಪತಿಯನ್ನು ಆಲಿಂಗಿಸಿ ಚುಂಬಿಸಿದಳು

—೩—

ಮಂಗಳೂರಲ್ಲಿ ತಂದೆಯ ಮನೆಯಲ್ಲಿದ್ದಾಗ ನೆಗಡಿಯಾದರೆ ಸ್ವಲ್ಪ ಬ್ರಾಂದಿ ಕೊಡುತ್ತಿದ್ದರೆಂದು ಲತಾಂಗಿ ಹೇಳಿದುದರಲ್ಲಿ ಸತ್ಯ ಅಸತ್ಯಗಳೆರಡೂ ಇದ್ದವು.

ಲತಾಂಗಿಯ ತಾಯಿ ರತ್ನಮ್ಮ ಗಂಗೂಲಿಯಲ್ಲಿದ್ದಾಗ ವೇಶ್ಯಾವೃತ್ತಿಯೊಡನೆ ಮಧ್ಯಪಾನವನ್ನೂ ಕಲಿತಿದ್ದಳು ಅವಳ ಮನೆಗೆ ಬರುತ್ತಿದ್ದ ಗಂಡಸರಲ್ಲನೇಕರಿಗೆ ಈ ಚಟ ಇದ್ದುದ್ದರಿಂದ ವಾರಕ್ಕೆ ಮೂರು ನಾಲ್ಕು ದಿನಗಳಾದರೂ ಪಾನಗೋಷ್ಠಿ ನಡೆಯುತ್ತಿತ್ತು ಆ ಸಂದರ್ಭಗಳಲ್ಲಿ ಮಲಗಿ ನಿದ್ದೆ ಮಾಡಲೆಂದು ರತ್ನಮ್ಮ ಮಗಳಿಗೂ ಸ್ವಲ್ಪ ಕುಡಿಸುತ್ತಿದ್ದಳು

ಮಂಗಳೂರಿಗೆ ವಿಠಲರಾಯರ ಆಶ್ರಯಕ್ಕೆ ಬಂದಾಗ ಅವರು ಇದನ್ನು ಕಂಡು ಬೆದರಿ ಅಭ್ಯಾಸ ತಪ್ಪಿಸಲು ಸರ್ವ ಪ್ರಯತ್ನಗಳನ್ನೂ ಮಾಡಿದರು ಮಗಳನ್ನು ಹಾಳುಮಾಡುತ್ತಿರುವೆಯೆಂದು ರತ್ನಮ್ಮನನ್ನು ಬೈದರು ಮಗಳ ಹಿತದೃಷ್ಟಿಯಿಂದ ತಮ್ಮ ಕುಡಿತವನ್ನೂ ಕಡಿಮೆ ಮಾಡಿದರು ಶೀತವಾದಾಗ ಒಂದೆರಡು ಸಾರಿ ಮಾತ್ರ ಔಷಧಿಯಂತೆ ನೀರಲ್ಲಿ ಬೆರಸಿ ಸ್ವಲ್ಪ ಕೊಡುತ್ತಿದ್ದರು

ಕೆಲವು ತಿಂಗಳ ಮೇಲೆ ಪುನಃ ಪದ್ಮಳ ಮನೆಯಲ್ಲಿ ಪಾನ ಮಾಡಿದಾಗ ಲತಾಂಗಿಗೆ ಕೂಡಲೇ ಅಮಲೇರದಿದ್ದುದು ಈ ಕಾರಣದಿಂದಲೇ ಮನೆಗೆ ಬರುವಷ್ಟರಲ್ಲಿ ಅದು ಅವಳಿಗೆ ಉತ್ತೇಜನಕಾರಿಯಾಗಿ ಪರಿಣಮಿಸಿತು ಮಂಗೇಶನ ಮಾತುಗಳಿಂದ ಉದ್ರಿಕ್ತೆಯಾಗಿ ಉತ್ತರ ಕೊಟ್ಟಳು ಕೊನೆಯಲ್ಲಿ ಅಮಲಿಳಿದು ತಾನೇನು ಮಾಡುತ್ತಿರುವೆನೆಂಬುದರ ಅರಿವಾದಾಗ ಅತ್ತುಬಿಟ್ಟಳು ಸಮಾಧಾನಪಡಿಸಲು ಮಂಗೇಶ ಪ್ರಯತ್ನಿಸಿದಾಗ ಅವನ ವಿಚಾರದಲ್ಲಿ ಅಂಕುರಿಸಿದ್ದ ವಿಕರ್ಷಣೆ ಪುನಃ ಜಾಗರಿತವಾಯಿತು ಮಂಗೇಶ ಅಷ್ಟಕ್ಕೆ ಸುಮ್ಮನಾಗಿದ್ದರೆ ಮುಂದಿನ ಅನರ್ಥ ತಪ್ಪುತ್ತಿತ್ತು. ಆದರೆ ಕರ್ಮ ವಿಪಾಕದಿಂದ ಅವನ ಉದ್ಯಮ ಮೊದಲೇ ಅಪಾಯದ ಮಾರ್ಗ ಹಿಡಿದದ್ದರಿಂದ ಅವನು ಪರೀಕ್ಷಣ ಸಲಹೆ ಕೇಳಿದನು.

ಎರಡನೆಯ ಸಾರಿ ಪಾನ ಮಾಡಿದಾಗ ಲತಾಂಗಿಯ ಉದ್ರೇಕ

ತೃಪ್ತಿಯಲ್ಲಿ ಪರಿಣಮಿಸಿತು. "ಇನ್ನಷ್ಟು ತಂದು ಕೊಡಲೇ?" ಎಂದು ಪತಿ ಕೇಳಿದಾಗ ಸಂತೋಷದಿಂದ ಸಮ್ಮತಿ ಸೂಚಿಸಿ ತಲೆಯಾಡಿಸಿದಳು. ಮೂರನೆಯ ಪಾನದ ಅಮಲಲ್ಲಿ ಅವಳ ಆ ಸಂತೋಷ ವಿಲಾಸಕ್ಕೆ ಪರಿವರ್ತಿತ ವಾಯಿತು ಪತಿಯ ಮೇಲಿನ ಅಸಮಾಧಾನ ವಿದ್ವೇಷಗಳನ್ನು ಮರೆತು ಕಾಮುಕತೆಯಿಂದ ಆಲಿಂಗಿಸಿದಳು.

ಚುಂಬನದಿಂದ ಬಿಡಿಸಿಕೊಂಡು ಮಂಗೇಶ ತಲೆಯೆತ್ತಿದಾಗ ಹಾಲಲ್ಲಿ ಷರೀಫ್ ನಿಂತಿದ್ದುದನ್ನು ನೋಡಿದ ಎದ್ದು ಹೊರಗೆ ಬಂದು ಮಲಗುವಮನೆಯ ಬಾಗಿಲನ್ನು ಮುಚ್ಚಿ, "ಈಗ ತಾನೆ ನಿದ್ದೆ ಬಂದಂತಿದೆ ಬನ್ನಿ ರೂಮಿಗೆ ಹೋಗೋಣ" ಎಂದು ಹೇಳಿದ ಪ್ರಜ್ಞಾಶೂನ್ಯಳಾದ ಲತಾ ಇದೊಂದನ್ನೂ ಗಮನಿಸಲಿಲ್ಲ.

ರೂಮಲ್ಲಿ ಇಬ್ಬರೂ ಕುಳಿತುಕೊಂಡರು

"ನೋಡಿದಿರಾ ಮಂಗೇಶ್, ಈ ಔಷಧದ ಮಹಿಮೆ ಹೇಗಿದೆ!" ಎನ್ನುತ್ತಾ ಷರೀಫ್ ಎರಡು ಗ್ಲಾಸುಗಳನ್ನು ಮೇಜಿನ ಮೇಲೆ ತೆಗೆದಿಟ್ಟು ಅರ್ಧದಷ್ಟು ತುಂಬಿ "ತೆಗೆದುಕೊಳ್ಳಿ" ಎಂದ

"ನನಗಿಷ್ಟು ಬೇಡಾ ಸಾರ್"—ಎಂದು ಮಂಗೇಶ್ ತನ್ನ ಬಟ್ಟಲಿನ ಮಧ್ಯದ ಅರ್ಧ ಭಾಗವನ್ನು ಷರೀಫನ ಬಟ್ಟಲಿಗೆ ಹಾಕಿದ. ಇಬ್ಬರೂ ಗ್ಲಾಸುಗಳನ್ನು ತಗಲಿಸಿ ಕುಡಿದರು

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ ಅನಂತರ ಷರೀಫ್ ಬಟ್ಟಲನ್ನು ಪುನಃ ತುಂಬಿಸಿಕೊಂಡು ಅಮಲಿಂದ ಕೆಂಪೇರಿದ ಕಣ್ಣುಗಳಿಂದ ಮಂಗೇಶನ ಮುಖ ನೋಡುತ್ತಾ "ನೀನಿಲ್ಲೇ ಮಲಗಿಬಿಡು, ಮಗು" ಎಂದ.

"ನೀವು?"

ಷರೀಫ್ ಬಟ್ಟಲು ಬರಿದು ಮಾಡಿ "ನಾನೂ ಮಲಗುತ್ತೇನೆ" ಎಂದು ತೂರಾಡುತ್ತಾ ಎದ್ದು ನಿಂತ.

ಮಂಗೇಶ ಷರೀಫನ ಭುಜ ಹಿಡಿದು ಕುರ್ಚಿಯ ಮೇಲೆ ಕುಳ್ಳಿರಿಸಿ "ನೀವಿಲ್ಲೇ ಇರಿ. ಬರುತ್ತೇನೆ" ಎಂದು ಹೇಳಿ ಪುನಃ ಒಳಗೆ ಹೋದ.

ಲತಾಂಗಿಗೆ ಅಮಲು ಹತ್ತಿ ನಿದ್ರೆ ಬಂದಿತ್ತು. ತುಟಿಗಳ ಮಂದಹಾಸ

ಸಂಪೂರ್ಣವಾಗಿ ಅಳಿಸಿರಲಿಲ್ಲ ಉಡವು ಬದಲಾಯಿಸದೆ ಅಂದು ಪ್ರಾತಃಕಾಲ ಉಟ್ಟ ಗುಲಾಬಿ ರಂಗಿನ ಜಾರ್ಜೆಟ್ ಸೀರೆಯಲ್ಲೇ ಇದ್ದುದನ್ನು ಆಗ ಅವನು ಗಮನಿಸಿದ ಈ ಅಜಾಗರೂಕತೆಯ ಕಾರಣವೇನೆಂದು ಅಚ್ಚರಿಗೊಂಡು, ಅಸ್ತವ್ಯಸ್ತವಾಗಿದ್ದ ಉಡುಪನ್ನು ಸರಿಪಡಿಸಿ ಶಾಲು ತೆಗೆದು ಹೊದ್ದಿಸಿದ.

ಲತಾ ಕನಸು ಕಾಣುತ್ತಿದ್ದಳು

*    *    *    *

ಬೃಂದಾವನದಂತಹ ಮನಮೋಹಕ ಉದ್ಯಾನ ನಾಲ್ಕು ಕಡೆ ಪುಷ್ಪಿತ ತರುಲತೆಗಳು, ರಂಗುರಂಗಾದ ದೀಪಮಾಲೆ, ಹರಿಯುವ ನೀರು, ಚಿತ್ರ ವಿಚಿತ್ರವಾದ ಕಾರಂಜಿಗಳು ಆ ನಂದನದ ಮಧ್ಯೆ ಅಪರಿಚಿತ ತರುಣನೊಬ್ಬನ ಸಂಗಡ ತಾನು ನಕ್ಕು ನಲಿದು ವಿಹರಿಸುತ್ತಿದ್ದಾಳೆ ಆ ತರುಣನಾರು ? ತನ್ನ ಪತಿಯಂತೆ ಕಂಡರೂ ಪತಿಯಲ್ಲ "ಪ್ಯಾಂಟ್" ಷರಟು ಧರಿಸಿ ರಂಗುರಂಗಿನ ಕೊರಳಪಟ್ಟಿ ಕಟ್ಟಿಕೊಂಡು "ಚಟ್ಟಿಗಾರ" ಇಂಗ್ಲೀಷ್ ಮಾತಾಡದೆ ಖಾದಿ ಪಂಚೆ ನಿಲುವಂಗಿ ಧರಿಸಿ ಅಚ್ಚ ಕನ್ನಡದಲ್ಲಿ ಮಾತಾಡುತ್ತಿದ್ದಾನೆ ಜೋಷಿ ಇರಬಹುದೇ ಎಂದು ನೋಡಿದಳು. ಜೋಷಿಗೆ ಮಗನೊಬ್ಬನಿದ್ದಿದ್ದರೆ ಅಥವಾ ಹತ್ತು ವರ್ಷಗಳ ಹಿಂದಾಗಿದ್ದರೆ ಜೋಷಿ ಈ ಯುವಕನಂತೆ ಕಂಡಿರಬಹುದು

ಪ್ರೇಮಕ್ಕೆ ವಯಸ್ಸು ಅಡ್ಡಿಯಾಗುವುದಿಲ್ಲ.

*    *    *    *

ಪದ್ಮಳ ನುಡಿ ಪುನಃಪುನಃ ಅವಳ ಮನಸ್ಸಿನಲ್ಲಿ ಮಿಡಿಯಿತು. ಬಾಲ್ಯ, ಯೌವ್ವನ ವಾರ್ಧಿಕ್ಯಗಳಿಗೆ ಕಾಲದ ವಿಪರ್ಯಾಸವೇ ಕಾರಣ. ಅವು ದೇಹದ ಲಕ್ಷಣಗಳು. ದೇಶ ಕಾಲಗಳಿಗೆ ಅತೀತವಾಗಿ ಅನಾದಿ ಅನಂತ ಆತ್ಮದ ನಿಜಸ್ವರೂಪವು ಪ್ರೇಮ. ಆ ಪ್ರೇಮ ದೇವರ ಕಡೆ ತಿರುಗಿದಾಗ ಭಕ್ತಿಯಾಗಿ ಪರಿಣಮಿಸುವುದು. ಜೋಷಿಯ ಕಡೆ ತಾನು ಆಕರ್ಷಿಸಲ್ಪಡುತ್ತಿರುವುದು ಭಕ್ತಿ ಮೂಲವಾದ ಆ ಪ್ರೇಮದ ಶಕ್ತಿಯಿಂದಲೇ ?

ಲತಾ ಕನಸಲ್ಲಿ ಜೋಷಿಯನ್ನು ಆಲಿಂಗಿಸಿದಳು. ಆಕಾಂಕ್ಷೆಯಿಂದ ಅವಳ ತುಟಿಗಳು ಸ್ಫುರಿಸಿದವು.

ಹಠಾತ್ತಾಗಿ ಬೃಂದಾವನದ ಮನೋಹರ ದೃಶ್ಯ ಪೂರ್ಪಟ್ಟಿತು. ಮನೆಯಲ್ಲಿ ಮಂಚದ ಮೇಲೆ ಮಲಗಿದ್ದಂತೆ ತಿಳಿದಳು ಕರಾಳಾಕೃತಿಯೊಂದು ಎದುರಿಗೆ ನಿಂತಿದೆ. ಮೃತ್ಯುವಿನಂತೆ ಶೀತಲವಾದ ಅದರ ಕೈಗಳು ತನ್ನನ್ನು ಮುಟ್ಟುತ್ತಿವೆ.

ಪ್ರಮಾದ! ಪ್ರಮಾದ!

ಲತಾಂಗಿ ವಿಭ್ರಾಂತಳಂತೆ ಎದ್ದು ಕುಳಿತು ಕಿಟ್ಟನೆ ಕಿರುಚಿಕೊಂಡಳು.

## ಆರನೆಯ ತರಂಗ

— ೧ —

ಪದ್ಮಾ ಆನಂದಪುತ್ರಿ ಲತಾಂಗಿಯ ಮನೆಯಿಂದ ಹಿಂದಿರುಗಿದಾಗ ಸ್ನಾನಕ್ಕೆ ನೀರು ಸಿದ್ಧವಾಗಿತ್ತು. ಅವಳಿಗೆ ಪ್ರತಃಕಾಲ ಸ್ನಾನ ಮಾಡುವ ಅಭ್ಯಾಸವಿರಲಿಲ್ಲ ರಾತ್ರಿ ಮಲಗುವ ಮೊದಲು ಸ್ನಾನ ಮಾಡುವಳು. ಕೆಲಸ ಮಾಡಿ ಬಳಲಿದ ದೇಹಕ್ಕೆ ಬಿಸಿನೀರು ಅಗತ್ಯ ಎಂದು ಅವಳು ಹೇಳುತ್ತಿದ್ದಳು.

ಸ್ನಾನ ಮಾಡಿ ಊಟ ಮುಗಿಸಿಕೊಂಡು ಪದ್ಮಾ ಮಲಗಿದಾಗ ಸುಮಾರು ೧೦ ಗಂಟೆಯಾಗಿತ್ತು ಹಿಂದಿನ ದಿನ ಪ್ರಾರಂಭಮಾಡಿದ್ದ ಪತ್ತೆದಾರಿ ಕತೆಯೊಂದನ್ನು ಓದಲು ತೊಡಗಿದಳು. ರುಚಿಸಲಿಲ್ಲ ಪುಸ್ತಕ ಕೆಳಗಿಟ್ಟು ಅಂದಿನ ಘಟನೆಗಳನ್ನು ಕುರಿತು ಚಿಂತಿಸಿದಳು ಲತಾಂಗಿಯ ಗೆಳೆತನವಾದ ಮೇಲೆ ಅವಳ ಜೀವನದಲ್ಲಿ ಒಂದು ಬಗೆಯ ಮಾರ್ಪಾಟು ತಲೆದೋರಿತ್ತು. ಮಂಗೇಶನೊಡನೆ ಪ್ರಾರಂಭವಾದ ಚದುರು ಬಿನ್ನಾಣಗಳು ಬೆಳೆಯದೆ ಅಲ್ಲಿಗೇ ನಿಂತದ್ದು, ಆ ಮಾರ್ಪಾಟಿನ ಪರಿಣಾಮಗಳಲ್ಲೊಂದು. ಲತಾಂಗಿಯಂತಹ ಸುಂದರ, ಸರಳ, ವಿದ್ಯಾವತಿ ಪತ್ನಿಯ ಪ್ರೇಮ ಗಳಿಸಲಾರದ ಪತಿ ಪ್ರಕಟ ವಾಗಿ ಎಷ್ಟೇ ಆಕರ್ಷಕನಾಗಿ ಕಂಡರೂ ಏನೋ ರಹಸ್ಯ ಲೋಪವಿರಬೇಕೆಂದು ಅವಳು ಭಾವಿಸಿದಳು. ಪತ್ನಿಯ ಉಪೇಕ್ಷೆಗೆ ಪಾತ್ರನಾದ ಪತಿಯನ್ನು ತಾನು ಒಲಿಸಿಕೊಳ್ಳುವ ಆತುರಕ್ಕೆ ಅವಳು ಬಲಿಬೀಳಲಿಲ್ಲ. ಲತಾಂಗಿಯ ಗೆಳೆತನ ಬೆಳೆದಂತೆ ಮಂಗೇಶನ ಆಕರ್ಷಣೆಯೂ ಕಡಿಮೆಯಾಯಿತು.

ಮಂಗೇಶನ ತಾಯಿ ವಿವಾಹಿತ ಪತ್ನಿಯಲ್ಲವೆಂಬುದನ್ನು ಪದ್ಮಾ ಗತಾನು ಗತಿಕವಾಗಿ ತಿಳಿದಿದ್ದಳು. ಅವಳು ಮಂಗೇಶನ ತಂದೆಯನ್ನು ಸೇರಿದಾಗ ಇಬ್ಬರು ಗಂಡು ಮಕ್ಕಳಿಗೂ ಬಾಲ್ಯ ಕಳೆಯುತ್ತ ಬಂದಿತ್ತು. ಲಕ್ಷ್ಮಿ ಹುಟ್ಟಿದ್ದು ಆ

ತರುವಾಯ. ಈ ಜಾರಜ ಸಂತಾನವನ್ನು ಮದುವೆಯಾದ ಕನ್ಯೆಯೂ ಆ ಸಂಪ್ರದಾಯದ ಸಂತಾನವೇ ಎಂಬುದನ್ನು ತಿಳಿಯುವುದು ಪದ್ಮಳಿಗೆ ಕಷ್ಟವಾಗಲಿಲ್ಲ ಕೆಸರಲ್ಲಿ ಕಮಲ ಹುಟ್ಟುವಂತೆ ಕುಲಹೀನೆಯಾದ ತಾಯಲ್ಲಿ ಲತಾಂಗಿಯಂತಹ ಕುಲೀನ ಕನ್ಯೆ ಜನಿಸುವುದರಲ್ಲಿ ಆಶ್ಚರ್ಯವೇನು? ಲತಾಂಗಿಯ ಸಂಸ್ಕೃತಿ ಸೌಜನ್ಯಗಳು ಅನೇಕ ಮಂದಿ ಕುಲೀನ ಕನ್ಯೆಯ ರಲ್ಲಿಯೂ ಕಾಣುವುದಿಲ್ಲವೆಂದು ಪದ್ಮಾ ತಿಳಿಯಲು ಹೆಚ್ಚು ಕಾಲ ಹಿಡಿಯಲಿಲ್ಲ. ಲತಾಂಗಿಯನ್ನು ಅವಳು ತನ್ನ ತಂಗಿಯಂತೆ ಪ್ರೀತಿಸ ತೊಡಗಿದಳು. ದಿನಕ್ಕೊಂದು ಸಾರಿ ಲತಾಂಗಿಯನ್ನು ನೋಡದಿದ್ದರೆ ಅವಳಿಗೆ ಸಮಾಧಾನವೇ ಇಲ್ಲ. ಇತರರಲ್ಲಿ ಮುಚ್ಚಿಡುತ್ತಿದ್ದ ತನ್ನ ಲೋಪಗಳನ್ನು ಅವಳು ಸಂಕೋಚ ವಿಲ್ಲದೆ ಲತಾಂಗಿಗೆ ಹೇಳುತ್ತಿದ್ದಳು ಕೆಲವು ವಿಚಾರಗಳಲ್ಲಿ ಇಬ್ಬರೂ ಏಕ ದೇಹ ನ್ಯಾಯದಿಂದ ನಡೆದುಕೊಳ್ಳುವರು ಕ್ರಮ ಕ್ರಮವಾಗಿ ಪತಿ ಪತ್ನಿಯರಲ್ಲಿದ್ದ ಅಸಾಮಂಜಸ್ಯ, ಲತಾಂಗಿಯಲ್ಲಿ ಜೋಷಿಯ ಆಸಕ್ತಿ, ಸೊಸೆ ಯನ್ನು ತಪ್ಪುದಾರಿಗೆಳೆಯಲು ಸುಂದರಮ್ಮ ನಡೆಸಿದ ಪ್ರಯತ್ನ, ಈ ಎಲ್ಲ ವಿಚಾರಗಳೂ ಪದ್ಮಳಿಗೆ ತಿಳಿದು ಸೋದರಿಯ ಸ್ನೇಹದೊಡನೆ ಸಹಾನುಭೂತಿ ಅನುಕಂಪಗಳೂ ಬೆಳೆದವು.

ಪದ್ಮಳಿಗೆ ನಿದ್ದೆ ಬರಲಿಲ್ಲ. ಎದ್ದು ಕೊಟಡಿಯಲ್ಲಿ ಶತಪಥ ತಿರುಗಾಡಿ ದಳು. ದಾಂಪತ್ಯ ಜೀವನ ದುಃಖಮಯವೆಂದು ತಿಳಿದಾಗ ವಿವಾಹಿತೆಗಿಂತ ಅವಿವಾಹಿತೆಯಾದ ಹೆಣ್ಣಿನ ಬಾಳು ಸಹಸ್ರ ಪಾಲು ಉತ್ತಮವೆಂದು ಅವಳಿಗೆ ತೋರಿತು. ಎರಡು ಶತಮಾನಗಳ ಹಿಂದೆ ಇಂಗ್ಲೆಂಡಿನಲ್ಲಿ ಹೆಂಡತಿಯರನ್ನು ಮೂಗುದಾರ ಹಾಕಿ ಎಳೆತಂದು ಸಂತೆಯಲ್ಲಿ ಮಾರುತ್ತಿದ್ದರೆಂದು ಎಲ್ಲಿಯೋ ಓದಿದ್ದದ್ದು ಅವಳಿಗೆ ನೆನಪಾಯಿತು. ಆ ಪರಿಸ್ಥಿತಿಯಿಂದ ಬಿಡುಗಡೆ ಹೊಂದಿ ಪುರುಷನೊಡನೆ ಸಮಾನ ಹಕ್ಕು ಬಾಧ್ಯತೆಗಳನ್ನು ಪಡೆಯಲು ಪಾಶ್ಚಾತ್ಯ ಮಹಿಳೆಯರು ಎಷ್ಟೊಂದು ಪರಿಶ್ರಮಿಸಿದ್ದಾರೆ ಅವರು ಮಾಡಿದುದನ್ನು ನಾವೇಕೆ ಮಾಡಬಾರದು? ಪತಿ ಭಕ್ತಿ, ಪಾತಿವ್ರತ್ಯ ಮುಂತಾದ ಧರ್ಮಗಳು ಹೆಣ್ಣನ್ನು ಬಂಧಿಸಲು ಪುರುಷರು ರಚಿಸಿದ ಸಂಕೋಲೆಗಳು ಅವುಗಳನ್ನು ಕಿತ್ತೊಗೆದು ಎಲ್ಲ ಕ್ಷೇತ್ರಗಳಲ್ಲಿಯೂ ಪುರುಷರೊಡನೆ ಸಮಾನತೆಯನ್ನು ಸಂಪಾದಿಸುವುದೇ ಮಹಿಳೋದ್ಧಾರದ ಪರಮ ಧ್ಯೇಯ. ದಾಂಪತ್ಯ ಜೀವನ

ಈ ಧ್ಯೇಯ ಸಾಧನೆಗೆ ಅಡಚಣೆಯಾಗುವುದಾದರೆ ಅದನ್ನು ಬಿಟ್ಟುಕೊಡಲು ಹೆಣ್ಣು ಸಿದ್ಧಳಾಗಬೇಕು. ತಾನು ವಿಧ್ಯಾರ್ಥಿನಿಯಾಗಿದ್ದಾಗ ನಡೆದ ಒಂದು ಘಟನೆ ಅವಳಿಗೆ ನೆನಪಾಯಿತು

ಪದ್ಮಾ ಓದುತ್ತಿದ್ದ ಕಾನ್ವೆಂಟಿಗೆ ಸಂಬಂಧಿಸಿದಂತೆ ಒಂದು ವಿದ್ಯಾರ್ಥಿನಿ ನಿಲಯವಿತ್ತು. ನಗರದ ಬೇರೆ ಬೇರೆ ವಿದ್ಯಾಶಾಲೆ ಕಾಲೇಜುಗಳಲ್ಲಿ ವೃತ್ತಿ ಶಿಕ್ಷಣ ಪಡೆಯುತ್ತಿದ್ದ ಕೆಲವರು ವಿದ್ಯಾರ್ಥಿನಿಯರೂ ಅಲ್ಲಿದ್ದರು. ಕಾನ್ವೆಂಟಿನಲ್ಲಿ ಓದುತ್ತಿದ್ದ ವಿದ್ಯಾರ್ಥಿನಿಯರಿಗೆ ಹೊರಗೆ ಹೋಗಲು ಅನುಮತಿಯಿರಲಿಲ್ಲ. ಹೊರಗಿನ ವಿದ್ಯಾರ್ಥಿನಿಯರಿಗೆ ಪ್ರಾತಃಕಾಲ ಊಟ ಮುಗಿಸಿಕೊಂಡು ಕಾಲೇಜಿಗೆ ಹೋದ ಮೇಲೆ ಸಂಜೆ ಹಿಂದಿರುಗುವವರೆಗೆ ಪೂರ್ಣ ಸ್ವಾತಂತ್ರ್ಯವಿರುತ್ತಿತ್ತು. ಈ ಕಾರಣದಿಂದ ಕಾನ್ವೆಂಟ್ ಹುಡುಗಿಯರಿಗೆ ಹೊರಗಿನ ವಿದ್ಯಾರ್ಥಿನಿಯರನ್ನು ಕಂಡರೆ ಅಸಹನೆ, ಅಸೂಯೆ. ಅವಕಾಶ ಸಿಕ್ಕಾಗಲೆಲ್ಲ ಅವರ ಮೇಲೆ ಅಲ್ಲದ ಸಲ್ಲದ ಅಪವಾದ ಹೊರಿಸುತ್ತಿದ್ದರು. ಅಧ್ಯಾಪಕ, ವ್ಯವಸ್ಥಾಪಕಿಯರಿಗೆ ದೂರು ಹೇಳುತ್ತಿದ್ದರು. ಪದ್ಮಾ ೧೪ ವರ್ಷದವಳಾಗಿದ್ದಾಗ ನಡೆದ ಇಂತಹ ಒಂದು ಪ್ರಸಂಗ ಅವಳ ಮೇಲೆ ಹೆಚ್ಚು ಪರಿಣಾಮಕಾರಕವಾಯಿತು.

ಒಂದು ದಿನ ಕಾನ್ವೆಂಟಿನ ಮದರ್ ಸುಪೀರಿಯರ್ ನಿಲಯದ ತನಿಖೆಗೆ ಬಂದಾಗ ಶೌಚಕೂಪದ ಮೊಹರಿಯಲ್ಲಿ ದುರ್ವಾಸನೆ ಬರುತ್ತಿದ್ದುದನ್ನು ವಿದ್ಯಾರ್ಥಿನಿಯೊಬ್ಬಳು ವರದಿ ಮಾಡಿದಳು. ಜಲಗಾರರನ್ನು ಕರೆಸಿ ಶೋಧಿಸಿದಾಗ ಕೊಳೆತು ನಾರುತ್ತಿದ್ದ ಸದ್ಯ ಪ್ರಸೂತ ಪಿಂಡವೊಂದು ಸಿಕ್ಕಿತು. ತೆಗೆಸಿಹಾಕಿ ಶುದ್ಧಿ ಮಾಡಿದ ಮೇಲೆ ಅಪರಾಧಿಯಾರೆಂಬುದನ್ನು ಪತ್ತೆಹಚ್ಚಲು ತನಿಖೆ ನಡೆಯಿತು.

ಮದರ್ ಸುಪೀರಿಯರ್ ಮತ್ತು ಇನ್ನಿಬ್ಬರು ಪಾದ್ರಿಗಳು ನ್ಯಾಯಾಧಿಕಾರಿಗಳಾಗಿ ಕುಳಿತು ನಿಲಯದ ವಿದ್ಯಾರ್ಥಿನಿಯರನ್ನು ಕರೆಸಿದರು. ಎಲ್ಲರಂತೆ ಪದ್ಮಾ ಕೂಡಾ ಹೋಗಿದ್ದಳು. ಇಬ್ಬರು ಪಾದ್ರಿಗಳಲ್ಲಿ ವಯಸ್ಕನಾದವನು ವಿದ್ಯಾರ್ಥಿನಿಯರನ್ನುದ್ದೇಶಿಸಿ ಭಾಷಣ ಮಾಡಿದನು. ಮಾನವನ ಅಧಃಪತನಕ್ಕೆ ಕಾಮವೇ ಮುಖ್ಯ ಕಾರಣ ಕಾಮಿಗಳಾದ ಸ್ತ್ರೀ ಪುರುಷರು ಪಾಪ ಪುಣ್ಯಗಳ ಅಂತರವನ್ನು ಮರೆಯುತ್ತಾರೆ. ಉದ್ದೇಶ ಪೂರ್ವಕವಾಗಿ

ಪಾಪಕ್ಕೆ ಬೀಳುತ್ತಾರೆ ಅವಿವಾಹಿತರು ತಮ್ಮ ದೇಹದ ಪವಿತ್ರತೆ ಕೆಡದಂತೆ ರಕ್ಷಿಸಿಕೊಳ್ಳಬೇಕು ಅವಿವಾಹಿತರ ಕಾಮ ಸಂಬಂಧ ಮಹಾಪಾಪ. ಗರ್ಭಸ್ಥವಾದ ಮಗುವನ್ನು ಕೊಲ್ಲುವುದು ಅದಕ್ಕಿಂತ ದೊಡ್ಡ ಪಾಪ ಈ ಎರಡು ಪಾಪಗಳನ್ನು ಮಾಡಿದವರು ನರಕಕ್ಕೆ ಹೋಗುವರು ಪಾಪದಿಂದ ಬಿಡುಗಡೆಯಾಗಲು ಪಶ್ಚಾತ್ತಾಪವೊಂದೇ ಮಾರ್ಗ ಈ ಕೃತ್ಯ ಯಾರಿಂದ ನಡೆಯಿತೆಂಬುದನ್ನು ಬಯಲಿಗೆಳೆಯುವುದು ಎಲ್ಲರ ಕರ್ತವ್ಯ, ಇತ್ಯಾದಿ.

ಭಾಷಣಾನಂತರ ಪ್ರಧಾನ ಮಾತೆ ವಿದ್ಯಾರ್ಥಿನಿಯರನ್ನುದ್ದೇಶಿಸಿ "ಅಪರಾಧಿನಿ ತಾನಾಗಿ ಮುಂದೆ ಬಂದು ಅಪರಾಧ ಒಪ್ಪಿಕೊಂಡರೆ ದೇವ ಪುತ್ರನು ಅವಳನ್ನು ಕ್ಷಮಿಸುವನು ಈ ವಿಚಾರ ಯಾರಿಗಾದರೂ ತಿಳಿದಿದ್ದರೆ ಬಹಿರಂಗವಾಗಿ ತಿಳಿಸ ಬಹುದು" ಎಂದು ಹೇಳಿದಳು

ಸಭಾಮಂದಿರದಲ್ಲಿ ಎಲ್ಲರೂ ನೀರವ ಒಬ್ಬರ ಮುಖವನ್ನೊಬ್ಬರು ನೋಡುತ್ತಿದ್ದರು ಯಾರೂ ಮುಂದೆ ಬರಲಿಲ್ಲ ಆಗ ಮದರ್ ಸುಪೀರಿಯರ್ "ಸೈತಾನನು ನಿಮ್ಮ ಹೃದಯವನ್ನು ಪ್ರವೇಶಿಸಿ ಭೀತಿಯುಂಟುಮಾಡಿದ್ದಾನೆ ಬಹಿರಂಗವಾಗಿ ತಿಳಿಸುವ ಧೈರ್ಯವಿಲ್ಲದಿದ್ದರೆ ಲಿಖಿತ ಮೂಲಕ ರಹಸ್ಯವಾಗಿ ತಿಳಿಸಬಹುದು" ಎಂದು ಸೂಚಿಸಿದಳು

ಆಗಲೂ ಯಾರೂ ಮಾತಾಡಲಿಲ್ಲ ಕಾನ್ವೆಂಟ್ ವಿದ್ಯಾರ್ಥಿನಿಯರ ಗುಂಪಿನಲ್ಲಿ ಗುಸು ಗುಸು ಪ್ರಾರಂಭವಾಯಿತು ಕೊನೆಗೆ ಎಂಟು ವರ್ಷದ ಸಣ್ಣ ಹುಡುಗಿಯೊಬ್ಬಳು ಮುಂದೆ ಬಂದು ಕೈಲಿದ್ದ ಚೀಟಿಯನ್ನು ಮದರ್ ಸುಪೀರಿಯರಿಗೆ ಕೊಟ್ಟಳು ಅದರಲ್ಲಿ ಕಾಲೇಜ್ ವಿದ್ಯಾರ್ಥಿನಿಯೊಬ್ಬಳ ಹೆಸರು ಬರೆಯಲ್ಪಟ್ಟಿತ್ತು.

ಮದರ್ ಸುಪೀರಿಯರ್ ಮತ್ತು ಪಾದ್ರಿಗಳು ತಮ್ಮಲ್ಲಿಯೇ ಏನು ಮಾಡಬೇಕೆಂಬುದನ್ನು ಯೋಚಿಸಿ ಕೊಂಡರು. ಅನಂತರ ಮದರ್ "ಈಗ ನೀವೆಲ್ಲ ಪಾರ್ಶ್ವದ ಕೊಟಡಿಯಲ್ಲಿ ಕುಳಿತುಕೊಳ್ಳಿ ಒಬ್ಬೊಬ್ಬರನ್ನಾಗಿ ಕರೆಸಿ ಪರೀಕ್ಷಿಸಲಾಗುವುದು" ಎಂದು ಹೇಳಿದಳು

ವಿದ್ಯಾರ್ಥಿನಿಯರು ಹಾಗೆಯೇ ಮಾಡಿದರು ಅನಂತರ ಮದರ್ ಸುಪೀರಿಯರ್ ಪಾದ್ರಿಗಳನ್ನು ಹೊರಗೆ ಕಳುಹಿಸಿ ವೈದ್ಯದಲ್ಲಿ ಅನುಭವವಿದ್ದ ಸೋದರಿಯೊಬ್ಬಳ ಸಹಾಯದಿಂದ ಒಬ್ಬೊಬ್ಬ ವಿದ್ಯಾರ್ಥಿನಿಯನ್ನೂ ಪರೀಕ್ಷಿಸ

ತೊಡಗಿದಳು ಕಾಲೇಜು ವಿದ್ಯಾರ್ಥಿನಿಯರ ಪರೀಕ್ಷೆ ಮೊದಲು ನಡೆಯಿತು. ಚೀಟಿಯಲ್ಲಿ ಹೆಸರು ಕಾಣಿಸಿದ್ದ ವಿದ್ಯಾರ್ಥಿನಿಯ ಸರದಿ ಬಂದಾಗ ಸೋದರಿಯ ಸಲಹೆಯಂತೆ ಅವಳು ವಿವಸ್ತ್ರೆಯಾಗಲು ನಿರಾಕರಿಸಿದಳು ಪ್ರಧಾನ ಮಾತೆ ಅವಳನ್ನು ಬೇರೊಂದು ಕೊಟಡಿಯಲ್ಲಿ ಕುಳ್ಳಿರಿಸಿದಳು.

ಕಾನ್ವೆಂಟ್ ವಿದ್ಯಾರ್ಥಿನಿಯರಲ್ಲಿ ಪ್ರಾಪ್ತವಯಸ್ಕರಾದವರ ಪರೀಕ್ಷೆ ಮೊದಲು ನಡೆಯಿತು. ಪದ್ಮಳ ಸರದಿ ಬಂದಾಗ ಸೋದರಿ ಹೇಳಿದ್ದನ್ನು ಕೇಳದವಳಂತೆ ಸುಮ್ಮನೆ ನಿಂತುಕೊಂಡಳು "ಏಕೆ ? ನಾವು ಪರೀಕ್ಷೆಮಾಡುವುದು ಬೇಡವೇ ?" ಸೋದರಿ ಪ್ರಶ್ನಿಸಿದಳು.

ಪದ್ಮಾ ಉತ್ತರ ಕೊಡಲಿಲ್ಲ ಲಜ್ಜೆಯಿಂದ ಮುಖ ಬಿಳುಪೇರಿತ್ತು. ಹಣೆಯಮೇಲೆ ಬೆವರಿನ ಹನಿಗಳು ಎದ್ದುಕಾಣುತ್ತಿದ್ದವು ಮದರ್ ಸುಪೀರಿಯರ್ ಸಂದೇಹ ದೃಷ್ಟಿಯಿಂದ ಅವಳ ಮುಖನೋಡಿ "ನೀನೂ ಆ ಕೊಟ್ಟಡಿಯಲ್ಲಿ ಕುಳಿತಿರು" ಎಂದು ಹೇಳಿದಳು

ಕೊಟ್ಟಡಿಯಲ್ಲಿದ್ದ ವಿದ್ಯಾರ್ಥಿನಿ ಪದ್ಮಳಿಗೆ ಅಪರಿಚಿತೆ ಇಬ್ಬರೂ ಬಹಳ ಹೊತ್ತು ಮಾತಾಡದೆ ಸುಮ್ಮನೆ ಕುಳಿತಿದ್ದರು ಹೊರಗೆ ಪರೀಕ್ಷೆ ಮುಂದುವರಿಯುತ್ತಿತ್ತು ಬಳಿಕ ಅಪರಿಚಿತೆ ಪದ್ಮಳ ಹತ್ತಿರ ಬಂದು "ನಿನ್ನನ್ನೇಕೆ ಆವರಿಲ್ಲಿಗೆ ಕಳುಹಿಸಿದರು ?" ಎಂದು ಕೇಳಿದಳು

"ನಾನು ಪರೀಕ್ಷೆಗೆ ಒಪ್ಪಲಿಲ್ಲ"

"ಏಕೆ ಒಪ್ಪಲಿಲ್ಲ ?"

"ಅದು ಎಲ್ಲರ ಮುಂದೆ ಹೇಳುವ ವಿಷಯವಲ್ಲ"

"ಏಕೆ ಹೇಳಬಾರದು ? ನಾನೇಕೆ ಒಪ್ಪಲಿಲ್ಲ ಗೊತ್ತೇ ?"

"ನನಗೆ ಹೇಗೆ ಗೊತ್ತಾಗ ಬೇಕು!"

"ನನಗೆ ಗರ್ಭಪಾತವಾಗಿಧೆಯೋ ಇಲ್ಲವೇ ಎನ್ನುವುದು ಇವರಿಗೆ ಹೇಗೆ ಗೊತ್ತಾಗುತ್ತೆ ? ಸರಿಯಾದ ಡಾಕ್ಟರನ್ನು ಕರೆಸಲಿ ಆಗ ಮೈ ತೋರಿಸುತ್ತೇನೆ."

"ಹಾಗಾದರೆ ನೀನು ಒಪ್ಪದಿದ್ದದ್ದು ಲಜ್ಜೆಯಿಂದಲ್ಲ ?"

"ಲಜ್ಜೆಗೆಟ್ಟವರೆದುರಿಗೆ ಲಜ್ಜೆಯೇನು ಬಂತು ?"

ಪರೀಕ್ಷೆ ನಡೆಸುತ್ತಿದ್ದ ತಾಯಿ ಮತ್ತು ಸೋದರಿಯರ ವಿಚಾರದಲ್ಲಿ ಆಪ

ರಿಚಿತ ವಿದ್ಯಾರ್ಥಿನಿ ಈ ರೀತಿ ಮಾತ್ನಾಡಿದುದು ಪದ್ಮಳಿಗೆ ಅನುಚಿತವಾಗಿ ಕಂಡಿತು ಪ್ರತಿಯಾಗಿ ಅವಳೇನೂ ಹೇಳಲಿಲ್ಲ ಮಾತು ಮುಂದುವರೆಸಿ ಅಪರಿಚಿತೆ ಹೇಳಿದಳು

"ನಾನು ಅವರ ವಿಚಾರದಲ್ಲಿ ಹೀಗೆ ಹೇಳಿದೆನೆಂದು ನಿನಗೆ ಕೋಪ ಬಂದಿರ ಬಹುದು ಅವರಲ್ಲಿ ನನಗೆ ಹೆಚ್ಚು ಗೌರವವಿದೆ ಆದರೆ ಈ ಅನರ್ಥದ ಕಾರಣ ಅವರ ಮಡಿ ಮನೋಭಾವವೆಂಬುದನ್ನು ಮರೆಯಲಾರೆ"

"ನೀನು ಹೇಳುವುದು ನನಗೆ ಅರ್ಥವಾಗಲಿಲ್ಲ"

"ವಯಸ್ಸಾದ ಹುಡುಗಿಯರಿಗೆ ಈ ವಿಚಾರಗಳಲ್ಲಿ ಸರಿಯಾದ ತಿಳುವಳಿಕೆ ಕೊಡದಿರುವುದೇ ಈ ಅನರ್ಥದ ಕಾರಣ ಸ್ತ್ರೀ ಪುರುಷ ಸಂಬಂಧ, ಗರ್ಭಧಾರಣೆ ಇತ್ಯಾದಿ ಜೀವನ ರಹಸ್ಯಗಳನ್ನು ಮಕ್ಕಳಿಗೆ ಚಿಕ್ಕ ವಯಸ್ಸಿನಲ್ಲಿಯೇ ತಿಳಿಸುವುದರಿಂದ ಇಂತಹ ಅನರ್ಥಗಳನ್ನು ತಪ್ಪಿಸ ಬಹುದು ತಂದೆ ತಾಯಿಂದಿರು ಈ ಶಿಕ್ಷಣಕ್ಕೆ ಅಸಮರ್ಥರಾದಾಗ ಉಪಾಧ್ಯಾಯರು ಆ ಕಾರ್ಯ ಮಾಡಬೇಕು"

ಲೈಂಗಿಕ ವಿಚಾರಗಳನ್ನು ಕುರಿತು ಇಷ್ಟೊಂದು ಸ್ಪಷ್ಟವಾಗಿ ಮಾತಾಡಿದುದನ್ನು ಪದ್ಮ ಹಿಂದೆ ಯಾವಾಗಲೂ ಕೇಳಿರಲಿಲ್ಲ ಅಚ್ಚರಿಯಿಂದ ಅಪರಿಚಿತೆಯ ಮುಖ ನೋಡಿದಳು. "ನೀನೇಕೆ ಅವರಿಗೆ ವ್ಯೆತೋರಿಸಲಿಲ್ಲ? ನನ್ನ ಸಂಗಡ ಸಂಕೋಚವಿಲ್ಲದೆ ಹೇಳು" ಎಂದು ಅಪರಿಚಿತೆ ಪುನಃ ಕೇಳಿದಳು.

"ಮೂರು ದಿನವಾದರೂ ನಿಂತಿಲ್ಲ ಬಟ್ಟೆಯೆಲ್ಲ ಕೆಂಪು ಕಲೆಗಳು. ಅದನ್ನು ಅವರಿಗೆ ಹೇಗೆ ತೋರಿಸುವುದು!"

ಪದ್ಮಾ ಲಜ್ಜೆಯಿಂದ ಹೇಳಿದಳು

ಅಪರಿಚಿತೆ ಪದ್ಮಳಿಗಿಂತ ಎರಡು ಮೂರು ವರ್ಷ ದೊಡ್ಡವಳು "ಇದಕ್ಕೆ ಇಷ್ಟೊಂದು ನಾಚಿಕೆಯೇ ಹುಚ್ಚಿ" ಎಂದು ಹೇಳಿ ಪದ್ಮಳ ಕೈ ಹಿಡಿದು ಸವರುತ್ತಾ "ನನ್ನ ಹೆಸರು ಶೀಲಾ ಮಾಥ್ಯೂಸ್ ಮೆಡಿಕಲ್ ಕಾಲೇಜಲ್ಲಿ ಓದುತ್ತಿದ್ದೇನೆ. ನಿನ್ನ ಹೆಸರೇನು?" ಎಂದು ಪ್ರಶ್ನಿಸಿದಳು.

"ಪದ್ಮಾ ಆನಂದಪುತ್ರಿ"

"ಈ ಹಾಸ್ಟಲಿನಲ್ಲಿ ನನಗೆ ಪರಿಚಿತರಾರೂ ಇಲ್ಲ ಒಬ್ಬ ಗೆಳತಿಯನ್ನು

ಹುಡುಕುತ್ತಿದ್ದೆ ದೇವಪುತ್ರನು ನಿನ್ನನ್ನು ಕಳುಹಿಸಿದ "

ಶೀಲಾ ಈ ಮಾತುಗಳನ್ನು ಹೇಳುತ್ತಿದ್ದಂತೆ ಹೊರಗೆ ಅಳುವ ಶಬ್ದವಾಯಿತು ಇಬ್ಬರೂ ಕುತೂಹಲದಿಂದ ಆಕಡೆ ಕಿವಿಗೊಟ್ಟರು. ಬಾಗಿಲ ಸಂದಿಯಿಂದ ಇಣಕಿ ನೋಡಿದರು ಪರೀಕ್ಷಕರೆದುರಿಗೆ ಸುಮಾರು ೧೪ ವರ್ಷದ ಬಾಲಿಕೆಯೊಬ್ಬಳು ಕಂಪಿಸುತ್ತ ನಿಂತಿದ್ದಳು. ಬಲಾತ್ಕಾರ ಗರ್ಭಪಾತದ ಲಕ್ಷಣ ಅವಳಲ್ಲಿ ಸ್ಪಷ್ಟವಾಗಿ ಕಂಡುಬಂದಿತ್ತು ಬಾಡಿ ಬಿಳುಪೇರಿದ ಮುಖ, ಮೈಯಲ್ಲಿ ಜ್ವರ, ಬೆದರಿದ ಕಣ್ಣುಗಳು ಬಿಕ್ಕಿ ಬಿಕ್ಕಿ ಅಳುತ್ತಾ ಅಸ್ಪುಟವಾಗಿ ಏನೋ ಹೇಳುತ್ತಿದ್ದಳು ಮದರ್ ಸುಪಿರೀಯರ್ ಅವಳನ್ನು ಗದರಿಸಿ ಕೂಡಲೆ ಆಸ್ಪತ್ರೆಗೆ ಸೇರಿಸಲು ಸೋದರಿಯೊಬ್ಬಳ ಜೊತೆಗೆ ಕಳುಹಿಸಿದಳು ಉಳಿದಿದ್ದ ನಾಲ್ಕಾರು ಮಂದಿ ವಿದ್ಯಾರ್ಥಿನಿಯರ ಪರೀಕ್ಷೆ ಅವಸರದಲ್ಲಿ ಮುಗಿಯಿತು.

ಆನಂತರ ಮದರ್ ಸುಪೀರಿಯರ್ ಕೊಟಡಿಗೆ ಬಂದು ಗಡುಸಾದ ಧ್ವನಿಯಿಂದ " ಶೀಲಾ, ಪದ್ಮಾ, ನೀವೇಕೆ ಪರೀಕ್ಷೆಗೆ ಒಪ್ಪಲಿಲ್ಲ ನಿಮ್ಮ ವರ್ತನೆ ಶಿಕ್ಷಾರ್ಹವಾದದ್ದು " ಎಂದಳು

" ನಿಮ್ಮ ಆಜ್ಞೆಯನ್ನು ಎದುರಿಸುವುದು ನನ್ನ ಉದ್ದೇಶವಲ್ಲ, ತಾಯಿ. ಅರ್ಹತೆ ಪಡೆದ ಡಾಕ್ಟರ್ ಪರೀಕ್ಷಿಸಲಿ ನಾನು ಸಿದ್ಧಳಾಗಿದ್ದೇನೆ ನನ್ನ ಗೆಳತಿ ಬಹಿಷ್ಠೆಯಾಗಿದ್ದಾಳೆ ನಿಮ್ಮೆದುರಿಗೆ ಅದನ್ನು ಹೇಳಲು ನಾಚಿಕೊಂಡಳು "

ಶೀಲಾ ನಮ್ರತೆಯಿಂದ ಉತ್ತರ ಕೊಟ್ಟಳು. " ನೀವು ಹೋಗಬಹುದು " ಎಂದು ಪ್ರಧಾನ ಮಾತೆ ಅವರನ್ನು ಬೀಳ್ಕೊಟ್ಟಳು.

— ೨ —

ಅಂದಿನಿಂದ ಶೀಲಾ ಮತ್ತು ಪದ್ಮಾ ಗೆಳತಿಯರಾದರು ಪ್ರತಿ ದಿನ ಒಂದೆರಡು ಗಂಟೆಗಳನ್ನಾದರೂ ಇಬ್ಬರೂ ಒಟ್ಟಿಗೆ ಕಳೆಯುತ್ತಿದ್ದರು. ಶೀಲಾ ಈ ಮೊದಲೇ ಸೂಚಿಸಿದಂತೆ ಜನನ ಮರಣಗಳಿಗೆ ಸಂಬಂಧಿಸಿದ ಜೀವನ ರಹಸ್ಯಗಳನ್ನು ಪದ್ಮಳಿಗೆ ತಿಳಿಸಿದಳು. ತಾನು ಓದುತ್ತಿದ್ದ ಮೆಡಿಕಲ್

ಕಾಲೇಜಿನ ಶವಾಗಾರ ಮತ್ತು ಮ್ಯೂಸಿಯಮ್ಮಿಗೆ ಕರೆದುಕೊಂಡು ಹೋಗಿ ಅಲ್ಲಿಯ ದೃಶ್ಯಗಳನ್ನು ವಿವರಿಸಿದಳು. ಗೆಳೆಯ ಗೆಳತಿಯರಿಗೆ ಪರಿಚಯ ಮಾಡಿ ಕೊಟ್ಟು, ಸಂಜೆ ಸಿನಿಮಾಗಳಿಗೆ ಕರೆದುಕೊಂಡು ಹೋಗಿ ಜನರಲ್ಲಿ ಸರಳತೆ ಸಂಯಮಗಳಿಂದ ನಡೆಯುವುದನ್ನು ಕಲಿಸಿದಳು ಶೀಲಾ ಒಂದು ದಿನ ಹೇಳಿದ ಮಾತುಗಳು ಪದ್ಮಳ ಹೃದಯದಲ್ಲಿ ನಿಂತವು,

"ಯೌವ್ವನದಲ್ಲಿ ಅಡಿಯಿಟ್ಟ ಹುಡುಗಿಯರು ಎರಡು ವರ್ಗದ ಪುರುಷರ ವಿಚಾರದಲ್ಲಿ ಎಚ್ಚರದಿಂದಿರಬೇಕು ಮಧ್ಯಮ ವಯಸ್ಸಿನ ಸಂಬಂಧಿಗಳು ಮೊದಲನೆಯ ವರ್ಗ ಸಮ ವಯಸ್ಕರಾದ ಗೆಳೆಯರು ಎರಡನೆಯ ವರ್ಗ. ಸೋದರ ಮಾವ, ಚಿಕ್ಕಪ್ಪ, ಮುಂತಾದ ಸಂಬಂಧಗಳನ್ನು ಕಲ್ಪಿಸಿಕೊಂಡು ಬರುವ ಮಧ್ಯಮ ವಯಸ್ಕರಿಂದ ಅನೇಕ ಮಂದಿ ಹುಡುಗಿಯರು ಕೆಡುತ್ತಾರೆ. ಉಪಾಧ್ಯಾಯರೂ ಈ ಗುಂಪಿಗೆ ಸೇರಿದವರು. ಸಮ ವಯಸ್ಕರಾದ ಗೆಳೆಯರು— Boy friends ತಾವೇನು ಮಾಡುವೆವೆಂಬುದನ್ನು ತಿಳಿಯದೆ ತಪ್ಪುದಾರಿ ಹಿಡಿಯಬಹುದು ಮಧ್ಯಮ ವಯಸ್ಕರು ಹಾಗಲ್ಲ. ಆತುರದಿಂದ ಉದ್ದೇಶ ಪೂರ್ವಕವಾಗಿ ಅರಿಯದ ಹುಡುಗಿಯರನ್ನು ಕಾಮಕ್ಕೆ ಬಲಿಗೊಡುವರು. ಅವರ ಜೀವನವನ್ನೇ ಹಾಳು ಮಾಡುವರು.

"ಹೆಣ್ಣಿಗೆ ರೂಪ ಯೌವ್ವನಗಳು ಬಂಡವಾಳದಂತೆ ಬಂಡವಾಳ ವೆಚ್ಚವಾಗದಂತೆ ರಕ್ಷಿಸಿಕೊಂಡು ಅದರಿಂದ ಬರುವ ಬಡ್ಡಿಯಿಂದ ಜೀವನ ನಡೆಸುವುದು ಬುದ್ಧಿವಂತರ ಲಕ್ಷಣ ಹೆಣ್ಣು ಒಂದು ಸಾರಿ ಜಾರಿದರೆ ಯಾವಾಗಲೂ ಜಾರುತ್ತಿರಬೇಕಾದ್ದೇ. ಯಾವಾಗಲೂ ಎಲ್ಲ ಅವಸ್ಥೆಗಳಲ್ಲಿಯೂ ಪುರುಷರು ಪ್ರಣಯಾರ್ಥಿಗಳಾಗಿ ಸ್ತ್ರೀಯರನ್ನು ಸಮೀಪಿಸುವರೆಂಬುದನ್ನು ಮರೆಯಬೇಡ. ಪುರುಷರ ಕೈಗೆ ಸಿಲುಕಿ ಅವರ ಅಧೀನರಾಗದೆ ತಮ್ಮ ವ್ಯಕ್ತಿತ್ವ ಸ್ವಾತಂತ್ರ್ಯಗಳನ್ನು ರಕ್ಷಿಸಿಕೊಳ್ಳುವುದು ಸ್ತ್ರೀಯರ ಕರ್ತವ್ಯ.

"ಕುಂಟನಿಯರ ವಿಚಾರದಲ್ಲಿಯೂ ಯುವತಿಯರು ಎಚ್ಚರದಿಂದಿರ ಬೇಕು ತಾನು ಕೆಟ್ಟ ಕೋತಿ ವನವನ್ನು ಕೆಡಿಸಿತು ಎಂಬ ಗಾಥೆಯಂತೆ ಅವರು ಸಮಯ ಕಾದು ಹೆಂಗಸರನ್ನು ಕೆಡಿಸುವರು ವೇಶ್ಯಾವೃತ್ತಿ ಹರಡಲು ಪುರುಷರ ಕಾಮುಕ ಪ್ರವೃತ್ತಿಗಿಂತ ಕುಂಟನಿಯರ ಹಂಚಿಕೆ ವಂಚನೆಗಳೇ ಮುಖ್ಯ ಕಾರಣ. ಹಣಕ್ಕಾಗಿ ಅವರು ಏನುಬೇಕಾದರೂ ಮಾಡುವರು.

ಕುಂಟನಿಯರ ಮುಖಾಂತರ ನಡೆಯುವ ಪ್ರಣಯ, ಪರಿಣಾಮದಲ್ಲಿ ದೇಹ ವಿಕ್ರಯಕ್ಕಿಳಿಯುವುದು ಸ್ವರ್ಗೀಯ ಪ್ರೇಮವನ್ನು ಅವರು ಮಾರುಕಟ್ಟೆಯ ಮಟ್ಟಕ್ಕಿಳಿಸುವರು

"ಪುರುಷರಂತೆ ಸ್ತ್ರೀಯರಿಗೂ ಪ್ರೇಮ ಸ್ವಾತಂತ್ರ್ಯವಿರತಕ್ಕದ್ದು ಆಧುನಿಕ ಯುಗದ ಲಕ್ಷಣ ಪ್ರೌಢ ವಿವಾಹ, ವಿವಾಹವಿಚ್ಛೇದ, ಆಸ್ತಿ ಪಾಸ್ತಿಗಳ ಮೇಲೆ ಸ್ತ್ರೀಯರ ಹಕ್ಕುದಾರಿ, ಇವೆಲ್ಲದರ ಉದ್ದೇಶ ಸ್ತ್ರೀಯರ ವೈಯಕ್ತಿಕ ಸ್ವಾತಂತ್ರ್ಯವನ್ನು ರಕ್ಷಿಸುವುದೇ ಆಗಿದೆ ಸ್ತ್ರೀಯರನ್ನು ದಾಸಿಯರಂತೆ ಪರಿಗಣಿಸಿ, ಪುರುಷನ ಸ್ವೇಚ್ಛಾಪ್ರವೃತ್ತಿಗೆ ಪೂರ್ಣಾವಕಾಶ ಕೊಡುವ ಹಿಂದೂ ವಿವಾಹ ಪದ್ಧತಿ ಮಾರ್ಪಡುವವರೆಗೆ ನೀನು ಮದುವೆ ಯಾಗಬೇಡ ಕಾಲೇಜು ಬಿಟ್ಟ ಮೇಲೆ ಏನಾದರೂ ಕೆಲಸಕ್ಕೆ ಸೇರು ಆರ್ಥಿಕ ಸ್ವಾತಂತ್ರ್ಯ ಸಂಪಾದಿಸಿಕೊಂಡರೆ ಉಳಿದೆಲ್ಲ ಸ್ವಾತಂತ್ರ್ಯಗಳೂ ನಿನಗೆ ದೊರಕಿದಂತೆಯೇ"

ಶೀಲಾ ವೈದ್ಯಕೀಯ ಪರೀಕ್ಷೆಯಲ್ಲಿ ಉತ್ತೀರ್ಣಳಾಗುವವರೆಗೆ ಈ ಗೆಳೆತನ ನಡೆದು ಬಂತು ಆ ಮೇಲೆ ಇಬ್ಬರ ಜೀವನ ಪಥಗಳು ಪ್ರತ್ಯೇಕವಾದವು ಪದ್ಮಾ ಅವಳಿಂದ ಕಲಿತ ಪಾಠಗಳನ್ನು ಜೀವನದಲ್ಲಿ ಸೂತ್ರ ಪ್ರಾಯವಾಗಿ ಆಚರಣೆಗೆ ತಂದುಕೊಳ್ಳಲು ಅಶಕ್ತಳಾದರೂ ಮನಸ್ಸಿನಿಂದ ಅವು ಅಳಿಸಿ ಹೋಗಲಿಲ್ಲ.

ಕೊನೆಗೆ ಪದ್ಮಾ ದೀಪ ಆರಿಸಿ ಹಾಸಿಗೆಯ ಮೇಲೆ ಮಲಗಿದಳು ಹೊರಗೆ ತಾಯಿ ಗೊರಿಕೆ ಹೊಡೆಯುತ್ತಿದ್ದದ್ದು ಕೇಳುತ್ತಿತ್ತು. ನಿದ್ರೆ ಬರಲಿಲ್ಲ. ಲತಾಂಗಿಯ ವಿಚಾರ ಪುನಃ ಮನಸ್ಸಿಗೆ ಹೊಳೆಯಿತು.

ಈಗ್ಗೆ ಕೆಲವು ತಿಂಗಳಿಂದ ಮಂಗೇಶನ ವಿಷಯವಾಗಿ ಅವಳ ಸಂದೇಹ ಹೆಚ್ಚಿತ್ತು. ಮಂಗಳೂರಿಂದ ಮಾವ ದುಡ್ಡು ಕಳುಹಿಸುವುದಾಗಿ ಹೇಳಿದ್ದ ಕತೆ ಸುಳ್ಳೆಂಬುದನ್ನು ತಿಳಿಯಲು ಹೆಚ್ಚು ಕಾಲ ಹಿಡಿಯಲಿಲ್ಲ. ಅಮೇಲೆ ಮನೆಯ ಮುಂಗಡ, ಸ್ಟರ್ನಿಚರ್, ಮುಂತಾದವುಗಳನ್ನು ಕೊಳ್ಳಲು ಹಣ ದೊರಕಿದ್ದು ಹೇಗೆ? ಕಾರ್ಖಾನೆಯಲ್ಲಿ ಅವನಿಗೆ ಬರುತ್ತಿದ್ದ ವೇತನ ಸಿಗರೆಟ್, ಚಿಲ್ಲರೆ ಅಂಗಡಿ ಕ್ಯಾಂಟೀನ್ನುಗಳಿಗೂ ಸಾಲುತ್ತಿರಲಿಲ್ಲ, ಆದರೂ ಅವನ ಹಣದ ಚೀಲ ಯಾವಾಗಲೂ ತುಂಬಿರುತ್ತಿತ್ತು. "ನಿನ್ನ ಗಂಡನಿಗೆ ಎಲ್ಲಿಂದ ಇಷ್ಟು

ದುಡ್ಡು ಬರುತ್ತದೆ ?" ಎಂದು ಅವಳೊಂದು ದಿನ ಲತಾಂಗಿಯನ್ನು ಕೇಳಿದಳು.

"ನನಗೆ ತಿಳಿಯದು ನಾನು ಆ ವಿಚಾರಗಳನ್ನು ಅವರೊಂದಿಗೆ ಪ್ರಸ್ತಾಪಿಸುವುದಿಲ್ಲ" ಎಂದು ಲತಾ ಉತ್ತರಕೊಟ್ಟದ್ದಳು

"ಹಾಗಾದರೆ ಮನೆಯಲ್ಲಿ ಸಂಜೆಯಿಂದ ಬೆಳಗಿನವರೆಗೆ ಏನು ಮಾತಾಡುತ್ತೀರಿ ?"

"ಅವರು ನಿದ್ರೆ ಮಾಡುತ್ತಾರೆ ಎಚ್ಚರವಾದಾಗ ಸಿಗರೇಟ್ ಸೇದುತ್ತಾರೆ. ನಾನು ನಿದ್ರೆ ಬರುವವರೆಗೆ ಓದುತ್ತೇನೆ ಅವರು ಹಾಲಲ್ಲಿ, ನಾನು ರೂಮಲ್ಲಿ ತಪ್ಪಿದರೆ ನಾನು ಹಾಲಲ್ಲಿ ಅವರು ರೂಮಲ್ಲಿ"

ಲತಾಂಗಿಯ ಉತ್ತರ ಕೇಳಿ ಪದ್ಮಾ ಗಟ್ಟಿಯಾಗಿ ನಕ್ಕು "ನೀನೊಬ್ಬ ವಿಚಿತ್ರ ಹುಡುಗಿ, ಲತಾ!'' ಎಂದಿದ್ದಳು. ಈಗ ಆ ಮಾತು ನೆನಪಿಗೆ ಬಂದು ಅವಳ ಮುಖದಲ್ಲಿ ನಗೆ ಮೂಡಿತು ತನ್ನಲ್ಲಿ ತಾನೇ ನೀರವವಾಗಿ ನಕ್ಕಳು.

ಲತಾಂಗಿ ನಿಜವಾಗಿ ವಿಚಿತ್ರ ಹುಡುಗಿ ಅವಳ ದಾಂಪತ್ಯ ಜೀವನದಂತೆ ಪತ್ರಿಕೋದ್ಯಮವೂ ವಿಚಿತ್ರ. ಜೋಷಿಯನ್ನು ಪದ್ಮಾ ನೋಡಿರಲಿಲ್ಲ. ಆದರೆ ಲತಾಂಗಿಯ ಮಾತುಗಳಿಂದ ಅವನಲ್ಲಿ ಒಂದು ಬಗೆಯ ಗೌರವವುಂಟಾಗಿತ್ತು. ಲತಾಂಗಿಯಂತಹ ಸುಂದರ ಚತುರ ವಿದ್ಯಾವತಿ ಯುವತಿಯ ಮೇಲೆ ಪ್ರಭಾವ ಬೀರಬೇಕಾದರೆ ಅವನಲ್ಲಿ ಕೆಲವು ವಿಶೇಷ ಗುಣಗಳಿರಬೇಕು. ಅವಕಾಶ ಸಿಕ್ಕಾಗ ಅವನ ಪರಿಚಯ ಮಾಡಿಕೊಂಡು ಆ ವಿಶೇಷ ಗುಣಗಳನ್ನು ಅರಿತುಕೊಳ್ಳಬೇಕೆಂದು ಅವಳು ನಿರ್ಧರಿಸಿಕೊಂಡಳು

ಬಹಳ ಹೊತ್ತಿನ ಮೇಲೆ ಅವಳಿಗೆ ಜೊಂಪು ಹತ್ತಿತು ಆದರೆ ಹೆಚ್ಚು ಹೊತ್ತು ನಿದ್ರೆ ಮಾಡಲಿಲ್ಲ. ದಡಾರನೆ ಹಾಸಿಗೆಯಿಂದೆದ್ದು ದೀಪ ಹೊತ್ತಿಸಿ ತಾಯನ್ನು ಕೂಗಿದಳು. ತಾಯಿ ನಿದ್ರಾಸುಖಿ ಅಂದು ಮೀನಿನ ಸೂಪ್ ಹೆಚ್ಚಿಗೆ ಸೇವಿಸಿದ್ದರಿಂದ ಸುಷುಪ್ತಿಯಿಂದ ವಂಚಿತೆಯಾಗಿ ಸ್ವಪ್ನಾವಸ್ಥೆಯಲ್ಲಿದ್ದಳು. ಕೂಡಲೆ ಎಚ್ಚೆತ್ತು "ಏನಾಯಿತು ಪದ್ಮಾ ?" ಎಂದಳು.

"ಲತಾ ತೊಂದರೆಯಲ್ಲಿದ್ದಾಳೆ. ಏನೆಂಬುದನ್ನು ನಾನು ಹೇಳಲಾರೆ. ನಾನು ಈಗಲೆ ಅವಳ ಮನೆಗೆ ಹೋಗುತ್ತೇನೆ"

"ಈ ಸರಿ ರಾತ್ರಿಯಲ್ಲಿ! ಬೆಳಿಗ್ಗೆ ಹೋಗಬಹುದಲ್ಲ ?"

“ ಭಯವೇನು ಬಂತು ? ನಾನೀಗ ಅವಳನ್ನು ನೋಡಲೇ ಬೇಕು. ಬಾಗಿಲು ಹಾಕಿಕೋ ”

ಎಂದು ಹೇಳಿ ಪದ್ಮಾ ಉಣ್ಣೆಬಟ್ಟೆಯ ಉತ್ತರೀಯ ಧರಿಸಿ ಮೇಜಿನ ಮೇಲಿದ್ದ ವಿದ್ಯುತ್ತಿನ ಕೈದೀಪ ತೆಗೆದುಕೊಂಡು ಹೊರಟಳು.

ತಾಯಿ ಅಡ್ಡಿಮಾಡಲಿಲ್ಲ ಅಡ್ಡಿಮಾಡುವ ಅಭ್ಯಾಸ ಅವಳಿಗಿರಲಿಲ್ಲ ಮಗಳ ಧೈರ್ಯ, ನಿರ್ಧಾರ, ಹಠ ಪ್ರವೃತ್ತಿ ಅವಳಿಗೆ ತಿಳಿದಿತ್ತು ಮಗಳು ಹೋದ ಮೇಲೆ ಸ್ವಲ್ಪ ಹೊತ್ತು ಬಾಗಿಲ ಹತ್ತಿರ ನಿಂತಿದ್ದು “ ಅದೇನು ಹುಚ್ಚೋ ಆ ಹುಡುಗಿಯ ಮೇಲೆ ಗಂಡು ಹೆಣ್ಣನ್ನು ಪ್ರೀತಿಸಿದಂತೆ ಪ್ರೀತಿ ಸುತ್ತಾಳೆ” ಎಂದು ಕೊಳ್ಳುತ್ತಾ ಬಾಗಿಲು ಹಾಕಿಕೊಂಡು ಪುನಃ ಮಲಗಿದಳು. ಬೆಳಗಾಗುವ ಮೊದಲು ಪದ್ಮಾ ಹಿಂದಿರುಗುವ ನಿರೀಕ್ಷೆ ಅವಳಿಗಿರಲಿಲ್ಲ

ಲತಾ ವಾಸಮಾಡುತ್ತಿದ್ದ ಮನೆ ಅದೇ ಬೀದಿಯಲ್ಲಿತ್ತೆಂದು ಹಿಂದೆ ತಿಳಿಸಿದೆ. ಎರಡು ಮೂರು ನಿಮಿಷಗಳೊಳಗಾಗಿ ಪದ್ಮಾ ಅಲ್ಲಿಗೆ ಬಂದಳು ಮನೆಯಲ್ಲಿ ವಿದ್ಯುದ್ದೀಪ ಉರಿಯುತ್ತಿದ್ದದ್ದು ಅವಳಿಗೆ ಆಶ್ಚರ್ಯವನ್ನುಂಟು ಮಾಡಿತು. ಸಮೀಪದ ಮನೆಯಲ್ಲಿ ಹನ್ನೆರಡು ಗಂಟೆ ಹೊಡೆಯುತ್ತಿದ್ದದ್ದು ಕೇಳಿಸಿತು. ಕ್ಷಣಕಾಲ ಬಾಗಿಲ ಹತ್ತಿರ ಏನೋ ಯೋಚಿಸುತ್ತ ನಿಂತು ಬಳಿಕ ದಡ ದಡ ತಟ್ಟಿದಳು.

ಮಂಗೇಶ ಒಳಗಿನಿಂದಲೆ “ ಯಾರು ?” ಎಂದು ಕೇಳಿದ

“ ನಾನು ಪದ್ಮಾ ಬಾಗಿಲು ತೆಗೆಯಿರಿ .”

ಚಿಲಕ ತೆಗೆದ ಶಬ್ದವಾಯಿತು. ಮಂಗೇಶ ಬಾಗಿಲು ಬಿಚ್ಚಿ “ ಇದೇನು ಪದ್ಮಾ, ಇಷ್ಟುಹೊತ್ತಿನಲ್ಲಿ ?'' ಎಂದ

“ ಲತಾ ಏನು ಮಾಡುತ್ತಿದ್ದಾಳೆ ?”

ಪದ್ಮಾ ಹೊಸಿಲು ದಾಟಿ ಹಾಲಲ್ಲಿ ನಿಂತು ಕೇಳಿದಳು

“ ನಿದ್ರೆ ಮಾಡುತ್ತಿದ್ದಾಳೆ ”

ಎಂದು ಹೇಳಿ ಮಂಗೇಶ ಮಲಗುವ ಮನೆಯ ಕಡೆ ಕೈತೋರಿಸಿದ ಪದ್ಮಾ ಒಳಗೆ ಹೋದಳು. ಸಣ್ಣ ದೀಪ ಉರಿಯುತ್ತಿತ್ತು. ಅದರ ಮಸಕಾದ ಬೆಳಕಿನಲ್ಲಿ ಲತಾ ಮಲಗಿರುವುದನ್ನು ಕಂಡಳು. ಸಂಜೆ ತಿರುಗಾಡಲು ಹೋದಾಗ ಉಟ್ಟಿದ್ದ ಗುಲಾಬಿರಂಗಿನ ಜಾರ್ಜೆಟ್ ಸೀರೆಯನ್ನೇ ಉಟ್ಟಿದ್ದಾಳೆ.

ಮುಖ ಬಾಡಿದೆ, ಕಣ್ಣು ಮುಚ್ಚಿದೆ. ಪದ್ಮಾ ಪ್ರಶ್ನಾರ್ಥಕ ದೃಷ್ಟಿಯಿಂದ ಮಂಗೇಶನ ಕಡೆ ನೋಡಿದಳು.

" ಸಂಜೆಯಿಂದ ಮೈ ಸ್ವಸ್ಥವಿಲ್ಲ "–ಮಂಗೇಶ ಹೇಳಿದ.

" ಎಂಟು ಗಂಟೆಯಲ್ಲಿ ಚನ್ನಾಗಿದ್ದಳು. ನಾನು ಮನೆಗೆ ಬಂದು, ಬಿಟ್ಟು ಹೋದೆ "

ಎನ್ನುತ್ತಾ ಪದ್ಮಾ ಮಂಚದ ಹತ್ತಿರ ಹೋಗಿ ಮೈ ಮೇಲೆ ಕೈಯಿಟ್ಟು ಮೃದು ಕಂಠದಿಂದ " ಲತಾ " ಎಂದು ಕೂಗಿದಳು

ಲತಾ ಬೆಚ್ಚಿ ಎಚ್ಚರಗೊಂಡಳು ಬಿರು ದನಿಯಿಂದ " ಇದೇನು ಪುನಃ " ಎಂದಳು ಎದುರಿಗೆ ಪದ್ಮಳನ್ನು ಕಂಡಾಗ ಅವಳ ಕಣ್ಣಿನ ಬೆದರಿಕೆಯ ನೋಟ ಶಾಂತವಾಯಿತು

" ಏಕೆ ಲತಾ ? ಏನಾಯಿತು ?"

ಪದ್ಮಾ ಮಗ್ಗುಲಲ್ಲಿ ಕುಳಿತು ಕೇಳಿದಳು

" ಇವರ ಸಹಾಯದಿಂದ ಷರೀಫ್ ಮೇಲೆ ಬಿದ್ದು ಬಲಾತ್ಕರಿಸಿದ. ಕೂಗಿಕೊಂಡೆ. ನೀನು ಬಂದೆ, ಪದ್ಮಾ, ಈಗ ಧೈರ್ಯವಾಯಿತು "

ಪದ್ಮಾ ಚಕಿತೆಯಾದಳು ಮಂಗೇಶನ ಕಡೆ ತಿರುಗಿ ಬಿರುದನಿಯಿಂದ " ಇದೇನು ನಿಮ್ಮ ಪತ್ನಿ ಹೇಳುವುದು ಮಂಗೇಶರಾವ್ ?" ಎಂದು ಪ್ರಶ್ನಿಸಿದಳು

" ಲತಾ ಹೇಳುವುದನ್ನು ನಂಬಬೇಡಿ, ಪದ್ಮಾ ಮದುವೆಯಾಗಿ ಮುಟ್ಟುವ ಅಧಿಕಾರವಿಲ್ಲವೇ ನನಗೆ ? ಒಂದು ದಿನ ಸರಿ ಹೋಗುವುದೆಂದು ಇಲ್ಲಿಯವರೆಗೆ ಸುಮ್ಮನಿದ್ದೆ ಈ ದಿನ ರಗಳೆಯಾಯಿತು ನಿದ್ದೆಗಣ್ಣಲ್ಲಿ ನನ್ನನ್ನು ನೋಡಿ ಷರೀಫ್ ಎಂದು ತಿಳಿದು ಕೂಗಿಕೊಂಡಳು ದೂರ ಸರಿದೆ. ಅಷ್ಟೇ ನಡೆದದ್ದು "

ಮಂಗೇಶ ಧೈರ್ಯವಾಗಿಯೇ ಮಾತಾಡಿದ ಆದರೆ ಅವನು ಹೇಳಿದ್ದು ಅಸತ್ಯವೆಂದು ಪದ್ಮಾ ಕೂಡಲೆ ತಿಳಿದಳು

" ಇನ್ನೇನೂ ಭಯವಿಲ್ಲ. ನಾನು ಇಲ್ಲೇ ಇರುತ್ತೇನೆ ನೀನು ನಿದ್ರೆ ಮಾಡು "

ಎಂದು ಲತಾಂಗಿಯನ್ನು ಸಮಾಧಾನ ಮಾಡಿ, " ನಿಮ್ಮ ಆ ಗೆಳೆಯ

ರೆಲ್ಲಿ ?" ಎಂದು ಮಂಗೇಶನನ್ನು ಕೇಳಿದಳು

" ಹೊರಗಿನ ಕೊಟಡಿಯಲ್ಲಿ ಕುಳಿತಿದ್ದಾರೆ "

" ನಡೆಯಿರಿ. ನಾನವರನ್ನು ನೋಡಬೇಕು "

ಎಂದು ಪದ್ಮಾ ಹಾಲನ್ನು ದಾಟಿ ಕೊಟಡಿಯ ಕಡೆ ಹೋದಳು

— ೩ —

ಪರೀಘನ ಜೀವನದಲ್ಲಿ ಹೆಣ್ಣು ಹೊನ್ನು ಎಲ್ಲಕ್ಕಿಂತ ಹೆಚ್ಚಿನ ಉನ್ನತ ಸ್ಥಾನ ಪಡೆದಿದ್ದುವು. ಹೆಣ್ಣಿಗಾಗಿ ಅವನು ಎಷ್ಟು ಹೊನ್ನಾಗಲಿ ಕರ್ಚು ಮಾಡಲು ಸಿದ್ಧನಾಗಿದ್ದ ಪ್ರತಿ ಹೆಣ್ಣಿಗೂ ಒಂದು ಬೆಲೆಯಿದೆಯೆಂಬುದು ಅವನ ವಿಶ್ವಾಸ ಪ್ರಣಯಾರ್ಥಿ ಆ ಬೆಲೆ ಕೊಡಲು ಸಿದ್ಧನಾದಾಗ ಅಪೇಕ್ಷೆ ಯೂ ಸಿದ್ಧಿಸುವುದೆಂದು ಅವನು ಹೇಳುತ್ತಿದ್ದ

ವಿವಾಹಕ್ಕೆ ಆಹ್ವಾನಿತನಾಗಿ ಬಂದು ಲತಾಂಗಿಯನ್ನು ನೋಡಿದಾಗಲೆ ಅವನ ಲೋಭ ದೃಷ್ಟಿ ಆ ಕಡೆ ತಿರುಗಿತು ಸುಂದರಮ್ಮನ ಪೂರ್ವೋತ್ತರ ತಿಳಿದಿದ್ದುದರಿಂದ ಅವಳ ಮುಖಾಂತರ ತನ್ನ ಆಸೆ ಪೂರೈಸಿಕೊಳ್ಳಬಹುದೆಂದು ಭಾವಿಸಿ ಬಲೆ ಬೀರಲು ಪ್ರಾರಂಭಿಸಿದ ಸುಂದರಮ್ಮನ ಪ್ರಯತ್ನ ವಿಫಲ ವಾಗಿ ಮಂಗೇಶ ಪ್ರತ್ಯೇಕ ಮನೆ ಮಾಡಲು ನಿರ್ಧರಿಸಿದಾಗಲೂ ಅವನು ನಿರಾಶನಾಗಲಿಲ್ಲ ತನ್ನ ದುರಭಿಸಂಧಿಗೆ ಮಂಗೇಶನ ಸಹಾಯ ಪಡೆಯುವ ಉದ್ದೇಶದಿಂದ ಕೇಳಿದ ಕೂಡಲೆ ೫೦೦ ರೂಪಾಯಿ ಸಾಲಕೊಟ್ಟ ಮಂಗೇಶ ನಿಗೆ ವಿಷಯ ತಿಳಿದಿದ್ದರೂ ದುಡ್ಡಿನ ಆಸೆ ಬಲವಾಗಿತ್ತು ಪರೀಘನ ಚಾಪಲ್ಯ ವನ್ನು ತನ್ನ ಅನುಕೂಲಕ್ಕಾಗಿ ಉಪಯೋಗಿಸಿ ಕೊಳ್ಳಲು ಯೋಚಿಸಿ, ಪುನಃ ೫೦೦ ರೂಪಾಯಿ ಸಾಲ ಕೊಡ-ವಂತೆ ಕೇಳಿದ ಒಂದೆರಡು ತಿಂಗಳಾ ದರೂ ವ್ಯವಹಾರ ಮುಂದುವರಿಯದಿದ್ದುದನ್ನು ಕಂಡು ಪರೀಘನಿಗೆ ಸಂದೇಹ ಕ್ಕಿಟ್ಟುಕೊಂಡಿತು. ಕೊನೆಗೆ ಬೆಂಗಳೂರಿಗೆ ಬಂದು ಮಂಗೇಶನ ಮನೆಯಲ್ಲಿ ಇಳಿದುಕೊಂಡ ಲತಾ ಸಿನಿಮಾಕ್ಕೆ ಬಾರದಿದ್ದುದು ಅವನಿಗೆ ಅಸಮಾಧಾನ ಉಂಟು ಮಾಡಿತು ಪ್ರಾರಂಭದಲ್ಲಿ ಎಲ್ಲವೂ ಹೀಗೇ, ಕ್ರಮೇಣ ಸರಿ

ಹೋಗುವುದು, ಮಂಗೇಶ ಕೈಯಲ್ಲಿರುವಾಗ ಭಯವೇನು ? ಎಂದುಕೊಂಡು ತನ್ನ ಅಭಿಲಾಷೆ ಆ ದಿನ ಪೂರೈಸಬೇಕೆಂಬ ನಿರ್ಧಾರದಿಂದ ಮನೆಗೆ ಹಿಂದಿರುಗುವ ಮೊದಲು ಪಾನಮಾಡಿ ಸಂಗಡ ಬ್ರಾಂದಿ ಬಾಟಲೊಂದನ್ನು ತೆಗೆದುಕೊಂಡು ಬಂದಿದ್ದ. ಗಂಡಹೆಂಡಿರ ಜಗಳದಲ್ಲಿ ಲತಾ ಭಾವಾವೇಶದಿಂದ ಮೂರ್ಛಿತೆಯಾದಾಗ ಮಂಗೇಶನ ಕೈಯಲ್ಲಿ ಕಳುಹಿಸಿದ್ದ ನೀರು ಬೆರೆಸಿದ ಆ ಪಾನೀಯವನ್ನೇ ಮಂಗೇಶ ಎರಡನೆಯ ಸಾರಿ ಇನ್ನಷ್ಟು "ಬ್ರಾಂದಿ" ತೆಗೆದುಕೊಂಡು ಹೋದಾಗ ಷರೀಫನಿಗೆ ಸಂತೋಷವಾಯಿತು. ಪರಿಸ್ಥಿತಿ ಪಕ್ವವಾಯಿತೆಂದು ಭಾವಿಸಿಕೊಂಡ.

ಲತಾ ಪ್ರಜ್ಞಾಶೂನ್ಯೆಯಾಗಿ ಮಲಗಿರುವುದನ್ನು ಕಂಡು ಮಂಗೇಶ ಕೊಟಡಿಗೆ ಹಿಂದಿರುಗಿದಾಗ ಷರೀಫ್ ಅಮಲಿನ ಉತ್ಸಾಹದಲ್ಲಿದ್ದ ಅವನು ಮಂಗೇಶನನ್ನು ಕುರ್ಚಿಯ ಮೇಲೆ ಬಲವಂತದಿಂದ ಕುಳ್ಳಿರಿಸಿ ಲತಾಂಗಿ ಮಲಗಿದ್ದ ಕೋಣೆಗೆ ಹೋದ ಮಂಗೇಶ ತಡೆಯಲಿಲ್ಲ ಚಲಿಸಲಿಲ್ಲ. ಮೇಜಿನ ಮೇಲೆ ತಲೆಯಿಟ್ಟು ದೀರ್ಘವಾಗಿ ನಿಟ್ಟುಸಿರಿಟ್ಟ ಲಜ್ಜೆ, ಅಪಮಾನ ಮತ್ತು ದೌರ್ಬಲ್ಯದ ಸೂಚಕವಾಗಿ ಅವನ ಕಣ್ಣುಗಳಿಂದ ಎರಡು ಕಂಬನಿಗಳು ಕೆಳಗುರುಳಿದವು

ಲತಾಂಗಿ ಚೀರಿದುದನ್ನು ಕೇಳಿದಾಗ ಅವನು ಬೆಚ್ಚಿ ಕುರ್ಚಿಯಿಂದೆದ್ದು ಒಳಗೆ ಹೋದ. ಲತಾ ಬಿರುಗಣ್ಣುಗಳಿಂದ ನೀರವವಾಗಿ ಷರೀಫನ ಕಡೆ ನೋಡುತ್ತಿದ್ದಳು. ಷರೀಫ್ ಮಂಚದ ಹತ್ತಿರ ಸ್ತಬ್ಧನಾಗಿ ನಿಂತಿದ್ದ. ಮದ್ಯದ ಅಮಲಿನಲ್ಲಿಯೂ ತನ್ನಿಂದ ದಾಟಲಾಗದ ಬೇಲಿಯೊಂದು ಎದುರಿಗಿದೆಯೆಂದು ಷರೀಫನಿಗೆ ಗೋಚರವಾಯಿತು. ತಾನು ಕಾಣುತ್ತಿರುವುದು ಕನಸೇ ವಾಸ್ತವವೇ ಎಂಬುದನ್ನು ನಿರ್ಧರಿಸಲಾರದೆ ಲತಾ ವಿಚಲಿತೆಯಾಗಿದ್ದಳು.

ಮಂಗೇಶ ಷರೀಫನ ಕೈ ಹಿಡಿದು ಹೊರಗೆ ಕರೆದುಕೊಂಡು ಹೋದ. ತೂರಾಡುತ್ತ ಮೊದಲಿದ್ದ ಬೀದಿಯ ಕಡೆ ಕೊಟಡಿಯನ್ನು ಪ್ರವೇಶಿಸಿದಾತ Bloody cat!' ಎಂದು ಒದರಿದ.

ಆಶಾಭಂಗದ ಉರಿ ಶಾಂತವಾಗಲು ಅವನಿಗೆ ಮತ್ತಷ್ಟು ಮದ್ಯ ಬೇಕಾಯಿತು ಸೀಸೆಯಲ್ಲಿದ್ದುದೆಲ್ಲವನ್ನೂ ಬಗ್ಗಿಸಿ ಕೊಂಡು ಕುಡಿದ, ಹತ್ತಾರು ಮಂದಿಯನ್ನು ತಿಂದ ನರ ಭಕ್ಷಕ ವ್ಯಾಘ್ರ ಒಂದು ಸೋಲಿಗೆ

ಹಿಮ್ಮೆಟ್ಟುವುದೇ ? ಇನ್ನೂ ರಾತ್ರಿ ಬಹಳ ಹೊತ್ತು ಉಳಿದಿದೆ. ಮಂಗೇಶ ಬರಲಿ, ಇನ್ನೊಂದು ಕೈ ನೋಡುತ್ತೇನೆ ಎಂದು ಸಮಾಧಾನ ಮಾಡಿಕೊಂಡು ಬಟ್ಟಲು ಬರಿದು ಮಾಡಿದ

ಆಗ ಅವನಿಗೆ ದೀರ್ಘ ಕಾಯಳಾದ ಹೆಂಗಸೊಬ್ಬಳು ಬಾಗಿಲಲ್ಲಿ ನಿಂತಿದ್ದದ್ದು ಗೋಚರವಾಯಿತು ಪದ್ಮಾ ಬೀದಿಯ ಬಾಗಿಲು ತಟ್ಟಿದುದನ್ನು ಅವನು ಅಮಲಿನಲ್ಲಿ ಗಮನಿಸಿರಲಿಲ್ಲ ಮನೆಯಲ್ಲಿ ಮಂಗೇಶ ಮತ್ತು ಅವನ ಪತ್ನಿ ಇಬ್ಬರೇ ಇದ್ದರೆಂದು ಭಾವಿಸಿದ್ದ ಈಗ ತನ್ನ ಮುಂದೆ ನಿಂತ ಯುವತಿ ಯಾರು ಎಂದು ಸ್ತಬ್ಧನಾದ

ಮಧ್ಯಪಾಯಿಗಳು ಹೆಸರು ಬಣ್ಣದ ಆಕಾಶದಲ್ಲಿ ಹಳದಿ ಬಣ್ಣದ ಎರಡು ಚಂದ್ರಮಂಡಲಗಳನ್ನು ನೋಡಿದ ಕತೆಯನ್ನು ಅವನು ಆಗಾಗ ಹೇಳುತ್ತಿದ್ದ. ಈಗ ತಾನೂ ಅಮಲಿನಲ್ಲಿ ಒಬ್ಬರಿದ್ದ ಕಡೆ ಇಬ್ಬರು ಹೆಂಗಸರನ್ನು ಕಾಣುತ್ತಿರುವುದಾಗಿ ತಿಳಿದ ಇವರಲ್ಲಿ ನಿಜವಾದ ಲತಾ ಯಾರು ? ಮಂಚದ ಮೇಲೆ ಮಲಗಿದ್ದವಳೇ ? ಬಾಗಿಲಲ್ಲಿ ನಿಂತಿರುವವಳೇ ? ಒಬ್ಬ ಹೆಣ್ಣು ಎರಡು ಬೇರೆ ಬೇರೆ ರೂಪದಲ್ಲಿ ಕಾಣುವುದು ಹೇಗೆ ಸಾಧ್ಯ ?

"ನೀನು ಯಾರು, ಪ್ಯಾರಿ ?" ಎನ್ನುತ್ತಾ ಷರೀಫ್ ಸಿನಿಮಾದಲ್ಲಿ ಕೇಳಿದ್ದ "ಜಿಂದಗೀ ತುಮ್ಹಾರೀ ! ಉಲ್ಫತ್ ತುಮ್ಹಾರಿ" ಎಂಬ ಹಾಡನ್ನು ಗೊಣಗುತ್ತಾ ಕೈ ನೀಡಿ ಪದ್ಮಳನ್ನು ಆಲಿಂಗಿಸಲು ಮುಂದೆ ಸಾಗಿದ.

ಪದ್ಮಾ ಒಂದಡಿ ಉದ್ದದ ದೊಡ್ಡ ವಿದ್ಯುತ್ ಕೈ ದೀಪ ಸಂಗಡ ತಂದಿದ್ದಳು ಷರೀಫನ ತಲೆಗೆ ಗುರಿಯಿಟ್ಟು ಅದರಿಂದ ಬಲವಾಗಿ ಹೊಡೆದಳು. ಅವನು "ಹ್ಹಾ" ಎನ್ನುತ್ತಾ ಕೆಳಗೆ ಬಿದ್ದು, ಒಂದಕ್ಕೆ ಎರಡು, ಎರಡಕ್ಕೆ ನಾಲ್ಕು, ನಾಲ್ಕಕ್ಕೆ ಎಂಟು ಈ ರೀತಿ ಅಪ್ಸರೆಯರ ತಂಡವೇ ತನ್ನ ಸುತ್ತು ಕುಣಿಯುತ್ತಿದ್ದಂತೆ ಭಾಸವಾಗಿ ಎಚ್ಚರ ತಪ್ಪಿದ

ಪದ್ಮಾ ಬಾಗಿಲು ಮುಚ್ಚಿ ಮೇಜಿನ ಮೇಲಿದ್ದ ಬೀಗದಿಂದ ಚಿಲಕವನ್ನು ಭದ್ರಪಡಿಸಿ ಬೀಗದ ಕೈ ತನ್ನಲ್ಲಿಟ್ಟುಕೊಂಡು ಮಂಗೇಶನ ಕಡೆ ತಿರುಗಿದಳು. ಅವಳ ಕಣ್ಣುಗಳಿಂದ ಕೆಂಡಗಳು ಉದುರುತ್ತಿದ್ದವು ಮಂಗೇಶ ಅದರ ತೀವ್ರತೆಗೆ ಬೆದರಿ ಹಿಂದೆ ಸರಿದ. ಅವನ ಕಾಲುಗಳು ನಡುಗುತ್ತಿದ್ದವು.

"ಗಿಣಿಯನ್ನು ಸಾಕಿ ಬೆಕ್ಕಿನ ಬಾಯಿಗೆ ಕೊಟ್ಟಂತಾಯಿತು ನಿನಗೆ

ಲತಾನ ಮದುವೆ ಮಾಡಿದ್ದು ಬೆಳಿಗ್ಗೆ ಪೋಲೀಸರನ್ನು ಕರೆಸಿ ನಿನ್ನ ಸ್ನೇಹಿತ ನನ್ನ ಅವರಿಗೊಪ್ಪಿಸುತ್ತೇನೆ."

ಎಂದು ಬಿರುದನಿಯಿಂದ ಹೇಳಿದಳು.

"ಮೋಸ ಹೋದೆ, ಪದ್ಮಾ. ಷರೀಫ್ ಇಂಥವನೆಂದು ತಿಳಿದಿರಲಿಲ್ಲ. ಬೆಳಗಾಗ ಗಾಡಿ ತಂದು ಅವನನ್ನು ಕಳುಹಿಸಿ ಬಿಡುತ್ತೇನೆ. ಪೋಲೀಸರಿಗೆ ವಿಷಯ ತಿಳಿದರೆ ರಾದ್ಧಾಂತವಾಗುತ್ತದೆ."

ಮಂಗೇಶ ಅಂಗಲಾಚಿದ ಪದ್ಮಳ ಸ್ಥಿರತೆಯನ್ನು ಕಂಡು ಕಣ್ಣೀರು ಹಾಕಿದ. ಕೊನೆಗೆ ಕಾಲು ಹಿಡಿದ

ಪದ್ಮಳ ಕೋಪ ಇಮ್ಮಡಿಯಾಯಿತು "ನಿನ್ನಲ್ಲಿ ಸ್ವಲ್ಪವಾದರೂ ಮನುಷ್ಯತ್ವವಿದೆಯೆಂದು ಭಾವಿಸಿದ್ದೆ. ಅದೂ ಇಲ್ಲ. ನೀನೊಂದು ಹೀನ ಪಶು. ಮಾನವಿಲ್ಲದ ನಾಯಿ. ನಿನಗೆ ಇದೇ ಶಾಸ್ತಿ" ಎಂದು ಹೇಳಿ ಕೆನ್ನೆಗೆ ಹೊಡೆದು ಕಾಲು ಬಿಡಿಸಿಕೊಂಡಳು. ಮಂಗೇಶ ತಲೆಯ ಮೇಲೆ ಕೈಯಿಟ್ಟುಕೊಂಡು ಅಲ್ಲಿಯೇ ಕುಳಿತ ಬಿಟ್ಟ.

ಪದ್ಮಾ ಮಲಗುವ ಮನೆಗೆ ಹಿಂದಿರುಗಿದಾಗ ಲತಾ ಯೋಚಿಸುತ್ತ ಮುಖ ಮುಚ್ಚಿಕೊಂಡು ಮಲಗಿದ್ದಳು.

"ನಿದ್ರೆ ಬಂತೆ, ಲತಾ ?—ಪದ್ಮಾ ಕೇಳಿದಳು.

"ಇನ್ನು ಈ ಮನೆಯಲ್ಲಿ ನಿದ್ರೆ! ನೀನು ಬಾರದಿದ್ದರೆ ಬೆಳಗಿನ ಹೊತ್ತಿಗೆ ನಾನೇನಾಗುತ್ತಿದ್ದೆನೋ ?"

"ಏನಾಗುತ್ತಿದ್ದೆ! ಹೆಂಗಸರು ಜನ ಭಾವಿಸುವಂತೆ ಅಬಲೆಯರಲ್ಲ. ತಮ್ಮ ಶೀಲವನ್ನು ರಕ್ಷಿಸಿಕೊಳ್ಳುವ ಶಕ್ತಿ ಕೊಟ್ಟಿದ್ದಾನೆ ದೇವರು ಅವರಿಗೆ. ಒಲಿದರೆ ನಾರಿ ಮುನಿದರೆ ಮಾರಿ, ಎಂತ ನೀನು ಕೇಳಿಲ್ಲವೇ ?"

"ಈಗ ಅವರೆಲ್ಲಿ ?"

"ಷರೀಫನನ್ನು ಕೊಟಡಿಯಲ್ಲಿ ಕೂಡಿ ಬೀಗ ಹಾಕಿದ್ದೇನೆ ನಿನ್ನ ಗಂಡ ಹಾಲಲ್ಲಿದ್ದಾನೆ."

ಎಂದು ಹೇಳಿ ಪದ್ಮಾ ಮಂಚದ ಮೇಲೆ ಕುಳಿತು ಲತಾಂಗಿಯ ಮೈ ಸವರುತ್ತಾ "ನೀನು ಎಂತಹ ತೊಡಕಿನಲ್ಲಿ ಬಿದ್ದೆ, ನನ್ನ ಚಿನ್ನಾ" ಎಂದಳು.

ಲತಾಂಗಿಯ ಕಣ್ಣಲ್ಲಿ ನೀರು ಬಂತು. ಪದ್ಮಳ ಹೃದಯದಲ್ಲಿ

ತಲೆಯಿಟ್ಟುಕೊಂಡು ನೀರವವಾಗಿ ಅತ್ತಳು. ಬಹಳ ಹೊತ್ತಿನ ಮೇಲೆ ಹೇಳಿದಳು

"ಬೆಳಗಾಗುತ್ತಲೆ 'ವಿಶ್ವಮಿತ್ರ' ಕಛೇರಿಗೆ ಫೋನ್ ಮಾಡಿ ಜೋಷಿಯವರಿಗೆ ಬರುವಂತೆ ಹೇಳು ಕಛೇರಿಯ ಮೇಲೇ ಅವರ ವಾಸ. ಪ್ರತ್ಯೇಕ ಫೋನಿದೆ"

"ಪೋಲೀಸಿಗೆ ಕಂಪ್ಲೈಂಟ್ ಕೊಟ್ಟು ಷರೀಫನನ್ನ ಅವರಿಗೊಪ್ಪಿಸಿ ಬಿಡುತ್ತೇನೆ"

"ಕಂಪ್ಲೈಂಟ್ ಕೊಟ್ಟರೆ ನಾನು ಪೋಲೀಸರೆದುರು ನಿಲ್ಲಬೇಕಾಗುವುದು. ಅದು ಸಾಧ್ಯವಿಲ್ಲ ಪದ್ಮಾ ಜೋಷಿಯವರು ಬರಲಿ ಅವರ ಸಲಹೆಯಂತೆ ಮಾಡೋಣ"

ಮಂಗೇಶ ಹೊರಗೆ ನಿಂತು ಈ ಮಾತುಗಳನ್ನೇ ಕೇಳುತ್ತಿದ್ದ. ಈಗ ಒಳಗೆ ಬಂದು "ನನ್ನನ್ನುಳಿಸು, ಪದ್ಮಾ. ಪೋಲೀಸರು ಬಂದರೆ ನಾನು ಪ್ರಾಣ ಕಳೆದುಕೊಳ್ಳುತ್ತೇನೆ" ಎಂದು ಬೇಡಿಕೊಂಡ

ಪದ್ಮಾ ಉತ್ತರ ಕೊಡಲಿಲ್ಲ. ಲತಾಂಗಿಯ ಮುಖ ನೋಡಿದಳು. ನೀರವವಾಗಿ ಇಬ್ಬರ ಕಣ್ಣುಗಳಿಗೆ ಏನು ಮಾತು ನಡೆಯಿತೆಂಬುದು ಮಂಗೇಶನಿಗೆ ಅರ್ಥವಾಗಲಿಲ್ಲ. ಸ್ವಲ್ಪ ಹೊತ್ತಿನಮೇಲೆ ಪದ್ಮಾ ಅವನ ಕಡೆ ತಿರುಗಿ,

"ಈಗ ನೀವು ಹೋಗಿ ಬೆಳಿಗ್ಗೆ ಏನು ಮಾಡಬೇಕೆಂಬುದನ್ನು ಗೊತ್ತು ಮಾಡೋಣ"—ಎಂದಳು.

ಪದ್ಮಳ ಸ್ಥಿರ ದೃಷ್ಟಿ, ಕಠಿಣ ಕಂಠ ಇವುಗಳಿಂದ ಮಂಗೇಶ ನಿರುತ್ತರನಾದ ಬೆದರಿದ ನಾಯಿ ಬಾಲ ಮುದರಿ ಹಿಂದಕ್ಕೆ ಸರಿಯುವಂತೆ ತಲೆ ತಗ್ಗಿಸಿಕೊಂಡು ಅಲ್ಲಿಂದ ಹೊರಟುಹೋದ.

—೪—

ದಿನ ಪತ್ರಿಕೆಯ ಕಛೇರಿಯಲ್ಲಿ ರಾತ್ರಿ ಮೂರು ಗಂಟೆ ಬಹಳ ಅವಸರದ ಸಮಯ ಟೆಲಿಪ್ರಿಂಟರಲ್ಲಿ ಅಂದಿನ ಸುದ್ದಿ ಸಾರ, ಕೊನೆಯ ವಿವರಣೆ ಮತ್ತು ತಲೆ ಬರಹದ ವಾರ್ತೆಗಳು ಒಂದೊಂದಾಗಿ ಬರುತ್ತಿದ್ದವು ರಾತ್ರಿ ಸರದಿಯ ಸಂಪಾದಕರು ಅವುಗಳನ್ನು ಆರಿಸಿ ಕನ್ನಡಕ್ಕೆ ಭಾಷಾಂತರಿಸುತ್ತಿದ್ದರು. ಅಂದಿನ ಮುಖ್ಯ ವಾರ್ತೆಯೇನು ? ತಲೆ ಬರಹ ಯಾವುದಕ್ಕೆ ? ಯಾವ ಸುದ್ದಿಗೆ ಎರಡು ಕಾಲಂ ಮೇಲ್ಪಂಕ್ತಿ ಕೊಡಬೇಕು ? ಇತ್ಯಾದಿ ವಿಚಾರಗಳು ನಿರ್ಧರವಾಗಿ ಕೈ ಬರಹದ ಪ್ರತಿಗಳು ಅಚ್ಚುಕೂಟಕ್ಕೆ ಕಳುಹಿಸಲ್ಪಟ್ಟಿದ್ದವು.

ಇವೆಲ್ಲವನ್ನೂ ನೋಡಿಕೊಂಡು, ಮರುದಿನ ಪ್ರಕಟವಾಗುವ ಪತ್ರಿಕೆಯ ರೂಪುರೇಷೆಗಳನ್ನು ಸುದ್ದಿ ಸಂಪಾದಕರೊಡನೆ ನಿರ್ಧರಿಸಿ ಜೋಷಿ ನಾಲ್ಕು ಗಂಟೆ ಸುಮಾರಿಗೆ ಮೂರನೆಯ ಅಂತಸ್ತಿನ ತನ್ನ ಬಿಡಾರಕ್ಕೆ ಹೋದ. ಅಂದಿನ ಘಟನೆಗಳಿಂದ ಆಯಾಸಗೊಂಡಿದ್ದುದರಿಂದ ಮಲಗಿದ ಕೂಡಲೆ ನಿದ್ರೆ ಬಂದಿತು. ಬೆಳಕು ಹರಿದ ಮೊದಲು ಐದು ಗಂಟೆ ಹೊತ್ತಿಗೆ ಮಂಚದ ಪಕ್ಕದಲ್ಲಿದ್ದ ಟೆಲಿಫೋನ್ ಹೊಡೆದುಕೊಂಡಾಗ ಎಚ್ಚರವಾಯಿತು.

" ಜೋಷಿ ಸ್ಪೀಕಿಂಗ್. ಯಾರು ನೀವು ?"

ರಿಸೀವರ್ ಕೈಗೆ ತೆಗೆದುಕೊಂಡು ಪ್ರಶ್ನಿಸಿದ.

" ಪದ್ಮಾ ಆನಂದಪುತ್ರಿ ನನ್ನ ಹೆಸರು, ನಿಮ್ಮ ಆಫೀಸಲ್ಲಿ ಕೆಲಸ ಮಾಡುವ ಲತಾ ನನ್ನ ಗೆಳತಿ."

ಟೆಲಿಫೋನಲ್ಲಿ ಉತ್ತರ ಬಂತು. ಲತಾಂಗಿಯ ಹೆಸರು ಕೇಳಿ ಆಸಕ್ತಿಯಿಂದ " ಏನು ಸಮಾಚಾರ ?" ಎಂದ

" ಲತಾ ಅಸ್ವಸ್ಥೆಯಾಗಿದ್ದಾಳೆ ನಿಮಗೆ ತೊಂದರೆಯಿಲ್ಲದಿದ್ದರೆ ಬಂದು ನೋಡಬೇಕಾಗಿ ಅಪೇಕ್ಷಿಸುತ್ತಾಳೆ "

" ಬರುತ್ತೇನೆ. ಮನೆಯ ಪರಿಚಯವಿಲ್ಲ."

"—ನೆ ಕ್ರಾಸ್, ಮಲ್ಲೇಶ್ವರ.—ನೆ ನಂಬರ್ ಮನೆ."

" ಸರಿ. ಇನ್ನೊಂದು ಗಂಟೆ ಬಿಟ್ಟುಕೊಂಡು ಬರುತ್ತೇನೆ."

" ತಡವಾಗುವುದು. ಈಗಲೇ ಬಂದರೆ ಉತ್ತಮ."

" ಏನಾದರೂ ಭಯವಿದೆಯೇ ?"

" ಅಂತಹದೇನೂ ಇಲ್ಲ. ನೀವು ಬಂದರೆ ಗೊತ್ತಾಗುವುದು."

" ಬರುತ್ತೇನೆ."

ಎಂದು ಹೇಳಿ ಜೋಷಿ ಎದ್ದು ಶೌಚಾದಿಗಳನ್ನು ಮುಗಿಸಿಕೊಂಡು ಹೊರಡಲು ಸಿದ್ಧನಾದ ಅವನ ಉಪಯೋಗಕ್ಕಾಗಿಯೇ ಒಂದು ಕಾರಿತ್ತು. ಅದನ್ನು ಕೂಡಲೆ ತರುವಂತೆ ಹೇಳಿ ಕಳುಹಿಸಿದ

ಕಾರು ಮನೆಯ ಹತ್ತಿರ ಬಂದಾಗ ಪದ್ಮಾ ಹೊರಗೆ ನಿಂತಿದ್ದಳು ಲತಾ ಕೊಟ್ಟ ಪರಿಚಯದಿಂದ ಜೋಷಿಯೇ ಎಂಬುದನ್ನು ತಿಳಿದು ಸ್ವಾಗತಿಸಿ ಒಳಗೆ ಕರೆದುಕೊಂಡು ಹೋದಳು ಲತಾ ಹಾಲಲ್ಲಿ ಅವನ ಬರವನ್ನು ನಿರೀಕ್ಷಿಸುತ್ತಿದ್ದಳು ಅವಳ ಬಾಡಿದ ಮುಖ ಮತ್ತು ಸೊರಗಿದ ದೇಹ ಲತೆಯನ್ನು ನೋಡಿ ಜೋಷಿ ಚಕಿತನಾದ ನಿನ್ನೆ ಕಛೇರಿಯಿಂದ ಹೊರಟಾಗ ಉತ್ಸಾಹದಿಂದಿದ್ದವಳು ಒಂದು ರಾತ್ರಿಯಲ್ಲಿ ಹೀಗಾದ ಕಾರಣವೇನು ? " ಏಕೆ ಲತಾ ? ಏನಾಯಿತು ?" ಆಸಕ್ತಿ ಆತುರಗಳಿಂದ ಅವನು ಪ್ರಶ್ನಿಸಿದ.

ಪದ್ಮಾ ನಡೆದುದೆಲ್ಲವನ್ನೂ ವಿವರಿಸಿ ಹೇಳಿದಳು. ಮನೆಯ ಹಿಂಭಾಗ ದಲ್ಲಿದ್ದ ಮಂಗೇಶ ಆ ಕಡೆ ಸುಳಿಯಲೂ ಇಲ್ಲ ಜೋಷಿ ಎಲ್ಲವನ್ನೂ ಕೇಳಿ ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಬಳಿಕ, " ಇದು ಪೋಲೀಸಿಗೆ ಹೋಗುವ ವಿಚಾರವಲ್ಲ. ನಾನು ಪರೀಫನ ಸಂಗಡ ಮಾತಾಡುತ್ತೇನೆ" ಎಂದು ಕೊಟಡಿಯ ಬೀಗ ತೆರೆದ

ಇಷ್ಟೊಂದು ರಾದ್ಧಾಂತಕ್ಕೆ ಕಾರಣನಾದ ವ್ಯಕ್ತಿ ಕೊಟಡಿಯೊಳಗೆ ಮೇಜಿನ ಮೇಲೆ ಕಾಲಿಟ್ಟು ಕುಳಿತಿದ್ದಂತೆ ನಿದ್ರೆ ಮಾಡುತ್ತಿದ್ದ. ಎದುರಿಗೆ ಬರಿದಾದ " ಬ್ರಾಂದಿ " ಬಾಟಲ್ ಮತ್ತು ಗ್ಲಾಸುಗಳಲ್ಲಿ ಸಿಗರೇಟ್ ತುಂಡು ಗಳು ಬಿದ್ದಿದ್ದವು. ವಿದ್ಯುತ್ ಕೈ ದೀಪದಿಂದ ಏಟು ಬಿದ್ದ ಕಡೆ ಊದಿ ಗಾಯವಾಗಿ ರಕ್ತ ಹೆಪ್ಪುಗಟ್ಟಿತ್ತು. ಜೋಷಿ ಅವನನ್ನು ಅಲುಗಾಡಿಸಿ ಎಚ್ಚರಗೊಳಿಸಿದ.

" ಇದೇನು ನಾನೆಲ್ಲಿದ್ದೇನೆ !" ಎಂದು ಷರೀಫ್ ಒದರಿದ.

" ರಾತ್ರಿ ಏನು ನಡೆಯಿತೆಂಬುದು ನಿಮಗೆ ನೆನಪಿದೆಯೇ ?"— ಜೋಷಿ ಕೇಳಿದ.

ಷರೀಫ್ ತಲೆ ಸವರಿಕೊಂಡು, "ಈಗ ನೆನಪಿಗೆ ಬಂತು. ಇದು ಮಂಗೇಶನ ಮನೆಯಲ್ಲವೇ ? ನೀವು ಯಾರು ?"

"ನಾನು ಯಾರೆಂಬುದನ್ನು ಬಳಿಕ ತಿಳಿಸುತ್ತೇನೆ ನೀವು ರಾತ್ರಿ ಕುಡಿದ ಅಮಲಲ್ಲಿ ಅಕ್ರಮ ಪ್ರವೇಶ ಮಾಡಿದಿರಿ ಹೆಂಗಸರ ಮೇಲೆ ಬಿದ್ದಿರಿ. ಈಗ ನಿಮ್ಮನ್ನು ಪೋಲೀಸಿಗೆ ಒಪ್ಪಿಸ ಬೇಕೆಂದು, ಹೇಳಿ ಕಳುಹಿಸಿದ್ದೇನೆ ?"

"ಡ್ಯಾಮಿಟ್ ! ಎಲ್ಲಿ ಆ ಫೂಲ್ ಮಂಗೇಶರಾವ್ ಅವನು ನನ್ನನ್ನು ಈ ಮನೆಗೆ ಕರೆದುಕೊಂಡು ಬಂದ ನನ್ನ ಹತ್ತಿರ ಐನೂರು ರೂಪಾಯಿ ತೆಗೆದುಕೊಂಡಿದ್ದಾನೆ ಬರಲಿ ಪೋಲೀಸಿನವರು ನಾನೇನು ಹೆದರುವುದಿಲ್ಲ."

ಷರೀಫ್ ಮಾತಾಡುತ್ತಿದ್ದಂತೆ ಪದ್ಮಾ ಬಾಗಿಲಲ್ಲಿ ಬಂದು ನಿಂತಳು. ಷರೀಫ್ ಅವಳ ಕಡೆ ತಿರುಗಿ "ಹಲೋ ! ಗುಡ್‌ಮಾರ್ನಿಂಗ್, ಮ್ಯಾಡಂ. ನನ್ನ 'ಉಲ್ಫತ್' ಹಾಡು ಕೇಳಿ ನೀವು ಅಷ್ಟೊಂದು ಕೋಪ ಮಾಡುವುದೇ?" ಎಂದು ಉಲ್ಲಾಸದ ಧ್ವನಿಯಿಂದ ಹೇಳಿದ

ಈ ಅವಸ್ಥೆಯಲ್ಲಿಯೂ ಷರೀಫನ ಉತ್ಸಾಹ ಪ್ರವೃತ್ತಿಯನ್ನು ಕಂಡು ಜೋಷಿಗೆ ಆಶ್ಚರ್ಯವಾಯಿತು "ಏನು ಇವರು ಹೇಳುವುದು ? ಮಂಗೇಶ್ ರಾವ್ ಎಲ್ಲಿ?"—ಪದ್ಮಳನ್ನು ಕೇಳಿದ ಪದ್ಮಾ ಹಿಂದೆ ನಿಂತಿದ್ದ ಮಂಗೇಶನನ್ನು ಬಲವಂತದಿಂದ ರೂಮಿಗೆ ತಳ್ಳಿದಳು

ಮಂಗೇಶನ ಅಧಃ ಪತನ ಸಂಪೂರ್ಣವಾಗಿತ್ತು. ಪ್ಯಾಂಟ್, ನೆಕ್‌ಟೈ ಮತ್ತು ಬಟ್ಲರ್ ಇಂಗ್ಲೀಷಿನ ಪ್ರತಿಷ್ಠೆ ಮಾಯವಾಗಿ ನಿರುದ್ಯೋಗಿ ಅಡಿಗೆ ಭಟ್ಟನಂತೆ ಕೊಳಕಾದ ಲುಂಗಿ ಜುಬ್ಬಾ ಹಾಕಿಕೊಂಡಿದ್ದ ಅವನನ್ನು ನೋಡಿದ ಕೂಡಲೆ ಷರೀಫ್ "ಏ ಮಂಗ್ಯಾ ! ಎಲ್ಲೊ ನನ್ನ ದುಡ್ಡು" ಎಂದು ಗದರಿಸಿದ

ಜೋಷಿ ಅಡ್ಡ ಬಂದು ಕೃತಕ ಗಾಂಭೀರ್ಯದಿಂದ "ಮಂಗೇಶರಾಯರೆ, ಇವರ ಹತ್ತಿರ ನೀವು ೫೦೦ ರೂಪಾಯಿ ತೆಗೆದುಕೊಂಡಿರಂತೆ ನಿಜವೇ ?" ಎಂದು ಕೇಳಿದ

ಮಂಗೇಶ ತಲೆಯಾಡಿಸಿ ಸಮ್ಮತಿ ಸೂಚಿಸಿದ ಅವನಿಗೆ ಮಾತಾಡುವ ಶಕ್ತಿಯಿರಲಿಲ್ಲ.

"ಏತಕ್ಕಾಗಿ ಅಷ್ಟೊಂದು ಹಣ ತೆಗೆದುಕೊಂಡಿರಿ ?"

ಮಂಗೇಶ ಉತ್ತರ ಕೊಡದಿದ್ದುದನ್ನು ಕಂಡು ಷರೀಫ್ ಕೋಪದಿಂದ "ಕೆನ್ನೆಗೆ ಎರಡು ಕೊಟ್ಟರೆ ತಾನಾಗಿ ಹೇಳುತ್ತಾನೆ" ಎಂದು ಮಾತನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಎದ್ದು ನಿಂತ

ಜೋಷಿ ಅವನನ್ನು ತಡೆದು ಅಧಿಕಾರ ಕಂಠದಿಂದ "ಸುಮ್ಮನಿರಿ ಸಾಹೇಬರೆ. ಇದು ನಿಮ್ಮ ಸಾಗುವಾನಿ ಕೋರಿಯಲ್ಲ ನಿಜವಾಗಿ ಪೋಲಿಸರನ್ನು ಕರೆಸ ಬೇಕಾದೀತು!" ಎಂದು ಎಚ್ಚರಿಸಿ ಮಂಗೇಶನ ಕಡೆ ತಿರುಗಿ "ನಿಮ್ಮ ಲಜ್ಜೆಗೇಡಿತನದ ಮಾತುಗಳು ಈಗ ಬೇಡ ಇವರ ಹಣ ವೆಲ್ಲಿದೆ. ಕೊಟ್ಟುಬಿಡಿ" ಎಂದು ಹೇಳಿದ

ಮಂಗೇಶ ನಡಗುತ್ತಾ "ನನ್ನ ಪ್ಯಾಂಟ್ ಪ್ಯಾಂಟ್—" ಎಂದು ಒದರಿದ.?

ಹಾಲಲ್ಲಿ ಗೂಟಕ್ಕೆ ತಗಲು ಹಾಕಿದ್ದ ಪ್ಯಾಂಟನ್ನು ತಂದು ಪದ್ಮಾ ರೂಮಿಗೆಸೆದಳು ಜೋಷಿ ಅದನ್ನು ತೆಗೆದುಕೊಂಡು ಜೇಬುಗಳನ್ನು ಹುಡು ಕಿದ. ನಾಲ್ಕು ನೂರು ರೂಪಾಯಿ ನೋಟುಗಳೂ, ಕೆಲವು ಹತ್ತುರೂಪಾಯಿ ನೋಟುಗಳೂ ಸ್ವಲ್ಪ ಚಿಲ್ಲರೆ ಸಿಕ್ಕಿತು ಅದನ್ನು ಷರೀಫನ ಮುಂದೆಹಾಕಿ "ನಿಮ್ಮ ದುಡ್ಡನ್ನು ತೆಗೆದುಕೊಂಡು ಇಲ್ಲಿಂದ ಹೊರಡಿ" ಎಂದು ಹೇಳಿದ

- ಷರೀಫ್ ದುಡ್ಡು ತೆಗೆದು ಕಿಸೆಯಲ್ಲಿಟ್ಟುಕೊಂಡು "ಅರ್ಡಿಮ್ಯಾಂಡ್ ಬರೆದುಕೊಟ್ಟು ೫೦೦ ರೂಪಾಯಿ ಬೇರೆ ತೆಗೆದುಕೊಂಡಿದ್ದಾನೆ. ಅದರ ಗತಿ!" ಎಂದ

"ಕೋರ್ಟಿನಲ್ಲಿ ದಾವಾಹಾಕಿ, ಬಾಡಿ ವಾರಂಟ್ ತೆಗೆದುಕೊಳ್ಳಿ."

"ಹಾಗೇ ಮಾಡುತ್ತೇನೆ, ವಕೀಲರೇ. ಆದರ ನಿಮ್ಮ ಪರಿಚಯ ವಾಗಲಿಲ್ಲ"

"ನಾನು ವಕೀಲನಲ್ಲ ನೀವು ವಿಶ್ವಮಿತ್ರ ದೈನಂದಿನ ಪತ್ರಿಕೆಯ ಹೆಸರು ಕೇಳಿರಬಹುದು ನಾನು ಅದರ ಸಂಪಾದಕ, ಲೀಲಾಧರಜೋಷಿ ಹೆಸರು ನೆನಪಲ್ಲಿಟ್ಟುಕೊಳ್ಳಿ. ನೀವು ಶಿವಮೊಗ್ಗೆಯ ಭಾರೀ ವರ್ತಕರಿರ ಬಹುದು ಆದರೂ ನಾನು ಮನಸ್ಸು ಮಾಡಿದರೆ ನಿಮ್ಮನ್ನು ಇಲ್ಲಿಂದಲೇ ಪೋಲೀಸ್ ಸ್ಟೇಷನ್ನಿಗೆ ಕಳುಹಿಸಬಲ್ಲೆ ನಿಮ್ಮಿಂದ ಈ ಗೌರವಸ್ಥ ಮಹಿಳೆ ಯರು ಕೋರ್ಟಿಗೆ ಬರಬೇಕಾಗುವುದಲ್ಲ ಎಂದು ಬಿಟ್ಟಿದ್ದೇನೆ. ಮಾತಾಡದೆ

ಇಲ್ಲಿಂದ ಹೊರಡಿ. ಪುನಃ ಈ ಮನೆಯ ಕಡೆ ತಿರುಗಿ ನೋಡೀರಿ, ಜೋಕೆ!"

ಜೋಷಿಯ ಮಾತಿನ ಕಠಿಣತೆಯನ್ನು ಕಂಡು ಷರೀಫ್ ಹೆದರಿದ. ಮೇಜಿನ ಮೇಲಿದ್ದ ಫೆಜ್‌ಟೋಪಿಯನ್ನು ತಲೆಗಿಟ್ಟು, ಮೂಲೆಯಲ್ಲಿದ್ದ ಹ್ಯಾಂಡ್ ಬ್ಯಾಗ್ ಕೈಯಲ್ಲಿ ಹಿಡಿದು ಮರು ಮಾತಾಡದೆ ಅಲ್ಲಿಂದ ಹೊರಟ.

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ ಆ ಮೇಲೆ ಪದ್ಮಾ "ನೀವು ಹಾಲಿಗೆ ಬನ್ನಿ ಮಿಸ್ಟರ್ ಜೋಷಿ, ಕೆಲಸದವಳು ಬಂದ ಮೇಲೆ ಕೊಟಡಿಯನ್ನು ಚೊಕ್ಕಟ ಮಾಡುವಂತೆ ಹೇಳುತ್ತೇನೆ" ಎಂದಳು ಪದ್ಮಾ ಮತ್ತು ಜೋಷಿ ಹಾಲಿಗೆ ಹೋದರು ಮಂಗೇಶ ಅಲ್ಲಿಯೇ ಕುಳಿತಿದ್ದ.

ಜೋಷಿ ಬಂದದ್ದನ್ನು ಕಂಡು ಲತಾ ಮಲಗುವ ಕೋಣೆಯಿಂದ ಹೊರಗೆ ಬಂದು "ನಾನು ಈ ಮನೆಯಲ್ಲಿ ಒಂದು ದಿನವೂ ಇರಲಾರೆ. ಮಂಗಳೂರಿಗೆ ತಂದೆಯ ಮನೆಗೆ ಹೊಗುತ್ತೇನೆ. ಯಾರನ್ನಾದರೂ ಜೊತೆ ಮಾಡಿ ಕಳುಹಿಸಿ" ಎಂದಳು

"ದುಡುಕಬಾರದು ಲತಾ, ನಿನಗೀಗ ಸ್ವಲ್ಪ ವಿಶ್ರಾಂತಿ ಅವಶ್ಯಕ. ಯಾವುದಾದರೊಂದು ನರ್ಸಿಂಗ್ ಹೋಮಿನಲ್ಲಿ ನಾಲ್ಕು ದಿನವಿರು. ಅನಂತರ ಯೋಚಿಸೋಣ"—ಜೋಷಿಯೆಂದ

"ಏಕೆ ನಮ್ಮ ಮನೆಗೆ ಬಂದಿರಲಿ''—ಪದ್ಮಾ ಹೇಳಿದಳು.

ಸಲಹೆ ಜೋಷಿಗೆ ಉತ್ತಮವಾಗಿ ಕಂಡಿತು ''ನಿನ್ನಿಷ್ಟವೇನು?" ಎಂದು ಲತಾಂಗಿಯನ್ನು ಕೇಳಿದ

ಲತಾ ಒಪ್ಪಿದಳು. ಮಂಗೇಶನನ್ನು ಕರೆದು ಪದ್ಮಾ ತಾನೇ ಈ ಏರ್ಪಾಟನ್ನು ತಿಳಿಸಿದಳು ಅವನು ಪ್ರತ್ಯುತ್ತರವಾಗಿ ಏನೂ ಹೇಳಲಿಲ್ಲ ಸ್ವಲ್ಪ ಹೊತ್ತಿಗೆ ಲತಾಂಗಿಯ ಹಾಸಿಗೆ ಮತ್ತು ಟ್ರಂಕನ್ನು ಜೋಷಿಯ ಡ್ರೈವರ್ ಕಾರಲ್ಲಿಟ್ಟ. ಸರಿ ರಾತ್ರಿಯಲ್ಲಿ ಮನೆಯಿಂದ ಹೊರಗೆ ಹೋದ ಪದ್ಮಾ ಮರು ದಿನ ಪ್ರಾತಃಕಾಲ ಕಾರಲ್ಲಿ ಗೆಳತಿಯೊಡನೆ ಬಂದದ್ದನ್ನು ಕಂಡು ಪದ್ಮಳ ತಾಯಿ ಆಶ್ಚರ್ಯಾನ್ವಿತೆಯಾಗಲಿಲ್ಲ. ಮಗಳ ಉಚ್ಛೃಂಖಲ ವೃತ್ತಿ ತಾಯಿಗೆ ಚೆನ್ನಾಗಿ ತಿಳಿದಿತ್ತು.

ಪದ್ಮಾ ತಾಯಿಗೆ ಕಾಫಿ ಮಾಡುವಂತೆ ಹೇಳಿ ಲತಾಂಗಿಯನ್ನು ಹಾಸಿಗೆಯ ಮೇಲೆ ಮಲಗಿಸಿ ಒಳಗೆ ಹೋದಳು. ಜೋಷಿ ಮಂಚದ ಹತ್ತಿರ

ಕುರ್ಚಿಯ ಮೇಲೆ ಕುಳಿತುಕೊಂಡ. ಲತಾನ ಕೆನ್ನೆಗಳನ್ನು ಸವರುತ್ತಾ "ನೀನು ನಿದ್ರೆ ಮಾಡು ಬೇಬಿ. ಸಂಜೆ ಪುನಃ ನೋಡುತ್ತೇನೆ" ಎಂದು ಹೇಳಿದ.

"ಈ ದಿನ ನಾನು ಕಛೇರಿಗೆ ಬರಬೇಕೇ ?"

"ಅಗತ್ಯವಿಲ್ಲ. ಒಂದು ವಾರ ರಜಾ ತೆಗೆದುಕೋ"

"ನೀವು ಮಾತ್ರ ದಿನಕ್ಕೊಂದುಸಾರಿ ನನ್ನನ್ನು ನೋಡಬೇಕು."

"ಖಂಡಿತ ಬರುತ್ತೇನೆ."

ಅಷ್ಟು ಹೊತ್ತಿಗೆ ಪದ್ಮಾ ಕಾಫೀ ತಂದು ಇಬ್ಬರಿಗೂ ಕೊಟ್ಟಳು. ಜೋಷಿಯನ್ನು ಬೀಳ್ಕೊಡುವಾಗ ಮಧ್ಯಾಹ್ನ ಪುನಃ ಬರುವಂತೆ ಪದ್ಮಳೂ ಆಹ್ವಾನ ಕೊಟ್ಟಳು.

— ೫ —

ಪದ್ಮಳ ಮನೆಯಲ್ಲಿ ನಾಲ್ಕು ದಿನ ವಿಶ್ರಾಂತಿ ತೆಗೆದುಕೊಂಡು ಆ ಶನಿವಾರದ ವಿಷಾದ ಘಟನೆಗಳನ್ನು ಮರೆಯುವುದು ಲತಾಂಗಿಯ ಉದ್ದೇಶವಾಗಿತ್ತು. ಆದರೆ ಮನುಷ್ಯನೊಂದು ಚಿಂತಿಸಿದರೆ ದೈವ ಮತ್ತೊಂದು ಚಿಂತಿಸುವುದು. ಪದ್ಮಳ ಮನೆಗೆ ಬಂದ ಮೂರನೆಯ ದಿನಕ್ಕೇ ಪತಿಯ ಸಂಗಡ ಲತಾ ಮಂಗಳೂರಿಗೆ ಹೋಗಬೇಕಾಗಿ ಬಂತು.

ಭಾನುವಾರ ಸಂಜೆ ಜೋಷಿ ಮನೆಗೆ ಬಂದಾಗ ಮೂವರೂ ಕುಳಿತು ಆಲೋಚಿಸಿ ಲತಾಂಗಿಯ ತಾಯನ್ನು ಬೆಂಗಳೂರಿಗೆ ಕರೆಸಿಕೊಳ್ಳಬೇಕೆಂದು ನಿರ್ಧರಿಸಿದರು. ಅದರಂತೆ ಲತಾ ಆ ದಿನವೇ ರತ್ನಮ್ಮನಿಗೆ ಕಾಗದ ಬರೆದಳು,—ನನಗೆ ದೇಹಾಲಸ್ಯ. ದಿನ ದಿನಕ್ಕೆ ದುರ್ಬಲವಾಗುತ್ತಿದ್ದೇನೆ. ಕೂಡಲೆ ಬಂದು ಒಂದೆರಡು ತಿಂಗಳು ಇಲ್ಲಿರುವುದು—ಎಂದು.

ಪತ್ರ ಬರೆದ ಮೂರನೆಯ ದಿನ ಲತಾಂಗಿಯ ತಾಯಿಂದ ಮಂಗೇಶನಿಗೆ ಟೆಲಿಗ್ರಾಂ ಬಂತು—ಯಜಮಾನರು ವಿಪರೀತ ಖಾಯಿಲೆ ಕೂಡಲೆ ನೀನು ಲತಾನ ಕರೆದುಕೊಂಡು ಮಂಗಳೂರಿಗೆ ಬರುವುದು—ಎಂದು. ತಂತಿ ನೋಡಿ

ಲತಾ ಬೆದರಿದಳು. ಮರುದಿನ ಜೋಷಿಯ ಸಲಹೆಯಂತೆ ಮೈಸೂರು,ಮಾರ್ಗ ವಾಗಿ ಲತಾ ಮತ್ತು ಮಂಗೇಶ್ ಮಂಗಳೂರಿಗೆ ಪ್ರಯಾಣ ಮಾಡಿದರು. ಅವರು ಮಂಗಳೂರು ತಲಪುವ ಹೊತ್ತಿಗೆ ವಿಠಲರಾಯರ ದೇಹಾಂತವಾಗಿ ಹೋಗಿತ್ತು. ಕಣ್ಣೀರು ಸುರಿಸುತ್ತಾ ರತ್ನಮ್ಮ ಮಗಳನ್ನು ಎದುರುಗೊಂಡಳು.

* * * *

ವಿಠಲರಾಯರು ಜೀವಿಸಿದ್ದಾಗ ಮನೆಯಲ್ಲಿ ರತ್ನಮ್ಮ ಸರ್ವಾಧಿಕಾರಿಣಿ. ಅವಳ ಮಾತಿನ ಹೊರತಾಗಿ ಯಾವ ಕಾರ್ಯವೂ ನಡೆಯುತ್ತಿರಲಿಲ್ಲ. ವಿಠಲರಾಯರ ದೇಹದಿಂದ ಪ್ರಾಣವಾಯು ಹಾರಿಹೋದ ಕೂಡಲೆ ಅವರ ನೆಂಟರಿಷ್ಟರು ಮನೆಯಲ್ಲಿ ತುಂಬಿದರು. ಕಮಲಾಕ್ಷನನ್ನು ಮುಂದಿಟ್ಟು ಕೊಂಡು ನೆಂಟನೊಬ್ಬನು ದೇಹಸಂಸ್ಕಾರವಾಗುವ ಮೊದಲು ಮನೆಯ ಆಡಳಿತ ಮತ್ತು ಇತರ ವ್ಯವಹಾರಗಳ ವಿಚಾರ ಇತ್ಯರ್ಥವಾಗಬೇಕಾಗಿ ಹಠ ಹಿಡಿದನು. ನಗರದ ನಾಲ್ಕು ಮಂದಿ ಮುಖ್ಯಸ್ಥರು ಪಂಚಾಯಿತರಾಗಿ ಕುಳಿತು ರಾಯರ ಆಸ್ತಿ ಪಾಸ್ತಿ ದುಡ್ಡು ದಾಗಿನಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ರತ್ನಮ್ಮನ ಮೈಮೇಲಿದ್ದ ಒಡವೆಗಳು ಮಾತ್ರ ಬಿಡಲ್ಪಟ್ಟವು. ಪಂಚಾಯಿತರು ತೀರ್ಪು ಕೊಡುವವರೆಗೆ ರತ್ನಮ್ಮ ಮನೆಯಲ್ಲಿ ಪ್ರತ್ಯೇಕ ವಾಗಿರತಕ್ಕದ್ದೆಂದು ಗೊತ್ತಾದ ಮೇಲೆ ಅಂತ್ಯ ಕ್ರಿಯೆ ನಡೆಯಿತು.

* * * *

ರಾಯರು ಹೃದಯಸ್ತಂಭನದಿಂದ ಹಠಾತ್ತಾಗಿ ಮರಣಕ್ಕೀಡಾದ್ದರಿಂದ ತಮ್ಮ ಮರಣಾನಂತರ ಆಸ್ತಿ ಪಾಸ್ತಿಗಳ ಹಂಚಿಕೆಯ ವಿಚಾರವಾಗಿ ಮುಖತಃ ಅಥವಾ ಲಿಖಿತವಾಗಿ ಏನನ್ನೂ ತಿಳಿಸಿರಲಿಲ್ಲ. ಆದರೂ ಪಂಚಾಯಿತರು ವಸ್ತುಸ್ಥಿತಿಯನ್ನು ಗಮನಕ್ಕೆ ತಂದುಕೊಂಡು ಉದಾರತೆ ಯಿಂದ ರತ್ನಮ್ಮನಿಗೆ ಅವಳು ಧರಿಸುತ್ತಿದ್ದ ವಸ್ತ್ರ ಭೂಷಣಗಳು ಮತ್ತು ನಗದು ಮೂರು ಸಾವಿರ ರೂಪಾಯಿಗಳನ್ನು ಕೊಟ್ಟರು. ಈ ವಿಚಾರ ಇತ್ಯರ್ಥವಾಗಿ ಶ್ರಾದ್ಧಾದಿಗಳು ಮುಗಿಯುವವರೆಗೆ ಲತಾಂಗಿ ಮತ್ತು ಮಂಗೇಶರಾವ್ ಮಂಗಳೂರಲ್ಲಿದ್ದರು. ಅನಂತರ ರತ್ನಮ್ಮನನ್ನು ಕರೆದು ಕೊಂಡು ಬೆಂಗಳೂರಿಗೆ ಹಿಂದಿರುಗಿದರು.

ಜೋಷಿಗೆ ಲತಾಂಗಿ ನೇರವಾಗಿ ಕಾಗದ ಬರೆಯದಿದ್ದರೂ ಪದ್ಮಳ ಮುಖಾಂತರ ಈ ವಿಚಾರಗಳು ತಿಳಿದವು. ಲತಾಂಗಿ ಊರಲಿಲ್ಲದಿದ್ದ ನಾಲ್ಕು ವಾರಗಳ ಅವಧಿಯಲ್ಲಿ ಜೋಷಿ ಪದ್ಮಳ ಮನೆಗೆ ಅನೇಕ ಸಾರಿ ಬಂದಿದ್ದನು ಆ ಸಂದರ್ಭದಲ್ಲಿ ಏನು ಮಾತುಕತೆಗಳು ನಡೆದವು, ಅದರಿಂದ ಲತಾಂಗಿ ಮತ್ತು ಜೋಷಿಯ ಸಂಬಂಧದಲ್ಲಿ ಉಂಟಾದ ಪರಿವರ್ತನೆಯೇನು, ಎಂಬುದನ್ನು ವಾಚಕರು ಮುಂದೆ ತಿಳಿಯುವರು

## ಏಳನೆಯ ತರಂಗ

— ೧ —

ಸಂಜೆ ಪದ್ಮಾ ವಾಕ್ ಹೊರಟಿದ್ದಳು ಲತಾ ಮಂಗಳೂರಿಗೆ ಹೋದ ಮೇಲೆ ಒಂಟಿಯಾಗಿ ಅವಳು ತಿರುಗಾಡಲು ಬಂದದ್ದು ಆ ದಿನವೇ. ಮಂಗೇಶ ಮನೆಯ ಬೀಗದ ಕೈಯನ್ನು ಅವಳ ಕೈಗೆ ಕೊಟ್ಟು ಹೋಗಿದ್ದ. ಸಂಜೆ ವಾಕ್ ಮುಗಿಸಿಕೊಂಡು ಮನೆಯ ಬೀಗ ತೆಗೆದು ಶುದ್ಧಿ ಮಾಡಿಸುವ ಉದ್ದೇಶದಿಂದ ಕೆಲಸದವಳಿಗೆ ಹೇಳಿದ್ದಳು

ಪದ್ಮಾ ಮಾರ್ಗೋಸಾ ರಸ್ತೆಯನ್ನು ಬೆಳಗಿಸಿ ಅಂಗಡಿ ಬೀದಿಗೆ ಬಂದು ಚಿಲ್ಲರೆ ಅಂಗಡಿಗೆ ಸಾಮಾನಿನ ಪಟ್ಟಿ ಕೊಟ್ಟು ಸಾಮಾನು ಕಳುಹಿಸುವಂತೆ ಹೇಳಿ ಲತಾಂಗಿಯ ಮನೆಯ ಹತ್ತಿರ ಬರುವ ಹೊತ್ತಿಗೆ ಕೆಲಸದವಳು ಬಾಗಿಲಲ್ಲಿ ಕಾದಿದ್ದಳು. ಪದ್ಮಾ ಬೀಗ ತೆಗೆದು ದೀಪ ಹತ್ತಿಸಿ ಹಾಲಲ್ಲಿ ಕುಳಿತಳು. ಹೊರಗೆ ಹಾರನ್ ಶಬ್ದವಾಯಿತು. ನೋಡುತ್ತಿದ್ದಂತೆ ಜೋಷಿ ಕಾರಿಂದಿಳಿದು ಮನೆಗೆ ಬಂದ. “ ಬನ್ನಿ ಸಾರ್ ” ಎಂದು ಪದ್ಮಾ ಸ್ವಾಗತಿಸಿದಳು.

“ ಇಲ್ಲಿ ನನ್ನ ಗೆಳೆಯರೊಬ್ಬರನ್ನು ನೋಡಲು ಬಂದಿದ್ದೆ. ಮನೆಯಲ್ಲಿ ದೀಪ ಉರಿಯುತ್ತಿದ್ದುದನ್ನು ಕಂಡು ಮಂಗಳೂರಿಂದ ಲತಾ ಬಂದಿರಬಹುದೇ ಎನ್ನಿಸಿತು. ಹೋಗಿ ಬರೋಣವೆಂದು ಭಾವಿಸಿದೆ ಏನು ಸಮಾಚಾರ ?”

ಎಂದು ಪದ್ಮಳನ್ನು ಕೇಳಿದ.

“ ಲತಾ ಕಾಗದ ಬರೆದಿದ್ದಾಳೆ. ಹಿಂದಿರುಗಲು ಇನ್ನೂ ಒಂದೆರಡು ವಾರವಾಗಬಹುದು. ಅವರು ಮಂಗಳೂರು ಸೇರುವುದರೊಳಗೆ ತಂದೆಯ ದೇಹಾಂತವಾಗಿತ್ತಂತೆ.”

ಎಂದು ಹೇಳಿ ಪದ್ಮಾ ಕೈಚೀಲದಿಂದ ಕಾಗದ ತೆಗೆದು ಜೋಷಿಗೆ ಕೊಟ್ಟಳು.

ಜೋಷಿ ಅದನ್ನು ತೆಗೆದುಕೊಳ್ಳದೆ "ನಿಮಗೆ ಬರೆದಿರುವ ಕಾಗದ ನಾನೇಕೆ ಓದಲಿ" ಎಂದ.

"ಕಾಗದ ನನ್ನ ಹೆಸರಿಗಿದ್ದರೂ ನಿಮಗೆ ತೋರಿಸಬೇಕೆಂದು ಬರೆದ್ದಾಳೆ ಲತಾ."

ಜೋಷಿ ತೆಗೆದುಕೊಂಡು ಓದಿದ ಮೈಸೂರಿಗೆ ಹೊರಟ ಪ್ಯಾಸೆಂಜರ್ ಗಾಡಿಯನ್ನು ಹತ್ತಿದಾಗಿನಿಂದ ನಡೆದ ಪ್ರತಿಯೊಂದು ವಿಚಾರವನ್ನೂ ಲತಾಂಗಿ ಕೆಲವು ಕಡೆ ಸಂಕ್ಷೇಪವಾಗಿ, ಕೆಲವು ಕಡೆ ವಿವರವಾಗಿ ಓದುವವರ ಕಣ್ಣಿಗೆ ಕಟ್ಟುವಂತೆ ಬರೆದಿದ್ದಳು ರಾತ್ರಿ ಇಂಟರ್ ತರಗತಿಯಲ್ಲಿ ನಿದ್ರೆಯಿಲ್ಲದೆ ಪ್ರಯಾಣ, ಬೆಳಿಗ್ಗೆ ಮೈಸೂರಿನ ರೈಲ್ವೆ ನಿಲ್ದಾಣದಲ್ಲಿ ಉಪಹಾರ, ಬಸ್ ಹತ್ತಿದ್ದು, ಮಡಿಕೇರಿಯಲ್ಲಿ ಊಟ, ಮಧ್ಯಾಹ್ನ ಮೂರು ಗಂಟೆಗೆ ಮನೆ ಸೇರಿದಾಗ ಅಲ್ಲಿ ಕಂಡ ದುಃಖಮಯ ಕಠೋರ ದೃಶ್ಯ, ಸೇರಿದ್ದ ಜನರ ಗುಜಗುಂಪಲು, ಪಂಚಾಯಿತಿ, ಕೊನೆಗೆ ಸಂಜೆ ೮ ಗಂಟೆಯ ಮೇಲೆ ದೀಪಗಳ ಬೆಳಕಿನಲ್ಲಿ ನಡೆದ ಶವಸಂಸ್ಕಾರ, ಈಗ ಮನೆಯ ಒಂದು ಭಾಗದಲ್ಲಿ ತಾನು ತಾಯಿಯ ಸಂಗಡಿರುವುದು, ಹೋಟಲಲ್ಲಿ ಪತಿಯ ಬಿಡಾರ ಇತ್ಯಾದಿ ವಿಚಾರ ಗಳೆಲ್ಲವನ್ನೂ ಬರೆದಿದ್ದಳು. ಕೊನೆಯಲ್ಲಿ ಇನ್ನೂ ಹತ್ತು ದಿನಗಳು ಮಂಗಳೂರಲ್ಲಿದ್ದು ಶ್ರಾದ್ಧಾದಿಗಳು ಮುಗಿದ ಮೇಲೆ ತಾಯನ್ನು ಕರೆದು ಕೊಂಡು ಬರುವುದಾಗಿ ಹೇಳಿದ್ದಳು.

ನಾಲ್ಕಾರು ಪುಟಗಳ ಉದ್ದನೆಯ ಪತ್ರ. ಜೋಷಿ ಆಸಕ್ತಿಯಿಂದ ಅದನ್ನು ಓದುತ್ತಿದ್ದಂತೆ ಪದ್ಮಾ ಕಣ್ಣಿನ ಕೊನೆಯಿಂದ ಸಪಾದ ಮುಸ್ತಕವಾಗಿ ಅವನ ಆಕಾರೇಂಗಿತಗಳನ್ನು ನೋಡುತ್ತಿದ್ದಳು. ಚತುರನಾದ ಪತ್ತೇದಾರ ಸಂದೇಹಿಸುವ ವ್ಯಕ್ತಿಯನ್ನು ನೋಡುವ ಚಾಣಾಕ್ಷತೆ, ಸಂಶೋಧನೆಯಲ್ಲಿ ತೊಡಗಿದ ವಿಜ್ಞಾನಿಯ ವಿಶ್ಲೇಷಣ, ಅನುಭವಸ್ಥಳಾದ ಪ್ರೌಢಾಂಗನೆ ಪ್ರೇಮ ಪಾತ್ರನಲ್ಲಿ ತೋರಿಸುವ ಮಾಧುರ್ಯ, ಇವೆಲ್ಲವೂ ಅವಳ ದೃಷ್ಟಿಯಲ್ಲಿ ಸಂಮಿಶ್ರವಾಗಿದ್ದುವು. ಲತಾಂಗಿಯ 'Boss' ಹಿತೈಷಿ, ಸ್ನೇಹಿತ ಮತ್ತು ಪ್ರಾಯಶಃ ಪ್ರಿಯನ ಸ್ಥಾನದಲ್ಲಿರುವ ಈ ಮಧ್ಯಮ ವಯಸ್ಸಿನ ವ್ಯಕ್ತಿ

ಯಲ್ಲಿರುವ ಆಕರ್ಷಣೆಯೇನು ಎಂಬುದನ್ನು ತಿಳಿಯಲು ಅವಳು ಕುತೂಹಲ ಗೊಂಡಿದ್ದಳು

ಜೋಷಿ ಓದುವುದನ್ನು ಮುಗಿಸಿ ಪತ್ರ ಹಿಂದಕ್ಕೆ ಕೊಟ್ಟು "ಉತ್ತರ ಬರೆಯುತ್ತೀರಾ?" ಎಂದು ಕೇಳಿದ

"ನಿಮಗೆ ತಿಳಿಸಿ ಬರೆಯೋಣವೆಂದಿದ್ದೆ ನಾಳೆ ಬರೆಯುತ್ತೇನೆ"

"ಹಣವೇನಾದರೂ ಬೇಕೇ ಎಂಬುದನ್ನು ತಿಳಿದುಕೊಳ್ಳಿ"

"ಬೇಕಾದರೆ ತಾನೇ ಬರೆಯುತ್ತಾಳೆ ಪತ್ರದ ಕೊನೆಯ ಭಾಗವನ್ನು ಓದಿದಿರಾ?"

"ಓದಿದೆ."

"ಪ್ರೇಮದ ಮುತ್ತುಗಳು –ಎಂದು ಬರೆದಿದ್ದಾಳೆ ಅದು ನಿಮಗೆ ಸಲ್ಲತಕ್ಕದ್ದು."

ಪದ್ಮಾ ನಗುತ್ತಾ ಹೇಳಿದಳು.

"ಇದೇನು ನಿಮ್ಮ ಮಾತು, ಮಿಸ್ ಆನಂದಪುತ್ರಿ?"

ಪದ್ಮಾ ಕಾಗದವನ್ನು ಬಿಚ್ಚಿ "ನೀವೇ ನೋಡಿ ಕಾಗದವನ್ನು. 'ಜೋಷಿಯವರಿಗೆ ತೋರಿಸು. ಮೊದಲಿಂದ ಕೊನೆಯವರೆಗೆ ಅವರು ಓದಲಿ. ಪ್ರೇಮದ ಮುತ್ತುಗಳು'—ಎಂದು ಬರೆದಿದ್ದಾಳೆ. ಅವು ನಿಮಗೇ ಎಂಬುದು ಸ್ಪಷ್ಟವಾಗಿದೆ"

"ಅದರಡಿಯಲ್ಲಿ 'ನಿನ್ನ ಗೆಳತಿ' ಎಂದು ಬರೆದು ಲತಾ ರುಜು ಮಾಡಿದ್ದಾಳೆ. ಅಂದರೆ ಗೆಳತಿಗೇ ಸಲ್ಲತಕ್ಕದ್ದು."

"ನೀವು ಹಾಗೆ ಭಾವಿಸಿದರೂ ಅದನ್ನು ನಾನು ಸಂತೋಷದಿಂದ ನಿಮಗೆ ಪುನಃ ಹಿಂದಕ್ಕೆ ಕೊಡುತ್ತೇನೆ."

ಎಂದು ಹೇಳಿ ಪದ್ಮಾ ತುಟಿ ಜೋಡಿಸಿ ಕಲ್ಪಿತ ಚುಂಬನಗಳನ್ನು ಜೋಷಿಯ ಕಡೆಗೆಸೆದಳು.

ಪದ್ಮಳ ಭಾವವೇನು? ನಿರುದ್ದೇಶವಾದ ಸರಳತೆಯೋ, ಉದ್ದೇಶಪೂರ್ಣ ಆಹ್ವಾನವೇ, ಅಥವಾ ಸ್ತ್ರೀ ಸಹಜವಾದ ಸರಸವೇ ಎಂದು ಜೋಷಿಗೆ ಸಂದೇಹವಾಯಿತು. ಅವನ ರಸಿಕತೆ ಎಚ್ಚರಗೊಂಡಿತು. ಲಾಲಸೆಯ ದೃಷ್ಟಿಯಿಂದ ಅವಳ ಕಡೆ ನೋಡಿದ.

ಪದ್ಮಳ ರೂಪ ಲತಾಂಗಿಯ ರೂಪದಿಂದ ವಿಭಿಂನವಾದುದೆಂಬುದನ್ನು ಹಿಂದೆ ಸೂಚಿಸಿದ್ದೇವೆ. ಲತಾ ಕೃಶಾಂಗಿ, ಸಂಪಿಗೆ ಎಸಳಿನಂತಹ ಮೈ ಬಣ್ಣ. ಪದ್ಮಾ ಸ್ಥೂಲಕಾಯೆಯಲ್ಲದಿದ್ದರೂ ಹೃಷ್ಟಪುಷ್ಟವಾಗಿ ಬೆಳೆದ ದೀರ್ಘ ದೇಹಿನಿ. ಕನ್ನೈದಿಲೆಯಂತೆ ಶ್ಯಾಮಲವರ್ಣೆ ಲತಾಂಗಿಯ ಕಣ್ಣುಗಳು ಅರಳಿದ ತಾವರೆಯ ನಡುವೆ ಜೋಡಿಸಿದ ನೀಲ ಮಣಿಗಳಂತೆ ಬೆಳಗುವವು. ಪದ್ಮಳ ಕಣ್ಣುಗಳು ಚಂದ್ರಬಿಂಬದಲ್ಲಿ ಹುದುಗಿಸಿದ ಪುಟ್ಟ ನಕ್ಷತ್ರಗಳಂತೆ ಮಿರುಗುವವು ಲತಾ ತುಟಿಗಳು ಹವಳದ ಕುಡಿಗಳಾದರೆ, ಪದ್ಮಳ ತುಟಿ ತೊಂಡೆಹಣ್ಣು ಜೋಷಿಯ ತೀಕ್ಷ್ಣ ದೃಷ್ಟಿ ಕ್ಷಣಾರ್ಧದಲ್ಲಿ ಈ ಅಂತರಗಳನ್ನು ಕಂಡುಕೊಂಡಿತು ವಿಷಯೋಪಭೋಗದಲ್ಲಿ ವೈವಿಧ್ಯತೆಯನ್ನು ಹುಡುಕುವ ಅವನ ನೈಚ್ಯಾನುಸಂಧಾನಕ್ಕೆ ಪ್ರಚೋದನೆ ದೊರಕಿತು.

ಪುರುಷ ಪ್ರಕೃತಿ ವಿಚಿತ್ರವಾದದ್ದು. ಜೋಷಿಯ ವಿಚಾರವೂ ಅಷ್ಟೇ. ಮೈಸೂರಲ್ಲಿ ಲತಾಂಗಿಯ ಪರಿಚಯುವಾದ ಮೇಲೆ ಅವನಲ್ಲಿ ಒಂದು ಬಗೆಯ ಪರಿವರ್ತನೆ ತಲೆದೊರಿತ್ತು. ಕಳೆದ ಕೆಲವು ತಿಂಗಳುಗಳಿಂದ ಅವನು ಮನಸ್ಸು ಇಂದ್ರಿಯಗಳನ್ನು ವಿಷಯ ವಾಸನೆಯ ಕಡೆ ಹರಿಯಗೊಡದೆ ಬಿಗಿಹಿಡಿದು ಕಛೇರಿಯ ಮೇಲಂತಸ್ಥಿನ ಬಿಡಾರದಲ್ಲಿ ಬ್ರಹ್ಮಚರ್ಯದ ಏಕಾಂತ ವಾಸ ದಲ್ಲಿದ್ದನು. ಈ ದಿನ ಪದ್ಮಳ ಸಮೀಪದಲ್ಲಿ ಅವನ ಕಾಮನೆ ಕುಡಿಯಿಟ್ಟಿತು.

"ಗಾಳಿಗೆ ತೂರಿದ ಚುಂಬನ ಯಾರನ್ನೂ ತೃಪ್ತಿಪಡಿಸುವುದಿಲ್ಲ. ಲತಾಂಗಿಯ ಕಾಗದವೂ ಅಷ್ಟೇ? ಆದರೆ ಒಂದು ವಿಚಾರ ಮಿಸ್ ಆನಂದ ಪುತ್ರಿ. ಲತಾಂಗಿಗೂ ನನಗೂ ಪ್ರಣಯ ಸಂಬಂಧವಿದೆಯೆಂದು ನೀವು ಭಾವಿ ಸಿದ್ದರೆ ಅದು ಶುದ್ಧಾಂಗವಾಗಿ ತಪ್ಪು."

ಲತಾಂಗಿಯಲ್ಲಿ ತನ್ನ ಆಸಕ್ತಿಯನ್ನು ಮುಚ್ಚಿಡುವ ಉದ್ದೇಶದಿಂದ ಜೋಷಿ ಈ ಮಾತುಗಳನ್ನು ಹೇಳಿದ.

"ಅದನ್ನು ಆ ದಿನವೇ ನಾನು ತಿಳಿದುಕೊಂಡೆ. ಹಾಗೇನಾದರೂ ಇದ್ದಿದ್ದರೆ ಅವಳು ನಿಮಗೆ ಅಷ್ಟೊಂದು ಧೈರ್ಯದಿಂದ ಹೇಳಿ ಕಳುಹಿಸುತ್ತಿರ ಲಿಲ್ಲ."

"ನಾನು ಬರುತ್ತಲೂ ಇರಲಿಲ್ಲ. ಲತಾ ಬುದ್ಧಿವಂತೆ, ಬರೆಯುವ ಅಭ್ಯಾಸವಿದೆ. ನಮ್ಮಲ್ಲಿ ಓದಿದ ಹೆಂಗಸರಿದ್ದರೂ ಪತ್ರಿಕೋದ್ಯಮಕ್ಕೆ ಯಾರೂ

ಇಳಿದಿಲ್ಲ. ಆದ್ದರಿಂದಲೆ ನಾನು ಲತಾನ ಕೆಲಸಕ್ಕೆ ಸೇರಿಸಿಕೊಂಡದ್ದು ''

"ಜನ ಅದನ್ನು ತಪ್ಪಾಗಿ ಭಾವಿಸಿದರೆ ಯಾರು ಹೊಣೆ? ಅಂತಹ ಗಂಡನ ಕೈ ಹಿಡಿದ ಮೇಲೆ ಹೆಂಗಸು ಮಾಡುವುದೇನು ?"

ಆ ದಿನದ ವಿಷಾದ ಘಟನೆಯನ್ನು ಕುರಿತು ಪ್ರಸ್ತಾಪಿಸುವುದು ಜೋಷಿಯ ಇಷ್ಟವಾಗಿರಲಿಲ್ಲ ಮಾತು ತಿರುಗಿಸಿ "ನನಗೆ ಹೊತ್ತಾಯಿತು. ನೀವು ಬರುವುದಾದರೆ ಎಲ್ಲಾದರೂ ಡ್ರೈವ್ ಹೋಗೋಣ" ಎಂದ.

ಪದ್ಮಾ ಅಂತರಂಗದಲ್ಲಿ ನಿರೀಕ್ಷಿಸುತ್ತಿದ್ದದ್ದೂ ಇಂತಹ ಆಹ್ವಾನವನ್ನೇ. ಕೈ ಗಡಿಯಾರ ನೋಡಿಕೊಂಡು "ಈಗಾಗಲೆ ಎಂಟು ಗಂಟೆ ಇಂದು ಬೇಡ. ನಾಳೆ ಆರು ಗಂಟೆಗೆ ಹೋಗೋಣ" ಎಂದಳು

"ನನಗೆ ಆರುಗಂಟೆಗೆ ಬಿಡುವಾಗುವುದಿಲ್ಲ. 'ಡಾಕ್ ಅಡಿಷನ್' ನೋಡಿಕೊಂಡು ಏಳುಗಂಟೆ ಸುಮಾರಿಗೆ ಬರುತ್ತೇನೆ"

"ಆಗಬಹುದು"

ಪದ್ಮಾ ಜೋಷಿಯನ್ನು ಮುಗುಳು ನಗೆಯಿಂದ ಬೀಳ್ಕೊಂಡಳು. ಕೈ ಕುಲಕಿದಾಗ ಅವಶ್ಯಕತೆಗಿಂತ ಹೆಚ್ಚಿನ ಒತ್ತಡ ಕಂಡದುದನ್ನು ಜೋಷಿ ಮರೆಯಲಿಲ್ಲ. ಭವಿಷ್ಯ ಸುಖಾನುಭವದ ಕನಸು ಕಾಣುತ್ತ ಅವನು 'ವಿಶ್ವಮಿತ್ರ' ಕಛೇರಿಯನ್ನು ಸೇರಿದನು

— ೨ —

ಮರುದಿನ ಸಂಜೆ ಪದ್ಮಾ ಕಾರ್ಖಾನೆಯಿಂದ ಜಾಗ್ರತೆ ಮನೆಗೆ ಬಂದು ಸ್ನಾನ ಉಪಹಾರಗಳನ್ನು ಮುಗಿಸಿ, ಸ್ವಲ್ಪ ಹೊತ್ತು ಮಲಗಿ ವಿಶ್ರಾಂತಿ ತೆಗೆದುಕೊಂಡಳು ಜೋಷಿಯ ಬರುವಿಕೆ ಅವಳಲ್ಲಿ ಕಾತರವನ್ನುಂಟು ಮಾಡಿತ್ತು. ತಾನೇ ಆಹ್ವಾನ ಕೊಟ್ಟಿದ್ದಳಾದರೂ ಅವನನ್ನು ಯಾವ ರೀತಿ ಸ್ವಾಗತಿಸುವುದು? ಹೇಗೆ ನಡೆದುಕೊಳ್ಳುವುದು? ಎಷ್ಟುಮಟ್ಟಿನ ಸಲಿಗೆಗೆ ಆಸ್ಪದ ಕೊಡುವುದು? ಇವೇ ಮುಂತಾದ ಪ್ರಶ್ನೆಗಳು ಅವಳ ಮನಸ್ಸಿನಲ್ಲಿ ಅಂಕುರಿಸಿದವು.

ಇದುವರೆಗೆ ತನ್ನ ಪರಿಚಯದ ಪುರುಷರಲ್ಲಿ ಯಾರೂ ಅವಳನ್ನು ಈ ರೀತಿ ಆಕರ್ಷಿಸಿರಲಿಲ್ಲ. ಒಂದು ಗಣ್ಯ ದೈನಂದಿನ ಪತ್ರಿಕೆಯ ಸಂಪಾದಕನಾಗಿ ಸಾವಿರ ರೂಪಾಯಿ ಸಂಬಳ ತೆಗೆದುಕೊಳ್ಳುತ್ತಿದ್ದಾನೆ. ಯುವಕನಲ್ಲದಿದ್ದರೂ ಪ್ರೇಮದ ವಯಸ್ಸು ಮೀರಿಲ್ಲ ಜೀವನದ ಸಿಹಿ ಕಹಿಗಳನ್ನು ಅನುಭವಿಸಿದ ಪರಿಣತ ವ್ಯಕ್ತಿಯಂತೆ ಕಾಣುತ್ತಾನೆ ಎಂದು ಪದ್ಮಾ ಭಾವಿಸಿದಳು. ಜೋಷಿ ಮತ್ತು ಲತಾಂಗಿಯ ಸ್ನೇಹ ತನ್ನ ಯೋಚನೆಗೆ ಅಡ್ಡಿಯಾಗಬಹುದೆಂಬ ಸಂದೇಹ ಅವಳಿಗೆ ಪೂರ್ಣವಾಗಿ ಕಳೆದಿರಲಿಲ್ಲ. ಇಂದು ಚತುರತೆಯಿಂದ ಅದನ್ನು ಪರಿಹರಿಸಿಕೊಳ್ಳಬೇಕೆಂದು ನಿರ್ಧರಿಸಿಕೊಂಡಳು.

ಸ್ವಲ್ಪ ಹೊತ್ತಿನ ಮೇಲೆ ಎದ್ದು ತಲೆ ಬಾಚಿ ಹೆರಳು ಹಾಕಿ ಮುಖಕ್ಕೆ ಪೌಡರ್ ಹಚ್ಚಿದಳು. ಆನಂತರ ಪೆಟ್ಟಿಗೆ ತೆಗೆದು ಯಾವ ಸೀರೆ ಉಡಲಿ ಎಂದು ಯೋಚಿಸಿ ಕೊನೆಗೆ ಎಲೆ ಹಸರು ಬಣ್ಣದ ಕರಾಚಿ ಸೀರೆ, ನೀಲಿ ಹಳದಿ ಗೆರೆಗಳ ಚೋಲಿ ಆರಿಸಿದಳು ಬಳಿಕ ಜೋಷಿಗಾಗಿ ಕಾಯುತ್ತ ಕುಳಿತಳು ಟಾಕೋಟಾಕ್ ಏಳು ಗಂಟೆಗೆ ಅವನು ಕಾರಲ್ಲಿ ಬಂದ. ಸಿದ್ಧಳಾಗಿದ್ದ ಪದ್ಮಾ ತಾಯಿಗೆ ಬಾಗಿಲು ಹಾಕಿಕೊಳ್ಳುವಂತೆ ಹೇಳಿ ಕಾರಲ್ಲಿ ಕುಳಿತಳು.

ಸೀರೆ ಕುಪ್ಪಸಗಳ ಲೆವೆಂಡರ್ ಸುಗಂಧ, ಮುಡಿದಿದ್ದ ಗುಲಾಬಹೂಗಳ ವಾಸನೆ, ಬಳಿದಿದ್ದ ಪೌಡರಿನ ನರುಗಂಪು ಇವೆಲ್ಲ ಸಮ್ಮಿಶ್ರವಾಗಿ ಪರಿಮಳದ ಪುತ್ತಲಿಯೊಂದು ಪಾರ್ಶ್ವದಲ್ಲಿ ಕುಳಿತಂತೆ ಜೋಷಿಗೆ ಭಾಸವಾಯಿತು. "ಎಲ್ಲಿ-ಹೋಗೋಣ, ಪದ್ಮಾ ?" ಎಂದು ಕೇಳಿದ.

"ಲತಾಂಗಿಯ ವಿಚಾರ ನಿಮ್ಮ ಸಂಗಡ ಏಕಾಂತವಾಗಿ ಮಾತಾಡಬೇಕಾಗಿದೆ. ಅದಕ್ಕೆ ಅನುಕೂಲವಾದ ಕಡೆ ಹೋಗೋಣ."

"ಹಾಗಾದರೆ ಕಛೇರಿಯ ಮೇಲಿನ ನನ್ನ ಬಿಡಾರಕ್ಕೆ ಬರಬಹುದಲ್ಲ ? ರಾತ್ರಿ ಸರದಿಯ ಸಂಪಾದಕರ ಹೊರತಾಗಿ ಕಛೇರಿಯಲ್ಲಿ ಯಾರೂ ಇರುವುದಿಲ್ಲ. ಪ್ರತ್ಯೇಕ ಮೆಟ್ಟಲಿದೆ. ಅವರು ಕೂಡಾ ನಮ್ಮನ್ನು ನೋಡಲಾರರು."

"ಅಲ್ಲಿಗೆ ಹೋಗೋಣ"

ಜೋಷಿ ಅದರಂತೆ ಡ್ರೈವರಿಗೆ ಸೂಚನೆ ಕೊಟ್ಟ ಕಾರು ಚಲಿಸಿತು. ಗಾಳಿಯಲ್ಲಿ ಪದ್ಮಳ ಪರಿಮಳ ಜೋಷಿಯ ಕಡೆಗೆ ಬೀಸಿ ಅವನ ನರ ನಾಡಿ

ಗಳನ್ನು ಉದ್ರೇಕಿಸಿತು. ಕೈಗಳನ್ನು ಹಿಡಿದ. ನಿದ್ರಿತ ನಳಿನಗಳಂತೆ ಅವು ನಿಶ್ಚೇಷ್ಟಿತವಾಗಿದ್ದುವು ಸ್ವಲ್ಪ ಹೊತ್ತಿನ ಮೇಲೆ ಒತ್ತಡದಿಂದ ಕಾವೇರಿದಂತೆ ಬೆರಳುಗಳು ಚಲಿಸಿ ತಮ್ಮದೇ ಆದ ನೀರವ ಭಾಷೆಯಿಂದ ಜೋಷಿಯ ಕೈಗಳನ್ನು ಸುತ್ತಿದವು ಸ್ತ್ರೀಯರ ಒಂದೊಂದು ಅಂಗದಲ್ಲಿಯೂ ಒಂದೊಂದು ಬಗೆಯ ಸೌಂದರ್ಯವಿದೆ. ನಖಶಿಖಾಂತ ವರ್ಣನೆಯಲ್ಲಿ ನಿಮಗ್ನರಾದ ಕವಿಗಳಿಗೆ ಈ ಸೌಂದರ್ಯದ ಒಂದು ಮುಖ ಗೋಚರವಾಗುತ್ತದೆ. ಪ್ರೇಮಿಗಳು ಅದರ ಮತ್ತೊಂದು ಮುಖವನ್ನು ಅರಿಯುತ್ತಾರೆ. ಕಾರು ಚಲಿಸುತ್ತಿದ್ದಂತೆ ಜೋಷಿ ತಿಳಿದ, ಪದ್ಮಳ ಸೌಂದರ್ಯ ಆಕರ್ಷಣೆಗಳು ಆಕ್ಷಣದಲ್ಲಿ ಅವಳ ಕೈ ಬೆರಳುಗಳಲ್ಲಿ ಕೇಂದ್ರೀಕರಿಸಲ್ಪಟ್ಟು ವಿದ್ಯುತ್ಪ್ರವಾಹ ದಂತೆ ತನ್ನ ದೇಹದ ಕಡೆಗೆ ಹರಿಯುತ್ತಿದೆಯೆಂದು

ಕಾರು ಕಛೇರಿಯ ಮುಂದೆ ನಿಲ್ಲುವವರೆಗೆ ಇಬ್ಬರೂ ಮಾತಾಡಲಿಲ್ಲ. ವೇಗದಿಂದ ಚಲಿಸುತ್ತಿದ್ದ ಆ ವಾಹನದಲ್ಲಿ ಸಾರಥಿಗೆ ಅಗೋಚರವಾಗಿ ಎರಡು ಆತ್ಮಗಳು ಒಂದನ್ನೊಂದು ಅರಿಯಲು ತವಕಿಸುತ್ತಿದ್ದವು. ಅವರ ಸೂಕ್ಷ್ಮ ದೇಹದ ಜ್ಯೋತಿಃಕಿರಣಗಳು ಅಂಡದಂತಿದ್ದ ವಾಹನದ ಗರ್ಭದಲ್ಲಿ ಸೆರೆ ಸಿಕ್ಕ ಪತಂಗಗಳಂತೆ ಒಂದನ್ನೊಂದು ಸುತ್ತುತ್ತಿದ್ದವು ಕಾರು ನಿಲ್ಲುತ್ತಲೇ ಜೋಷಿ ಕೆಳಗಿಳಿದು ಪದ್ಮಳನ್ನು ಕರೆದುಕೊಂಡು ಮೆಟ್ಟಿಲ ಕಡೆಗೆ ಹೋದ. ಮೊದಲ ಅಂತಸ್ತಿನ ಕೈಸಾಲೆ ದಾಟಿದಾಗ ಕಛೇರಿಯಲ್ಲಿ ಉಪಸಂಪಾದಕರು ಮಾತಾಡುತ್ತಿರುವುದು ಕೇಳಿಬಂತು ಪದ್ಮಾ ಜೋಷಿಯ ಹತ್ತಿರ ಸರಿದಳು. ಜೋಷಿ ಅವಳ ಭುಜಗಳನ್ನು ಮುಟ್ಟಿ ಎರಡನೆಯ ಅಂತಸ್ಥಿನ ಮೆಟ್ಟಿಲ ಕಡೆ ಕರೆದುಕೊಂಡು ಹೋದ.

ಎರಡನೆಯ ಅಂತಸ್ತು ಮೊದಲನೆಯದರಷ್ಟು ದೊಡ್ಡದಲ್ಲ. ಅಲ್ಲಿ ಇದ್ದದ್ದು ಒಂದು ದೊಡ್ಡ ನಡುಮನೆ, ಅದಕ್ಕೆ ಹೊಂದಿಕೊಂಡಂತೆ ಎರಡು ಸಣ್ಣ ಕೊಟಡಿಗಳು. ಮೆಟ್ಟಲು ಹತ್ತಿದ ಕೂಡಲೆ ವರಾಂಡಾ. ಅದರ ಒಂದು ಕಡೆ ನಡುಮನೆಯ ಬಾಗಿಲು.- ಮತ್ತೊಂದುಕಡೆ ವಿಶಾಲವಾದ ಬಿಸಿಲು ಮುಚ್ಚು ಅದರ ಕೊನೆಯಲ್ಲಿ ಸ್ನಾನದ ಮನೆ.

ವರಾಂಡದಲ್ಲಿ ದೀಪ ಉರಿಯುತ್ತಿತ್ತು. ಜೋಷಿ ನಡುಮನೆಯ ದೀಪ ಹತ್ತಿಸಿದ. ಬಳಿಕ ವರಾಂಡದ ದೀಪವನ್ನಾರಿಸಿ "ಕಾವಲುಗಾರನಿಗೆ ಇದು

ನನ್ನ ಸಂಕೇತ ಈಗ ಯಾರೂ ಇಲ್ಲಿಗೆ ಬರುವುದಿಲ್ಲ" ಎಂದ.

ನಡುಮನೆಯಲ್ಲಿ ಕೆಲವು ಸೋಫಾಗಳು ಕುರ್ಚಿಗಳು ಹಾಕಿದ್ದವು. ಪಾರ್ಶ್ವದ ಸಣ್ಣ ಕೊಟಡಿ ಶಯನ ಗೃಹ ಇಬ್ಬರೂ ನಡುಮನೆಯಲ್ಲಿ ಕುಳಿತರು.

"ನೀವಿಲ್ಲಿ ಒಬ್ಬರೇ ವಾಸ ಮಾಡುತ್ತೀರಾ ?"

ಪದ್ಮಾ ಕೇಳಿದಳು

"ಹೌದು. ಸಧ್ಯದಲ್ಲಿ ಒಬ್ಬನೆ. ನಾನು ಮೈಸೂರಿನವನೇ ಆದರೂ ಹೊರಗೆ ಹೆಚ್ಚು ದಿನಗಳನ್ನು ಕಳೆದಿದ್ದೇನೆ ಈಗ ಇಲ್ಲಿ ನನ್ನವರಾಗಿ ಯಾರೂ ಉಳಿದಿಲ್ಲ ಇರುವ ಒಬ್ಬ ಮಗಳನ್ನು ಕೊಯಮತ್ತೂರಲ್ಲಿ ತಮ್ಮನ ಮನೆಯಲ್ಲಿ ಬಿಟ್ಟಿದ್ದೇನೆ"

ಲತಾಂಗಿಯ ಸಂಗಡ ಕಳೆದ ಕೆಲವು ತಿಂಗಳಿಂದ ಜೋಷಿ ಸಲಿಗೆಯಿಂದ ವರ್ತಿಸುತ್ತಿದ್ದರೂ ಅವಳಿಗೆ ಈ ವಿವರಗಳನ್ನು ತಿಳಿಸಿರಲಿಲ್ಲ ಪರಿಚಯವಾದ ಎರಡು ದಿನಕ್ಕೆ ಪದ್ಮಾ ತನ್ನ ವಿಚಾರವಾಗಿ ಇಷ್ಟೊಂದು ವಿಷಯಗಳನ್ನು ತಿಳಿದುಕೊಂಡದ್ದು ಅವಳ ಚಾಣಾಕ್ಷತನದ ಗುರುತೆಂದು ಜೋಷಿ ಭಾವಿಸಿದ. ಲತಾಂಗಿ ಭಾವನಾ ಜೀವಿ, ಪದ್ಮಾ ವಾಸ್ತವಿಕ ಮನೋವೃತಿಯ ಹೆಂಗಸು. ಕಲ್ಪನೆಯ ಭಾವನಾಲೋಕದಲ್ಲಿ ಕನಸು ಕಾಣುವುದಕ್ಕಿಂತ ವಾಸ್ತವ ಜಗತ್ತಿನಲ್ಲಿ ಬಾಳಿ ಬದುಕುವುದು ಪದ್ಮಳಿಗೆ ಅವಶ್ಯಕ ಅವಳ ವ್ಯವಹಾರಿಕ ದೃಷ್ಟಿ ಜೋಷಿಯ ಕುತೂಹಲವನ್ನು ಕೆರಳಿಸಿತು

"ಅತಿಥಿಯಾಗಿ ಬಂದವರಿಗೆ ಏನಾದರೂ ಕೊಡಬೇಡವೇ ?" ಎಂದು ಹೇಳುತ್ತಾ ಅವನು ಬೀರು ತೆಗೆದು ಬಿಸ್ಕತ್ತಿನ ಡಬ್ಬಾ ಮತ್ತು ಪ್ಲೇಟು ಗಳನ್ನು ಹೊರಗಿಟ್ಟ

"ನನಗಿದೊಂದೂ ಬೇಡ. ಮನೆಗೆ ಹೋಗಿ ಊಟ ಮಾಡುತ್ತೇನೆ" ಎಂದಳು ಪದ್ಮಾ.

"ಪಕ್ಕದ ಹೋಟಲಿಂದ ಕಾಫಿ ತರಿಸಲೇ ?"

"ಅಗತ್ಯವಿಲ್ಲ"

"ಹಾಗಾದರೆ ಇದನ್ನಾದರೂ ತೆಗೆದುಕೊಳ್ಳಬೇಕು" ಎಂದು ಹೇಳಿ ಜೋಷಿ ಒಳಗೆ ಹೋಗಿ ಎರಡು ಗ್ಲಾಸುಗಳಲ್ಲಿ ಕೆಂಪು ಬಣ್ಣದ ದ್ರಾಕ್ಷಾರಸ

ತುಂಬಿ ತಂದುಕೊಟ್ಟ.

ಪದ್ಮಾ ತೆಗೆದುಕೊಂಡು "ನಿಮಗೆ ಈ ಅಭ್ಯಾಸವಿದೆಯೆಂದು ನನಗೆ ತಿಳಿದಿರಲಿಲ್ಲ" ಎಂದಳು

"ಪ್ರತಿದಿನ ಹನ್ನೆರಡು ಗಂಟೆ ಕಾಲ ಕೆಲಸ ಮಾಡಬೇಕಾಗುತ್ತದೆ. ಇದರ ಸಹಾಯವಿಲ್ಲದಿದ್ದರೆ ಶಕ್ತಿಯೆಲ್ಲಿಂದ ಬರಬೇಕು!"

ಇಬ್ಬರೂ ಪಾನ ಮಾಡಿದರು ಮಿರುಗುವ ದ್ರವ ಹೊಟ್ಟೆಗೆ ಬಿದ್ದು ಪದ್ಮಳ ನರ ನಾಡಿಗಳಲ್ಲಿ ನವೋದ್ರೇಕವನ್ನುಂಟುಮಾಡಿತು ಅವಳು ಜೋಷಿಯ ಕೈ ಹಿಡಿದು ಪಾರ್ಶ್ವದಲ್ಲಿ ಕುಳ್ಳಿರಿಸಿಕೊಂಡು ಹೇಳಿದಳು.

"ನೀವು ನನ್ನನ್ನು ಕಾಮಿಸುವಿರಲ್ಲವೇ ?"

ಪದ್ಮಳ ಪ್ರಶ್ನೆ ಅವನನ್ನು ಅಚ್ಚರಿಗೊಳಿಸಿತು ಇಂತಹ ಸಂದರ್ಭದಲ್ಲಿ "ನೀವು ನನ್ನನ್ನು ಪ್ರೀತಿಸುವಿರಲ್ಲವೇ ?" ಎಂದು ಕೇಳುವುದು ಹೆಣ್ಣಿಗೆ ಸಹಜ. ಆದರೆ ಪದ್ಮಾ ಉದ್ದೇಶಪೂರ್ವಕವಾಗಿ 'Love' ಎಂಬುದರ ಪ್ರತಿಯಾಗಿ 'Desire' ಎಂಬ ಶಬ್ದದ ಕನ್ನಡ ಪರ್ಯಾಯವನ್ನು ಉಪಯೋಗಿಸಿದ್ದಳು. ಅನ್ಯ ಭಾಷೆಯ ಮುಖಾಂತರ ವಿದ್ಯೆ ಕಲಿತ ಆಧುನಿಕರಂತೆ ಆಂಗ್ಲ ಭಾಷೆಯಲ್ಲಿ ಯೋಚಿಸಿ ಕನ್ನಡ ಮಾತಾಡುವುದು ಅವಳ ಅಭ್ಯಾಸವಾಗಿತ್ತು. ಜೋಷಿಯ ತುಟಿಗಳು ನೇರವಾಗಿ ಅವಳಿಗೆ ಉತ್ತರ ಕೊಟ್ಟವು.

ಜೋಷಿ ಚುಂಬಿಸಿದಾಗ ಲತಾಂಗಿಯ ತುಟಿಗಳು ತೆರೆದವು —ತಾಯಿ ಹಕ್ಕಿಯ ಗುಟುಕಿಗೆ ಕಾಯುವ ಮರಿ ಹಕ್ಕಿಯಂತೆ. ಬೃಂದಾವನದ ಆ ಅನುಭವ ಒಂದು ಸಂದರ್ಭದಲ್ಲಿ ಬೆಂಗಳೂರಲ್ಲೂ ಅವನಿಗೆ ಆಗಿತ್ತು. ಪದ್ಮಾ ತದ್ವಿರುದ್ಧವಾಗಿ ತುಟಿಗಳನ್ನು ಕುಂಚಿತಗೊಳಿಸಿದಳು. ಪೂರ್ಣ ಸ್ಪರ್ಶದ ಸುಖಾನುಭವದಿಂದ ಅವನ ದೇಹ ಪುಳಕಿತವಾಯಿತು ತೊಡೆಯ ಮೇಲೆ ತಲೆಯಿಟ್ಟು ಮಲಗಿದನು

ಅರೆನೆರೆತ ಅವನ ತಲೆಗೂದಲನ್ನು ನೇವರಿಸುತ್ತಾ ಪದ್ಮಾ ಹೇಳಿದಳು. "ನೀವು ನನಗೆ ಮಾತು ಕೊಡಬೇಕು, ಲತಾಂಗಿಯನ್ನು ಯಾವಾಗಲೂ ಕಾಮಿಸುವುದಿಲ್ಲವೆಂದು. ಮಾತು ಕೊಟ್ಟರೆ ನಾನು ನಿಮ್ಮವಳು."

ಪುನಃ "ಕಾಮ"! ಜೋಷಿ ಎದ್ದು ಕುಳಿತು "ಇದೇನು ನೀನು ಹೇಳುವುದು, ಪದ್ಮಾ. ಲತಾಂಗಿ ನಿನ್ನ ಗೆಳತಿ. ಅವಳ ವಿಚಾರದಲ್ಲಿ

ನಿನಗೇಕೆ ಇಷ್ಟೊಂದು ಅಸೂಯೆ ?" ಎಂದು ಕೇಳಿದನು.

"ಅಸೂಯೆಯಲ್ಲ. ಅವಳ ಮೇಲಿನ ಪ್ರೀತಿಯಿಂದ ನಾನು ಈ ಮಾತು ಹೇಳುತ್ತಿದ್ದೇನೆ. ಲತಾ ವಿಚಿತ್ರ ಹುಡುಗಿ. ಅವಳು ನಿಮ್ಮನ್ನು ಪ್ರೀತಿಸುತ್ತಾಳೆ. ಗೌರವಿಸುತ್ತಾಳೆ ನಿಮಗಾಗಿ ಏನು ಮಾಡಲೂ ಸಿದ್ಧವಾಗಿದ್ದಾಳೆ ಆದರವಳ ಪ್ರೇಮ ಕಾಮುವೇನೆಂಬುದನ್ನು ಅರಿಯದು. ಮಂಗೇಶನ ದುಡುಕುತನದ ವರ್ತನೆ ಅವಳನ್ನು ಪುರುಷದ್ವೇಷಿಯಾಗಿ ಮಾಡಿದೆ"

"ಇದನ್ನೆಲ್ಲಾ ನೀನು ಹೇಗೆ ಹೇಳಿದೆ ?"

"ಹೆಣ್ಣಿನ ಹೃದಯುವನ್ನು ಹೆಣ್ಣು ತಿಳಿಯಬಲ್ಲಳು"

"ನನ್ನ ವಿಚಾರವಾಗಿ ನಿನಗೆ ಅವಳೇನಾದರೂ ಹೇಳಿರುವಳೇ ?"

"ಹೆಚ್ಚಿಗೇನೂ ಹೇಳಿಲ್ಲ. ಒಂದು ದಿನ ಯಾವುದೋ ಮಾತಿಗೆ 'ಜೋಷಿ ನನ್ನ ಭಾಗದ ದೇವತೆ' ಎಂದು ಮಾತ್ರ ಹೇಳಿದಳು ನೀವು ಅವಳಿಗೆ ದೇವರಂತೆಯೇ ಇರಿ. ನಿಮ್ಮ ಸಂಬಂಧ ಕಾಮದ ಪರವಶತೆಯಿಂದ ಮಲಿನವಾಗದಿರಲಿ"

"ದೇವತೆಗಳಿಗೂ ಆಶೆ ಆಕಾಂಕ್ಷೆಗಳಿವೆ ಪದ್ಮಾ. ಚಿನ್ನದ ವಿಗ್ರಹಕ್ಕೆ ಮಣ್ಣಿನ ಕಾಲುಗಳನ್ನು ಜೋಡಿಸಿದಂತೆ ನನಗೆ ಲತಾಂಗಿ ಪರಿಚಯು ವಾದದ್ದು ಹೇಗೆ ಗೊತ್ತೇ ?"

"ನಾನು ತಿಳಿದುಕೊಳ್ಳಲು ಪ್ರಯತ್ನಿಸಲಿಲ್ಲ."

"ನಾನು ಹೇಳುತ್ತೇನೆ" – ಎಂದು ಜೋಷಿ ಮೈಸೂರಲ್ಲಿ ಅಂಬುಜಮ್ಮನ ಮನೆಯಲ್ಲಿ ಲತಾಂಗಿಯ ಪರಿಚಯುವಾದ ಮೊದಲುಗೊಂಡು ಅಂದಿನವರೆಗೆ ನಡೆದುದನ್ನು ಯಥಾವತ್ತಾಗಿ ವಿವರಿಸಿದ. ಬೃಂದಾವನದ ಲತಾಗೃಹದಲ್ಲಿ ನಡೆದುದನ್ನೂ ಸಂಕೋಚವಿಲ್ಲದೆ ಹೇಳಿದ

ಪದ್ಮಾ ಎಲ್ಲವನ್ನೂ ಕೇಳಿದಳು. "ನಿಮ್ಮ ಅನುಭವ ನಾನು ಹೇಳಿದುದಕ್ಕೆ ಸರಿಯಾಗಿದೆಯಲ್ಲವೇ ?" ಎಂದು ಪ್ರಶ್ನಿಸಿದಳು.

"ನನಗೂ ಹಾಗೆಯೇ ಕಾಣುತ್ತದೆ. ಈಗೇನು ಮಾಡುವುದು ?"

"ಲತಾಂಗಿಯ ಮೇಲಿನ ಆಸೆ ನೀವು ಸಂಪೂರ್ಣವಾಗಿ ಬಿಡಬೇಕು. ನೀವು ಅವಳನ್ನು ಪ್ರೀತಿಸಿ. ಬೇಡವೆನ್ನುವುದಿಲ್ಲ. ಆದರೆ ತಂದೆಯಂತೆ,

ಸಹೋದರನಂತೆ ಪ್ರೀತಿಸಿ. ಅವಳನ್ನು ಸುಖದಲ್ಲಿಡಲು ಸರ್ವ ಪ್ರಯತ್ನಗಳನ್ನೂ ಮಾಡಿ. ಆದರೆ ದೈಹಿಕವಾಗಿ ಅವಳನ್ನು ಬಯಸಬೇಡಿ."

" ನೀನು ನನ್ನಿಂದ ಅಸಾಧ್ಯವಾದ್ದನ್ನು ಕೇಳುತ್ತಿರುವೆ ಪದ್ಮಾ"

" ನೀವು ಅಸಾಮಾನ್ಯರೆಂದೂ, ನಿಮ್ಮಿಂದ ಈ ತ್ಯಾಗ ಸಾಧ್ಯವೆಂದೂ ಭಾವಿಸಿ ಕೇಳುತ್ತಿದ್ದೇನೆ "

" ಈ ತ್ಯಾಗದಿಂದ ನನಗಾಗುವ ಸಿದ್ಧಿ "

" ಪದ್ಮಳ ಪ್ರೇಮ "

ಈ ಮಾತುಗಳನ್ನು ಹೇಳುತ್ತಿದ್ದಂತೆ ಅವಳ ಕಣ್ಣುಗಳು ಸ್ಫುರಿಸಿದವು. ತುಟಿಗಳು ನಡುಗಿದವು ಭಾವಾವೇಶದಿಂದ ಕಂಠ ಗದ್ಗದಿತವಾಯಿತು

"ಆ ಸಿದ್ಧಿಯನ್ನು ನಾನು ಸ್ವೀಕರಿಸುತ್ತೇನೆ ಪದ್ಮಾ" ಎನ್ನುತ್ತ ಜೋಷಿ ಅವಳನ್ನು ತೋಳ ಸೆರೆಯಲ್ಲಿ ಬಂಧಿಸಿದ

" ಲತಾಂಗಿಯನ್ನು ನಾನು ಸೋದರಿಯಂತೆ ಪ್ರೀತಿಸುತ್ತೇನೆ. ನೀವೂ ಅವಳನ್ನು ಹಾಗೆಯೇ ಆದರಿಸಿ. ಅವಳ ಸಂಸಾರದಲ್ಲಿ ತಲೆದೋರಿರುವ ತೊಡಕನ್ನು ಪರಿಹರಿಸುವುದು ನನ್ನ ಆಸೆ. ಅದಕ್ಕೆ ನಿಮ್ಮ ಸಹಾಯ ಅಗತ್ಯ. ಏನು ಹೇಳುತ್ತೀರಿ ?"

ಹಿಂದಿನಂತೆ ಜೋಷಿಯ ತುಟಿಗಳೇ ಅದಕ್ಕೆ ಉತ್ತರ ಕೊಟ್ಟವು.

* * *

ಪದ್ಮಾ ಅಂದು ಮನೆಗೆ ಬಂದಾಗ ರಾತ್ರಿ ೧೨ ಗಂಟೆ. ಜೋಷಿ ಕಾರಲ್ಲಿ ಕರೆತಂದು ಬಿಟ್ಟು ಹೋದ. ತಾಯಿ ಬಾಗಿಲು ತೆರೆದು " ಹೊತ್ತು ಸಾಕೇ, ಪದ್ಮಾ ?"-ಎಂದಳು

ಪದ್ಮಾ ಪ್ರತಿಯಾಗಿ ಏನೂ ಹೇಳಲಿಲ್ಲ. ಮಲಗುವ ಕೋಣೆಗೆ ಹೋಗಿ ಬಟ್ಟೆ ಬದಲಾಯಿಸಿ ಕೈ ಕಾಲ ತೊಳೆದುಕೊಂಡು ಊಟಕ್ಕೆ ಕುಳಿತಳು.

"ಯಾರ ಕಾರಲ್ಲಿ ಬಂದದ್ದು ?"

ಊಟಕ್ಕೆ ಬಡಿಸಿ ತಾಯಿ ಕೇಳಿದಳು.

" ವಿಶ್ವಮಿತ್ರ ದಿನ ಪತ್ರಿಕೆಯ ಸಂಪಾದಕರ ಕಾರಲ್ಲಿ. ಮೊನ್ನೆ ಮನೆಗೆ ಬಂದಿರಲಿಲ್ಲವೇ ?"

" ಅವರನ್ನು ಒಳಗೆ ಕರೆಯಬಹುದಾಗಿತ್ತಲ್ಲ. ಹಾಗೆಯೇ ಹೊರಟು

ಹೋದರೆ ನೆರೆಯುವರೇನು ಹೇಳುವರು ?"

"ಹೇಳುವುದೇನು ? ಯಾವನ ಸಂಗಡಲೊ ಹೋಗಿದ್ದಳು ಎಂದಲ್ಲವೇ ? ಹೇಳಲಿ, ಭಯವಿಲ್ಲ"

"ನೀನು ಬರಬರುತ್ತಾ ಹದ್ದು ಮೀರುತ್ತಿರುವೆ ಪದ್ಮಾ" ಎಂದು ತಾಯಿ ಸುಮ್ಮನಾದಳು.

— ೩ —

"ಈ ದಿನ ರಾತ್ರಿ ಜೋಷಿ ಊಟಕ್ಕೆ ಬರುತ್ತಾರೆ ಏನಾದರೂ ಹೆಚ್ಚುಗಟ್ಟಲೆ ಮಾಡಬಾರದೆ ಅಮ್ಮ?"

ಎರಡು ದಿನಗಳ ಮೇಲೆ ಪದ್ಮಾ ತಾಯಿಗೆ ಹೇಳಿದಳು

"ನನ್ನ ಕೈಲಿ ಅವೆಲ್ಲಾ ಆಗುವುದಿಲ್ಲ. ಬೇಕಾದರೆ ಹೋಟಲಿಂದ ಏನಾದರೂ ತರಿಸು"

ಎಂದು ತಾಯಿಂದ ಉತ್ತರ ಬಂತು ಸ್ವಲ್ಪ ಚಟ್ನಿ ಎರಡುಬಗೆಯ ಪಲ್ಯ ಇಷ್ಟಾದರೂ ಮಾಡುವಂತೆ ಹೇಳಿ ಪದ್ಮಾ ಕೆಲಸಕ್ಕೆ ಹೋದಳು. ಬರುವಾಗ ಬೊಂಬಾಯ್ ಆನಂದ ಭವನದಿಂದ ಚಿರೋಟಿ ಲಾಡು ಮುಂತಾದ ಕೆಲವು ಸಿಹಿ ತಿಂಡಿಗಳನ್ನು ಕಟ್ಟಿಸಿಕೊಂಡು ಬಂದಳು ಕಾರ್ಖಾನೆಯ ಜವಾನನೊಬ್ಬನನ್ನು ನರಸಿಂಹರಾಜ ರಸ್ತೆಯಲ್ಲಿನ ಹೊಸ ಮಿಲಿಟರಿ ಹೋಟಲಿಗೆ ಕಳುಹಿಸಿ ಬಿರಿಯಾನಿ, ಕಹಿಮಾ, ಕಟ್‌ಲೆಟ್, ಮುಂತಾದ ಮಾಂಸಾಹಾರಗಳನ್ನೂ, ಒಂದು ಸೀಸೆ ಜಾನಿವಾಕರನ್ನೂ ತರಿಸಿಕೊಂಡಳು. ಇವೆಲ್ಲಕ್ಕೂ ಸುಮಾರು ೩೦–೪೦ ರೂಪಾಯಿಗಳು ಕರ್ಚಾದವು.

೯ ಗಂಟೆ ಸುಮಾರಿಗೆ ಜೋಷಿ ಬಂದ ಪದ್ಮಾ ಅವನನ್ನು ಒಳಗೆ ಕರೆದುಕೊಂಡು ಹೋಗಿ ಎರಡು ಪೆಗ್ ಜಾನಿವಾಕರ್ ಕೊಟ್ಟಳು. ತಾನೂ ಒಂದು ಪೆಗ್ ಕುಡಿದಳು. ಅನಂತರ ಇಬ್ಬರೂ ಊಟಕ್ಕೆ ಕುಳಿತರು

ತಾಯಿ ಬಡಿಸುತ್ತಿದ್ದಂತೆ "ನಿಮಗೆ ಅಭ್ಯಾನವಿದೆಯೋ ಇಲ್ಲವೋ ? ಬಿರಿಯಾನಿ ಕಹಿಮಾ ಮುಂತಾದವನ್ನೂ ತರಿಸಿದ್ದೇನೆ" ಎಂದಳು.

"ಅಭ್ಯಾಸವಿಲ್ಲದಿದ್ದರೂ ಬಡಿಸಿದಾಗ ಬೇಡವೆನ್ನುವುದಿಲ್ಲ" ಎಂದು ಹೇಳಿ ಎಲ್ಲವನ್ನೂ ಸ್ವಲ್ಪವಾಗಿ ತೆಗೆದುಕೊಂಡ

ಊಟ ಮುಗಿದ ಮೇಲೆ ಜೋಷಿ ಹೊರಡಲ ಸಿದ್ಧನಾದ ಪದ್ಮಾ ತಡೆದು "ಇಲ್ಲೇ ಇದ್ದುಬಿಡಿ ಬೆಳಿಗ್ಗೆ ಹೋದರಾಯಿ ." ಎಂದಳು

"ನಿಮ್ಮ ತಾಯಿ ಏನು ಹೇಳುವರು !"

"ಆ ಚಿಂತೆ ನಿಮಗೇಕೆ ? ನಾನು ಸರಿಪಡಿಸುತ್ತೇನೆ"

ಎಂದು ಹೇಳಿ ಪದ್ಮಾ ಅರ್ಧ ಗ್ಲಾಸ್ ತುಂಬ ಜಾನಿವಾಕರ್ ಬಗ್ಗಿಸಿ ತಾಯಿಗೆ ತೆಗೆದುಕೊಂಡು ಹೋಗಿ ಕೊಟ್ಟಳು ಪುನಃ ಸ್ವಲ್ಪ ಹೊತ್ತಿಗೆ ಹಿಂದಿರುಗಿ "ಇನ್ನು ಅಮ್ಮ ಬೆಳಗಿನ ತನಕ ಏಳುವುದಿಲ್ಲ" ಎಂದಳು

ಜೋಷಿ ಹಾಸಿಗೆಯ ಮೇಲೆ ಅರ್ಧಶಾಯಿತನಾಗಿ ಮಲಗಿ ಸಿಗರೇಟ್ ಸೇದುತ್ತಿದ್ದ ಪದ್ಮಾ ಅವನ ಪಾರ್ಶ್ವದಲ್ಲಿ ಕುಳಿತು ಕೈಯಿಂದ ಸಿಗರೇಟ್ ಕಿತ್ತುಕೊಂಡು ತಾನೂ ಸೇದತೊಡಗಿದಳು

ಮರುದಿನ ಶನಿವಾರವಾದ್ದರಿಂದ ಅಗ್ರಲೇಖನ "ಬೀದಿ ಮಾತು" ಗಳನ್ನು ಬರೆಯಬೇಕಾಗಿರಲಿಲ್ಲ ಬೆಳಗಿನ ಉಪಹಾರ ಮಧ್ಯಾಹ್ನದ ಊಟಗಳನ್ನು ಮುಗಿಸಿಕೊಂಡು ಜೋಷಿ ಮೂರುಗಂಟೆಗೆ ಕಛೇರಿಗೆ ಹೋದ ಎಂಟುಗಂಟೆಗೆ ಪದ್ಮಾ ಅಲ್ಲಿಗೆ ಬಂದಳು ಇಬ್ಬರೂ ಸ್ವಲ್ಪ ಹೊತ್ತು ಮಾತಾಡುತ್ತಿದ್ದು ಸಿನಿಮಾ ಎರಡನೆ ಆಟ ನೋಡಿಕೊಂಡು ರಾತ್ರಿ ೧ ಗಂಟೆಗೆ ಮನೆ ಸೇರಿದರು

ಎರಡು ವಾರಗಳು ಈ ರೀತಿ ನಡೆಯಿತು ಪದ್ಮಳ ಮನೆಯಲ್ಲಿ, "ವಿಶ್ವಮಿತ್ರ" ಕಛೇರಿಯಲ್ಲಿ, ಸಿನಿಮಾ ಮಂದಿರಗಳಲ್ಲಿ ಪದ್ಮಾ ಮತ್ತು ಜೋಷಿ ಪ್ರತಿದಿನ ಕೆಲವು ಗಂಟೆಗಳನ್ನಾದರೂ ಒಟ್ಟಿಗೆ ಕಳೆಯುವರು

ಕ್ರಮೇಣ ಈ ಪ್ರಣಯವಾರ್ತೆ "ವಿಶ್ವಮಿತ್ರ" ಸಂಪಾದಕ ವರ್ಗದಲ್ಲಿ ಪ್ರಚಾರಿತವಾಯಿತು ಜೋಷಿಯ ಈ ಮುಖವನ್ನು ಕಾಣದಿದ್ದ ಶ್ರೀನಾಥ "ಯಾವ ಹುತ್ತದಲ್ಲಿ ಯಾವ ಹಾವಿದೆಯೋ ? ಈಗರಡು ವಾರಗಳ ಹಿಂದೆ ಜೋಷಿಯವರ ವಿಚಾರದಲ್ಲಿ ಯಾರಾದರೂ ಇಂತಹ ಮಾತು ಹೇಳಿದ್ದರೆ ಕುಸ್ತಿಗೆ ನಿಲ್ಲುತ್ತಿದ್ದೆ" ಎಂದ ಆನಂದರಾಯ ಮೂಗಿನ ಮೇಲಿನ ಕನ್ನಡಕ ಸರಿಪಡಿಸಿಕೊಂಡು "ಹೆಂಗಸರನ್ನು ಕೆಲಸಕ್ಕೆ ಸೇರಿಸಿಕೊಂಡು ಮಾಲಿಕರೇ

ಇದಕ್ಕೆ ಅನುಕೂಲ ಮಾಡಿಕೊಟ್ಟರು" ಎಂದ

ಕಛೇರಿಯಲ್ಲಿ ಕೆಲಸಮಾಡುವ ಮಹಿಳಾಸ್ಟೆನೋಗಳ ಸಂಗಡ ಜೋಷಿಯ ವ್ಯವಹಾರದ ಮೇಲೆ ಸಂದೇಹದ ನೆರಳು ಚಲ್ಲುವುದು ಆ ಮಾತಿನ ಉದ್ದೇಶ ವೆಂದು ಶ್ರೀನಾಥನಿಗೆ ಅರ್ಥವಾಯಿತು ಆನಂದರಾಯನ ಕುಹಕಕ್ಕಾಗಿ ಮನಸ್ಸಿನಲ್ಲೇ ಶಪಿಸಿಕೊಂಡು ಸುಮ್ಮನಾದ

ಜೋಷಿಯ ಗೆಳೆಯರಲ್ಲಿ ಪ್ರಾಂತೀಯ ಪತ್ರಿಕೆಗಳ ಬೆಂಗಳೂರು ಪ್ರತಿನಿಧಿಗಳು ಕೆಲವರಿದ್ದರು ಅವರಲ್ಲೊಬ್ಬ ಮಲ್ಲೇಶ್ವರದಲ್ಲಿ ವಾಸಮಾಡುತ್ತಿದ್ದ. ಒಂದು ದಿನ ಅವನು "ಏನಯ್ಯ, ಪದ್ಮಾ ಆನಂದಪುತ್ರಿ ಮನೆಗೆ ತಿರುಗಾಟ ಜಾಸ್ತಿಯಾಗಿದೆ ?" ಎಂದು ಜೋಷಿಯನ್ನು ಕೇಳಿದ

"ಅದೇಕಪ್ಪ ಹಾಗೆ ಕೇಳುತ್ತೀ"

"ಸ್ವಲ್ಪ ಎಚ್ಚರಿಕೆಯಿರಲಿ, ಜೋಷಿ ನಾನು ಕಂಡಂತೆ ಅವಳು ಮೂವರಿಗೆ ಮೋಕ್ಷ ಕಾಣಿಸಿದ್ದಾಳೆ"

"ಏನು ಮಾಡಿದಳು ಅವರಿಗೆ ?"

"ಏನು ಮಾಡಿದಳೋ ಕಾಣೆ ಒಬ್ಬ ದೇಶ ಬಿಟ್ಟು ಪರಾರಿಯಾದ ಇನ್ನೊಬ್ಬ ಮೆಂಟಲ್ ಆಸ್ಪತ್ರೆಯಲ್ಲಿ ಪರ್ಮನೆಂಟ್ ಬೋರ್ಡರ್ ಮೂರನೆಯವನು ಕುಡಿತಕ್ಕೆ ಬಿದ್ದು ಸತ್ತುಹೋದ"

"ನಾಲ್ಕನೆಯವನಾದ ನಾನು ಏನಾಗುವೆನೋ ಎಂದು ನಿನ್ನ ಚಿಂತೆ ಅಲ್ಲವೇ ? ನನ್ನ ಅದೃಷ್ಟವೇಕೆ ಚೆನ್ನಾಗಿರಬಾರದು ?"

"ಹೇಳಬೇಕೆನಿಸಿತು ಹೇಳಿದೆ ಅವಳ ಸಹವಾಸ ಮೋಹಿನಿ ಹಿಡಿದಂತೆ. ಎಚ್ಚರವಾಗಿರು ಮಹರಾಯ !"

ಎಂದು ಹೇಳಿ ಗೆಳೆಯ ಬೀಳ್ಕೊಂಡ

ಜೋಷಿಯ ಹೃದಯ ಕಲಕಿತು ಪದ್ಮಾಳಲ್ಲಿ ಇವರು ಕಾಣುವ ತಪ್ಪೇನು ? ಎಂದು ಯೋಚಿಸಿದ. ತನ್ನ ಪರಿಚಯದ ಸ್ತ್ರೀಯರಲ್ಲಿ ಪದ್ಮಾ ಒಂದು ದೃಷ್ಟಿಯಿಂದ ಅಸಾಮಾನ್ಯಯೆಂದು ಜೋಷಿ ತಿಳಿದಿದ್ದ ಅವಳ ಶ್ರೀಮದ್ಗಾಂಭೀರ್ಯ ಮೇಲಿನ ತೋರಿಕೆ, ತನಗೆ ಬೇಡದವರನ್ನು ದೂರದಲ್ಲಿಡುವುದು ಅದರ ಉದ್ದೇಶ, ಗೆಳತನ ಬೆಳೆದಾಗ ಅವಳು ಬೆಣ್ಣೆಯಂತೆ ಮೃದುವಾಗುವಳು ಎಂಬುದು ಅವನಿಗೆ ಅನುಭವ ಸಿದ್ಧವಾಗಿತ್ತು ಅವಳ ಒಂದೇ

ಒಂದು ದೋಷವೆಂದರೆ ಸಮಾಜ ನೀತಿ ಧರ್ಮಗಳ ವಿಚಾರದಲ್ಲಿ ಉಚ್ಛೃಂಖಲ ವೃತ್ತಿ. ಸಮಾಜದ ಕಟ್ಟುಕಾಯಿದೆಗಳನ್ನು ಅವಳು ಇಷ್ಟ ಬಂದಾಗ ಪಾಲಿಸುವಳು, ಬೇಡದಿದ್ದಾಗ ಉಲ್ಲಂಘಿಸುವಳು. ಪಾಪ ಭೀತಿಯಿರಲಿ, ಪಾಪ ಮಾಡುವನೆಂಬ ಅರಿವೂ ಅವಳಿಗಿರಲಿಲ್ಲ. ತನ್ನ ಪ್ರಣಯ ಕಥೆಗಳನ್ನು ಸಂಕೋಚವಿಲ್ಲದೆ ಜೋಷಿಗೆ ಹೇಳುವಳು. ಕ್ಲೇಶದಾಯಕವಾದ ಈ ಆತ್ಮ ಕತೆಗಳನ್ನು ಕೇಳುವ ಇಷ್ಟವಿಲ್ಲದೆ ಜೋಷಿ ಪ್ರತಿಭಟಿಸಿದರೂ ಅವಳು ಸುಮ್ಮನಾಗುತ್ತಿರಲಿಲ್ಲ. ಪ್ರತಿಭಟನೆ ತೀವ್ರವಾದಂತೆಲ್ಲ ಹೊಸ ಘಟನೆಗಳನ್ನು ಬಣ್ಣಕಟ್ಟಿ ವಿವರಿಸುವಳು. ಒಂದೆರಡು ಸಾರಿ ಈ ರೀತಿ ನಡೆದಮೇಲೆ ತನಗೆ ನೋವುಂಟುಮಾಡುವುದಕ್ಕಾಗಿಯೇ ಪದ್ಮಾ ಅವುಗಳನ್ನು ಹೇಳುತ್ತಿರಬಹುದಾಗಿ ಜೋಷಿ ಭಾವಿಸಿದ. ಗೆಳೆಯನ ಎಚ್ಚರಿಕೆಯ ನುಡಿಗಳು ಅಸಂಭವವಲ್ಲವೆಂದು ತೋರಿತು.

ಆದರೂ ಪದ್ಮಳಿಂದ ದೂರವಾಗಿರುವುದು ಅವನಿಗೆ ಸಾಧ್ಯವಿರಲಿಲ್ಲ. ಇದುವರೆಗೆ ಯಾವ ಹೆಣ್ಣಿನ ಸಂಗದಲ್ಲಿಯೂ ದೊರಕದಿದ್ದ ಶಾಂತಿ ಸಮಾಧಾನ ಅವನಿಗೆ ಪದ್ಮಳಲ್ಲಿ ದೊರಕಿತ್ತು. ಕಛೇರಿಯ ಕೆಲಸ ಕಾರ್ಯಗಳಿಂದ ಬೇಸತ್ತು, ತಲೆ ಶೂಲೆಯಿಂದ ಮಲಗಿದಾಗ ಪದ್ಮಾ ಪಾರ್ಶ್ವದಲ್ಲಿ ಬಂದು ಕುಳಿತು ನೀಳವಾದ ಬೆರಳುಗಳಿಂದ ತಲೆಸವರುವಳು. ಅವಳ ವಕ್ಷದಲ್ಲಿ ತಲೆಯಿಟ್ಟು ಮಗುವಿನಂತೆ ನಿದ್ರೆ ಹೋಗುವನು. ಎಚ್ಚರವಾದಾಗ ತಲೆ ಶೂಲೆ ಮಾಯವಾಗಿ ಮನಸ್ಸು ಹೊಸ ಉತ್ಸಾಹದಿಂದ ಉತ್ತೇಜಿತವಾದುದನ್ನು ಕಂಡು ಅವನೇ ಆಶ್ಚರ್ಯಗೊಳ್ಳುವನು. ಮುಳ್ಳುಗಳ ಮಧ್ಯೆ ಗುಲಾಬಿಯಂತೆ ಪದ್ಮಳ ಅಸಂಯತ ಉಚ್ಛೃಂಖಲ ವರ್ತನೆಯ ನಡುವೆ ಮಿರುಗುವ ಈ ಮಧುರತೆ ಅವನನ್ನು ಮುಗ್ಧನಾಗಿ ಮಾಡಿತ್ತು.

ಈ ಮಧ್ಯೆ ಮಂಗಳೂರಿಂದ ಒಂದೆರಡು ಕಾಗದಗಳು ಬಂದವು. ಕೊನೆಯ ಕಾಗದದಲ್ಲಿ ಲತಾಂಗಿ ತಾನು ಬರುವ ದಿನವನ್ನು ತಿಳಿಸಿ ಬರೆದಿದ್ದಳು. ಕಾಗದ ತೋರಿಸಿದಾಗ ಜೋಷಿ ಹೇಳಿದ:

"ನಮ್ಮ ವಿಚಾರ ಅವಳಿಗೆ ತಿಳಿಸಬೇಡ, ಪದ್ಮಾ."

"ನಾನು ಹೇಳದಿದ್ದರೆ ಅವಳೇ ತಿಳಿದುಕೊಳ್ಳುವಳು. ಮಲ್ಲಿಗೆಯ ವಾಸನೆ ಮುಚ್ಚಿಟ್ಟರೆ ಹೋಗುವುದೇ ಡಿಯರ್" ಪದ್ಮಾ ಉತ್ತರ ಕೊಟ್ಟಳು.

— ೪ —

ಪದ್ಮಾ ಆನಂದಪುತ್ರಿ ಪೂನಾ ನಗರದ —ಕಾಲೇಜ್ ಸೇರಿದಾಗ ಅವಳಿಗೆ ೨೦ ವರ್ಷ ವಯಸ್ಸು ಅವಳ ತಂದೆ ಅಲ್ಲಿಯ ಸೈನ್ಯ ಕೇಂದ್ರದಲ್ಲಿ ದೊಡ್ಡ ಅಧಿಕಾರಿಯಾಗಿದ್ದ ಅಲ್ಲಿಯವರೆಗೆ ಕಾನ್ವೆಂಟಿನ ಕ್ರಮಬದ್ಧವಾದ ಮೇಲ್ವಿಚಾರಣೆಯಲ್ಲಿ ಬೆಳೆದ ಅವಳು ಲಜ್ಜೆವಿನಯಗಳಲ್ಲಿ ಆದರ್ಶಪ್ರಾಯಳಾಗಿದ್ದಳು ಪಾಠ ಪ್ರವಚನಗಳಲ್ಲಿ ಅವಳ ಆಸಕ್ತಿಯನ್ನು ಅಧ್ಯಾಪಕರೂ ಪ್ರಶಂಸಿಸುತ್ತಿದ್ದರು.

ಕಾಲೇಜಲ್ಲಿ ಸಹಜವಾಗಿ ಮಹಾರಾಷ್ಟ್ರ ಹುಡುಗಿಯರ ಸಂಖ್ಯೆ ಹೆಚ್ಚಾಗಿದ್ದಿತು ಕನ್ನಡಿಗರು ಕೆಲವರು ಮಾತ್ರ ಅವರು ಕೂಡ ಸಹಪಾಠಿಗಳೊಡನೆ ತಮ್ಮ ಕನ್ನಡತನ – ಬಿಟ್ಟು ನಡೆದುಕೊಳ್ಳಬೇಕಾಗಿತ್ತು ಮೊದಲು ಅಸಹನೆ ತೋರುತ್ತಿದ್ದ ಮರಾಠಿ ವಿದ್ಯಾರ್ಥಿನಿಯರು ಪದ್ಮಾ ತಮಗಿಂತ ಚೆನ್ನಾಗಿ ಇಂಗ್ಲಿಷ್ ಮಾತಾಡುವಳೆಂದು ತಿಳಿದಾಗ ಗೌರವಿಸ ತೊಡಗಿದರು

ಈ ರೀತಿ ಕೆಲವು ತಿಂಗಳು ನಡೆಯಿತು ಆ ಮೇಲೆ ಒಂದು ದಿನ ಪದ್ಮಾ ಮನೆಗೆ ಹೋಗುತ್ತಿದ್ದಾಗ ಕಾಲೇಜ್ ಆವರಣದಲ್ಲಿ ನಿಂತಿದ್ದ ಮೂವರು ವಿದ್ಯಾರ್ಥಿನಿಯರು ತನ್ನನ್ನು ನೋಡಿ ನಗುತ್ತಿರುವುದನ್ನು ಕಂಡಳು ಅವರು ಅಪರಿಚಿತರು ತನಗಿಂತ ಹೆಚ್ಚಿನ ತರಗತಿಯಲ್ಲಿ ಓದುತ್ತಿದ್ದವರು ಆದ್ದರಿಂದ ಅವರನ್ನು ಗಮನಿಸದೆ ತನ್ನಪಾಡಿಗೆ ತಾನು ಹೊರಟಳು ಮಹಾದ್ವಾರಕ್ಕೆ ಅವರನ್ನುದಾಟಿ ಹೋಗಬೇಕಾಗಿತ್ತು ಸಮೀಪಕ್ಕೆ ಬಂದಾಗ ವಿದ್ಯಾರ್ಥಿನಿಯರಲ್ಲೊಬ್ಬಳು ಪದ್ಮಳ ಕಡೆ ತಿರುಗಿ, ' Hello ' Hidden Bloom '

ಎಂದು ಕರೆದಳು ಎಲ್ಲರೂ ನಕ್ಕರು ಪದ್ಮಳಿಗೆ ಅರ್ಥವಾಗಲಿಲ್ಲ ಮಾರುತ್ತರಕೊಡದೆ ಗಂಭೀರವಾಗಿ ಹೊರಟಳು ವಿದ್ಯಾರ್ಥಿನಿಯರ ನಗು ಅವಳ ಕಿವಿಗಳಲ್ಲಿ ಪ್ರತಿಧ್ವನಿತವಾಗುತ್ತಿತ್ತು

ಮಾರನೆಯ ದಿನ ಪದ್ಮಾ ತನ್ನ ತರಗತಿಯ ವಿದ್ಯಾರ್ಥಿನಿಯೊಬ್ಬಳಿಗೆ ನಡೆದುದನ್ನು ವಿವರಿಸಿದಳು ಅವರ ನಗುವಿನ ಕಾರಣ ಕೇಳಿದಳು ವಿದ್ಯಾರ್ಥಿನಿ ಉತ್ತರ ಕೊಟ್ಟಳು

" ಅಯ್ಯೋ ಪೆದ್ದೀ ! ಅವರ ಮಾತು ನಿನಗೆ ಅರ್ಥವಾಗಲಿಲ್ಲವೇ ?

Hidden Bloom ಅವರು ನಿನಗಿಟ್ಟಿರುವ ಹಾಸ್ಯದ ಹೆಸರು "

"ಎಷ್ಟು ಧೈರ್ಯ ಅವರಿಗೆ ನಾನು ಪ್ರೊಫೆಸರಿಗೆ ಹೇಳುತ್ತೇನೆ-"

"ಅದೆಲ್ಲಾ ಬೇಡ ಸುಮ್ಮನಿದ್ದು ಬಿಡು ಪದ್ಮಾ ಅವರು ಮೂವರು ಬಹಳ ತುಂಟ ಹುಡುಗಿಯರು ಎಲ್ಲರೂ ಅವರಿಗೆ ಹೆದರುತ್ತಾರೆ "

"ಎಲ್ಲರೂ ಹೆದರಬಹುದು, ನಾನು ಹೆದರುವುದಿಲ್ಲ ಪುನಃ ಅವರು ನನ್ನನ್ನು ಹಾಗೆ ಕರೆಯಲಿ, ಏನಾಗುವುದೋ ನೋಡುವೆ !"

ಪದ್ಮಾ ಈ ಮಾತು ಧೈರ್ಯವಾಗಿ ಹೇಳಿದರೂ ಪುನಃ ಆ ಹುಡುಗಿಯರು ತನ್ನನ್ನು ಅದೇ ಹೆಸರಿಂದ ಕರೆದಾಗ ಮಾರುತ್ತರ ಕೊಡದೆ ತಲೆ ತಗ್ಗಿಸಿಕೊಂಡು ದೂರ ಸರಿದಳು ಕೆಲವು ದಿನಗಳೊಳಗಾಗಿ "Hidden Bloom" ಎಂಬ ಹೆಸರು ಕಾಲೇಜಲ್ಲೆಲ್ಲಾ ಪ್ರಚಾರವಾಗಿ ಪದ್ಮಳ ಸಹ ವಿದ್ಯಾರ್ಥಿನಿಯರು ಅವಳನ್ನು ಆ ಹೆಸರಿಂದ ಕರೆಯಲು ಪ್ರಾರಂಭಿಸಿದರು

ಆಗ ಪದ್ಮಾ ನಿಜವಾಗಿ ಲಜ್ಜಿತೆಯಾಗಿ ಕಾನ್ವೆಂಟಿನ ಗೆಳತಿ ಶೀಲಾ ಮಾಥ್ಯೂಸ್ ಸಂಗಡ ಆ ವಿಚಾರ ತಿಳಿಸಿದಳು ಕಾನ್ವೆಂಟ್ ಬಿಟ್ಟಮೇಲೆ ಅವರು ಪರಸ್ಪರ ಬೇಟಿಯಾದ್ದು ಅದೇ ಮೊದಲ ನಾರಿ ಶೀಲಾ ಸಂಗಡ ಅವಳ ಕಸಿನ್ ಜಯಸೂರ್ಯನೂ ಪದ್ಮಳ ಕಥೆಯನ್ನು ಕೇಳಿದ ಇಬ್ಬರೂ ನಕ್ಕರು ಜಯಸೂರ್ಯ ಹೇಳಿದ,

"ನಿನ್ನ ಕೀಟಲೆ ಮಾಡುತ್ತಿರುವ ಆ ಹುಡುಗಿಯರನ್ನು ನಾನು ಬಲ್ಲೆ ಕಾಲೇಜಲ್ಲಿ ಅವರನ್ನು Lady Musketeers* ಎಂದು ಕರೆಯುತ್ತಾರೆ ಅವರಲ್ಲೊಬ್ಬಳು ನನಗೆ ತುಂಬಾ ಪರಿಚಿತೆ "

"ಹಾಗಿದ್ದರೆ ಪದ್ಮಳಿಗೂ ಅವರ ಪರಿಚಯ ಮಾಡಿಸು, ಜಯಸೂರ್ಯ ತೊಂದರೆ ಪರಿಹಾರವಾಗುವುದು "

"ನೀನು ಹೇಳುವುದು ಅಷ್ಟು ಸುಲಭವಲ್ಲ, ಶೀಲಾ. ಅವರು ಬಹಳ exclusive set ಹೊರಗಿನವರೊಡನೆ ಬೆರೆಯದೆ ಪ್ರತ್ಯೇಕವಾಗಿರುವ ಗುಂಪು. ಆದರೂ ಪ್ರಯತ್ನಿಸುತ್ತೇನೆ "

"ಪ್ರಯತ್ನವೊಂದೇ ಸಾಲದು ಜಯ ಸೂರ್ಯ ಪದ್ಮಳ ತೊಡಕನ್ನು

---

* ಸ್ತ್ರೀ ಯೋಧರು ಅಥವಾ ಗಂಡು ಬೀರಿಯರು.

ನೀನು ಪರಿಹರಿಸಬೇಕು The Hidden Bloom should no longer be hidden ಮುಚ್ಚಿಟ್ಟ ಹೂವು ಇನ್ನು ಮುಂದೆ ಮುಚ್ಚಿರುವುದಿಲ್ಲ ”

ಶೀಲಾ ಹೇಳಿದ ಮಾತುಗಳ ಅಂತರಾರ್ಥ ಪದ್ಮಳಿಗೆ ತಿಳಿಯಲು ಕೆಲವು ವಾರಗಳಾದವು ಜಯಸೂರ್ಯ ಅದನ್ನವಳಿಗೆ ಅರ್ಥ ಮಾಡಿಕೊಟ್ಟು ಪ್ರಣಯದ ಹಾದಿಯಲ್ಲಿ ಮೊದಲ ಮೆಟ್ಟಲು ಹತ್ತಿಸಿದ

ನಗರದ ಸಿನಿಮಾ ಮಂದಿರವೊಂದರಲ್ಲಿ ಜಯಸೂರ್ಯನನ್ನು ತೋರಿಸಿ ಪದ್ಮಾ ಹಿಂದಿನ ಈ ಘಟನೆಯನ್ನು ವಿವರಿಸಿದಾಗ ಜೋಷಿಯ ಮನಸ್ಸು ಕಲಕಿತು “ ಆ ಮೇಲೆ ಒಬ್ಬ ಹುಡುಗಿಯ ವಿಚಾರವಾಗಿ ನನಗೂ ಅವನಿಗೂ ದೊಡ್ಡ ಜಗಳವಾಯಿತು ಈಗ ನನ್ನನ್ನು ನೋಡಿದರೆ ಮುಖ ತಿರುಗಿಸುತ್ತಾನೆ ” ಎಂದು ಪದ್ಮಾ ತನ್ನ ಕತೆ ಪೂರೈಸಿದಳು ಜಯ ಸೂರ್ಯ ಪುನಾದಲ್ಲಿ ನ್ಯಾಯಶಾಸ್ತ್ರಾಭ್ಯಾಸ ಮುಗಿಸಿಕೊಂಡು ಬೆಂಗಳೂರಲ್ಲಿ ವಕೀಲ್ ವೃತ್ತಿ ನಡೆಸುತ್ತಿದ್ದ.

ಅಲ್ಲಿಯ ಸಿನಿಮಾ ಮಂದಿರ ಮತ್ತು ಬಾರುಗಳಲ್ಲಿ ಆಗಾಗ ಅವನು ಜೋಷಿ ಕಣ್ಣಿಗೆ ಬೀಳುತ್ತಿದ್ದ ಅವನನ್ನು ಕಂಡಾಗಲೆಲ್ಲ ಜೋಷಿ ಮನಸ್ಸು ಕಲಕುವುದು ಅಸೂಯೆಯಿಂದ ಕ್ಷಣಕಾಲ ಹೃದಯ ಚಲನೆ ನಿಲ್ಲುವುದು

ಕೆಲವು ದಿನಗಳಲ್ಲಿ ಪದ್ಮಾ ಆ ಮೂವರಲ್ಲಿ ನಾಲ್ಕನೆಯವಳಾಗಿ ಸೇರಿಕೊಂಡಳು “Three Musketeers” ಸಂಗಡ D'Artagnan ಸೇರಿದಂತಾಯಿತು ” ಎಂದು ಕಾಲೇಜ್ ವಿದ್ಯಾರ್ಥಿಗಳು ಹೇಳಿದರು * ಸಾಹಸಿಕೆಯರಾದ ಈ ವಿದ್ಯಾರ್ಥಿನಿ ಚತುಷ್ಟಯದ ಕಾರ್ಯಕಲಾಪಗಳನ್ನು ಪದ್ಮಾ ಸಪ್ರತಿಭೆಯಾಗಿ ಸಾಲಂಕರವಾಗಿ ಜೋಷಿಗೆ ವರ್ಣಿಸಿದಳು

“ ಎರಡು ವರ್ಷ ಕಾಲೇಜಲ್ಲಿ ನಮ್ಮ ದರ್ಬಾರ್ ನಡೆಯಿತು ನಾವೇ ನಾವಾಗಿ ಮೆರೆದೆವು. ಅಧ್ಯಾಪಕರು, ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ಎಲ್ಲರೂ ನಮಗೆ ಹೆದರುತ್ತಿದ್ದರು. ನಮ್ಮನ್ನು ಎದುರು ಹಾಕಿಕೊಳ್ಳುವ ಧೈರ್ಯ ಯಾರಿಗೂ ಇರಲಿಲ್ಲ ಒಂದು ಸಾರಿ ನಾವು ನಮ್ಮಲ್ಲೇ ಒಂದು

---

* ತ್ರೀಮಸ್ಕೆಟೀರ್ಸ್ – ಮೂವರು ಯೋಧರು ಪ್ರಸಿದ್ಧ ಫ್ರೆಂಚ್ ಕಾದಂಬರಿ, ಧಾರ್ತಘ್ನ ಆದರಲ್ಲಿ ಬರುವ ನಾಲ್ಕನೆಯ ಪಾತ್ರ.

ಸ್ಪರ್ಧೆ ಏರ್ಪಡಿಸಿ ಕೊಂಡೆವು ನಮ್ಮಲ್ಲಿ ಯಾರು ಹೆಚ್ಚು ತೆಳುವಾದ ಸೀರೆ ಯುಟ್ಟು ಕಾಲೇಜಿಗೆ ಬರುವಳೋ ಅವಳಿಗೆ ಉಳಿದ ಮೂವರು ಒಂದೊಂದು ಜಾರ್ಜೆಟ್ ಸೀರೆ ಬಹುಮಾನ ಕೊಡಬೇಕೆಂದು ಪ್ರಿನ್ಸಿಪಾಲರು ನಮ್ಮಲ್ಲಿ ಯಾರನ್ನು ಕರೆಸಿ ವಾರನಿಂಗ್ ಕೊಡುವರೋ ಅವರಿಗೆ ಪ್ರಥಮ ಬಹು ಮಾನವೆಂದು ಗೊತ್ತಾಯಿತು ಸ್ಪರ್ಧೆಗೆ ಬೇಕಾದ ತೆಳುವು ಬಟ್ಟೆಯನ್ನು ಹುಡುಕಲು ನಗರದ ಅಂಗಡಿಗಳನ್ನೆಲ್ಲಾ ನೋಸಿ ಬಿಟ್ಟೆವು ಸೆಲೋಪೇಸ್ ಅಥವಾ ಗಾಜಲ್ಲಿ ಮಾಡಿದ ಬಟ್ಟೆಯಿದ್ದಿದ್ದರೆ ಅದನ್ನುಡಲೂ ನಾವು ಸಿದ್ಧವಾಗಿ ದ್ದೆವೆಂಬುದರಿಂದ ಆಗಿನ ನಮ್ಮ ಉತ್ಸಾಹನನ್ನು ತಿಳಿಯಬಹುದು ಸ್ಪರ್ಧೆಯ ದಿನ ನಾವು ಏನು ಉಟ್ಟದ್ದೆವೆಂಬುದು ಈಗ ಅನವಶ್ಯಕ ಅದೇನು ಬಟ್ಟೆಯೋ ಅಥವಾ ಜಾಡನ ಪರಯೋ ಎಂದು ಅನೇಕರು ಸಂದೇಹಿಸಿದ್ದುಂಟು ಸ್ವಲ್ಪ ಹೆಚ್ಚು ಕಡಿಮೆ ನಾಲ್ಕು ಮಂದಿಯೂ ಒಂದೇ ಸಮನಾದ ಉಡುಪು ಧರಿಸಿ ದ್ದೆವು ನಾಜೋಕು, ನಲಿದಾಟ ಬೆಡಗುಗಳಲ್ಲಿ ಒಬ್ಬರು ಮತ್ತೊಬ್ಬರಿಗೆ ಸೋಲುವಂತಿರಲಿಲ್ಲ ಆ ದಿನ ನಾವು ಹಾಕಿಕೊಂಡಿದ್ದ ಚೋಲಿಗಳಿಗೆ ಎಷ್ಟು ಸಾಧ್ಯವೋ ಅಷ್ಟು ಕಡಿಮೆ ಪ್ರಮಾಣದ ಬಟ್ಟೆಯನ್ನುಪಯೋಗಿಸಿತ್ತು. ಕ್ಲಾಸ್ ನಡೆಯುತ್ತಿದ್ದಾಗ ಎಲ್ಲರ ದೃಷ್ಟಿ ನಮ್ಮ ಮೇಲೆ ವಿದ್ಯಾರ್ಥಿನಿಯರಿ ಗಾಗಿ ಪ್ರತ್ಯೇಕವಾಗಿ ಹಾಕಿದ್ದ ಬೆಂಚಿನ ಮೇಲೆ ನಾನು ಮುಂದೆ ಕುಳಿತಿದ್ದೆ ಒಬ್ಬ ಅಧ್ಯಾಪಕರು ಆ ದಿನ ಮರೆಯಲ್ಲಿ ನನ್ನನ್ನು ನೋಡುವ ತವಕದಿಂದ ಪಾರದ ವಿಷಯವನ್ನೇ ಮರೆತು ಬಿಟ್ಟರು ವಿರಾಮ ಕಾಲದಲ್ಲಿ ನಾವು ಹೊರಗೆ ಬಂದಾಗ ಎಲ್ಲ ವಿದ್ಯಾರ್ಥಿಗಳು ನಮ್ಮ ಹಿಂದೆಯೇ ಹಸಿದ ನಾಯಿ ಗಳಂತೆ ನಾವು ಎಲ್ಲಿ ಹೋದರಲ್ಲಿ ಬರುತ್ತಿದ್ದರು ಪುನಃ ನಾವು ಕ್ಲಾಸಿನೊ ಳಗೆ ಹೋದಾಗ ಪ್ರಿನ್ಸಿಪಾಲರು ಬಿಳಿ ವಾಯಲ್ ಸೀರೆಯುಟ್ಟಿದ್ದ ನನ್ನ ಗೆಳತಿಗೆ ಹೇಳಿಕಳುಹಿಸಿದರು ಬಹುಮಾನ ಕೈತಪ್ಪಿತಲ್ಲಾ ಎಂದು ಪೆಚ್ಚು ಮುಖ ಹಾಕಿಕೊಂಡು ನಾವು ಮೂವರೂ ಕ್ಲಾಸಿಗೆ ಹೋದೆವು ! ಯಾವಾಗ ನಾಲ್ಕು ಗಂಟೆ ಹೊಡೆಯುವುದೋ ಎಂದು ನಮಗೆಲ್ಲ ಆತುರ ಆದರೆ ಬಹು ಮಾನ ಪಡೆದ ಗೆಳತಿ ಎಲ್ಲಿಯೂ ಕಾಣಲಿಲ್ಲ. ಪ್ರಿನ್ಸಿಪಾಲರ ಕೊಟಡಿಗೆ ಹೋದ ಮೇಲೆ ಏನು ನಡೆಯಿತೆಂಬುದು ಜವಾನನಿಗೂ ತಿಳಿಯದು ನಾವು ಮೂವರೂ ಕುತೂಹಲದಿಂದ ವಾರ ಪೇಟೆಯಲ್ಲಿದ್ದ ಗೆಳೆತಿಯ ಮನೆಗೆ

ಹೋದೆವು ನಮ್ಮನ್ನು ನೋಡಿ ಅವಳು ಕಿಲ ಕಿಲನೆ ನಗುವುದಕ್ಕೆ ಪ್ರಾರಂಭ ಮಾಡಿದಳು ನಾನವಳ ಬಾಯಿ ಮುಚ್ಚಿ "ನಾಕು ನಿನ್ನ ನಗು. ಏನಾಯಿತು ಹೇಳೇ ?" ಎಂದು ಗದರಿಸಿದೆ ಅವಳನ್ನು ಕುರ್ಚಿಯ ಮೇಲೆ ಕುಳ್ಳಿರಿಸಿ ಪ್ರಿನ್ಸಿಪಾಲರು ಎದುರಿಗೆ ನಿಂತು ಸ್ವಲ್ಪ ಹೊತ್ತು ದುರುಗುಟ್ಟುತ್ತಾ ನೋಡಿ "ನಿನಗೆ ಮನೆಯಲ್ಲಿ ಬೇರೆ ಸೀರೆಗಳಿಲ್ಲವೇ ? ಪೆಟಿಕೋಟಿಲ್ಲವೇ ? ಈ ವೇಷ ದಲ್ಲಿ ಏಕೆ ಬಂದೆ ?" ಎಂದು ಕೇಳಿದರಂತೆ ಅವಳು ಉತ್ತರಕೊಡದೆ ತಲೆ ತಗ್ಗಿಸಿಕೊಂಡು ಸುಮ್ಮನ ಕುಳಿತ್ತಿದ್ದಳಂತೆ

ಆಗ ಪ್ರಿನ್ಸಿಪಾಲರು ಹೇಳಿದರಂತೆ "ನಿನ್ನ ವಿಚಾರವಾಗಿ ನನಗೆ ಬಹಳ ಕೆಟ್ಟ ವರದಿಗಳು ಬರುತ್ತಿದೆ ಇದುವರಗೆ ನಾನು ಅವುಗಳನ್ನು ನಂಬಿರಲಿಲ್ಲ ಈಗ ನಿನ್ನ ನೋಡಿದರ ನಂಬಬೇಕು ಎನಿಸುತ್ತದೆ ನಿನ್ನನ್ನು ಕಾಲೇಜಿಂದ ಏಕೆ ವಜಾ ಮಾಡಬಾರದು ?"

ಅದಕ್ಕೆ ನನ್ನ ಗೆಳತಿ "ವಜಾ ಮಾಡುವ ಅಗತ್ಯವಿಲ್ಲ ನಿಮಗೆ ಬೇಡವಾದರ ನಾನೇ ಕಾಲೇಜು ಬಿಡುತ್ತೇನೆ" ಎಂದಳಂತೆ

ಆಗ ಪ್ರಿನ್ಸಿಪಾಲರು ಸ್ವಲ್ಪ ಹೊತ್ತು ಯೋಚಿಸಿ "ನಿಮ್ಮ ತಂದೆಯ ಮುಖ ನೋಡಿ ಈ ನಾರಿ ಕ್ಷಮಿಸಿದ್ದೇನೆ ಪುನಃ ಈ ವೇಷದಲ್ಲಿ ಕಾಲೇಜಿಗೆ ಬರಬೇಡ ಹೆಂಗಸರು ಬಟ್ಟೆ ಉಡುವುದು ಮೈ ಮುಚ್ಚುವುದಕ್ಕ ಎಂಬುದನ್ನು ತಿಳಿದುಕೋ ಈ ದಿನ ನೀನು ಪುನಃ ಕ್ಲಾಸಿಗೆ ಹೋಗುವುದು ಬೇಡ ಮನೆಗೆ ಹೋಗು" ಎಂದು ಹೇಳಿ ತಮ್ಮ ಕಾರಲ್ಲಿ ಕಳುಹಿಸಿಕೊಟ್ಟರಂತೆ

"ನನ್ನನ್ನು ನೋಡಿ ಮನುಷ್ಯ ತನ್ನ ಪ್ರಾಯದ ದಿನಗಳನ್ನು ನೆನಸಿ ಕೊಂಡಿರಬೇಕು– ಎಂದು ಗೆಳತಿ ಪುನಃ ನಕ್ಕಳು. ನಾವೂ ನಕ್ಕು ಜಮುವ ನ್ನೊಪ್ಪಿಕೊಂಡೆವು ಸುಲಭವಾಗಿ ಮುಹಾರಾಯಿತಿ ಮೂರು ಜಾರ್ಜೆಟ್ ಸೀರೆಗಿಟ್ಟಿಸಿದಳು" ಎಂದು ಪದ್ಮಾ ಮುಗಿಸಿದಳು

"ಈಗ ಆ ನಿನ್ನ ಗೆಳತಿಯರು ಎಲ್ಲಿದ್ದಾರ ?"

ಎಂದು ಜೋಷಿ ಕೇಳಿದ

"ಒಬ್ಬಳು ಕುಚ್‌ಬಿಹಾರ್ ಮಹಾರಾಣಿಯ ಸಕ್ರೆಟರಿಯಾಗಿದ್ದಾಳೆ ಇನ್ನೊಬ್ಬಳು ಮದುವೆಯಾಗಿ ಬೊಂಬಾಯಿಗೆ ಹೋದಳು ಮೂರನೆಯ ವಳು ಖಾಯಿಲೆಯಿಂದ ಸತ್ತಳು"

" ಏನು ಖಾಯಿಲೆ ?"

" ಖಾಯಿಲೆ ! ಅದೊಂದು ಕತೆ ನೀವು ಕೇಳಬೇಕಾದ್ದು ಅವಳು ಸತ್ತದ್ದು ಗರ್ಭಪಾತದಿಂದ ಎಂದು ಆಗ ಜನರಂದುಕೊಂಡರು ನಿಜವಾದ ಕಾರಣವೇ ಬೇರೆ ಅವಳ ಹೆಸರು ರಾಜೀವಿ ಬಾಯ್ ನಾವು ರೋಸ್ ಎಂತ ಕರೆಯುತ್ತಿದ್ದೆವು ಗುಲಾಬಿಯಂತೆ ಚಲುವೆಯಾದ ಹುಡುಗಿ. ನಾವು ಕೆಲವು ನಿಬಂಧನೆಗಳನ್ನು ಮಾಡಿಕೊಂಡಿದ್ದೆವು ಪುರುಷರಾರನ್ನೂ ಪ್ರೀತಿಸಬಾರದು ಪುರುಷರು ಸ್ತ್ರೀಯರನ್ನು ತಮ್ಮ ಇಚ್ಛಾಪೂರ್ತಿಗಾಗಿ ಉಪಯೋಗಿಸಿಕೊಳ್ಳುವಂತೆ ನಾವೂ ಪುರುಷರನ್ನು ಉಪಯೋಗಿಸಿಕೊಳ್ಳಬೇಕು. ಸಾಧ್ಯವಿದ್ದ ಮಟ್ಟಿಗೆ ಕಾಲೇಜ್ ಹೊರಗಿನಿಂದ Boy friends ನ ಆರಿಸಿಕೊಳ್ಳಬೇಕು, ಇತ್ಯಾದಿ ರೋಸ್ ಈ ಎಲ್ಲ ನಿಯಮಗಳನ್ನೂ ಒಂದೊಂದಾಗಿ ಉಲ್ಲಂಘಿಸಲು ಮೊದಲು ಮಾಡಿದಳು ಕಾಲೇಜಲ್ಲಿ ಸಂಗಡ ಓದುತ್ತಿದ್ದ ವಿದ್ಯಾರ್ಥಿಯೊಬ್ಬನೊಡನೆ ಸ್ನೇಹ ಬೆಳಸಿದಳು ಹುಚ್ಚು ಕೆಲವು ವಾರಗಳಲ್ಲಿ ಕಳೆಯುವುದು ಎಂದು ನಾವು ಸುಮ್ಮನಿದ್ದೆವು ಹೆಚ್ಚುತ್ತಾ ಹೋಯಿತು. ಇಷ್ಟ ಬಂದಾಗ ಪರಸ್ಪರ ಒಪ್ಪಿಗೆಯಿಂದ ಗೆಳೆಯರನ್ನು ಬದಲಾಯಿಸಿಕೊಳ್ಳುತ್ತಿದ್ದೆವು ಈ ವಾರ ನನ್ನ ಸ್ನೇಹಿತನಾಗಿದ್ದವನು ಮುಂದಿನ ವಾರ ನನ್ನ ಗೆಳತಿಯ ಪ್ರಿಯನಾಗುತ್ತಿದ್ದ ಪಂಚಪಾಂಡವರಂತೆ ನಾವೂ ದೇವರು ಕೊಟ್ಟದ್ದನ್ನು ಸಂಕೋಚವಿಲ್ಲದೆ ಸಮವಾಗಿ ಹಂಚಿಕೊಳ್ಳುತ್ತಿದ್ದೆವು ರೋಸ್ ಇದಕ್ಕೆ ಅಡಚಣೆ ತಂದಳು ತನ್ನ ಗೆಳೆಯ ನಮ್ಮ ಸಂಗಡ ಮಾತಾಡುವುದಕ್ಕೂ ಅಡ್ಡಿ ಬಂದಳು ಎರಡು ವರ್ಷದಿಂದ ನಡೆದು ಬಂದ ಸಂಪ್ರದಾಯ ಕಳಚಿ ಬೀಳುವಾಗ ನಾವು ಸುಮ್ಮನೆ ಕುಳಿತಿರುವುದೇ ? ಒಳ್ಳೆ ಮಾತಿಂದ ಹೇಳಿದೆವು ಬೆದರಿಸಿದೆವು ಜಗಳವಾಡಿದೆವು ಈ ಉಪಾಯಗಳೊಂದೂ ಪ್ರಯೋಜನವಾಗದೆ ಹೋದಾಗ ಬೇರೆ ಮಾರ್ಗಗಳನ್ನು ಹಿಡಿಯುವುದು ಅವಶ್ಯಕವಾಯಿತು. ಆ ಗೆಳೆಯನನ್ನು ಒಲಿಸಿಕೊಳ್ಳಲು ಏಕಕಾಲದಲ್ಲಿ ಮೂವರೂ ಪ್ರಯತ್ನಿಸಿದೆವು ಕೊನೆಗೆ ನನ್ನ ಮತ್ತೊಬ್ಬ ಗೆಳತಿ ವಿಜಯ ಗಳಿಸಿದಳು ಆ ವಿಚಾರ ರೋಸಳಿಗೆ ತಿಳಿದಾಗ ದೊಡ್ಡ ರಾದ್ಧಾಂತವಾಯಿತು. ನಮ್ಮ ಸ್ನೇಹ ಬಿಟ್ಟಳು ಕಾಲೇಜ್ ಬಿಟ್ಟಳು ಕೊನೆಗೆ ವಿಷ ಕುಡಿದು ಪ್ರಾಣವನ್ನೂ ಬಿಟ್ಟಳು. ಆಸ್ಪತ್ರೆಗೆ ಸಾಗಿಸಿದಾಗ ಕಾಲ ಮೀರಿಹೋಗಿತ್ತು.

ನಾವು ಬಹಳ ದುಃಖಿಸಿದೆವು ರೋಸಳ ಮರಣಕ್ಕೆ ಕಾರಣವಾದದ್ದು ಪ್ರೇಮ. ನಮ್ಮ ಶಬ್ದಕೋಶದಿಂದ ಆ ಮಾತನ್ನೇ ತೆಗೆದುಹಾಕಲು ನಿರ್ಧರಿಸಿಕೊಂಡೆವು "

"ಆಮೇಲೋ ನೀನು ಕಾಲೇಜ್ ಬಿಟ್ಟದ್ದು ?"

"ರೋಜಳ ಆತ್ಮಹತ್ಯೆ ಕಾಲೇಜಲ್ಲಿ ರಗಳೆಗಿಟ್ಟುಕೊಂಡಿತು ಅವರ ತಂದೆ ಪ್ರಿನ್ಸಿಪಾಲರಿಗೆ ದೊಡ್ಡ ಕಾಗದ ಬರೆದು ಕಾಲೇಜ್ ಆಡಳಿತದ ಶಿಥಿಲತೆಯೇ ಈ ದುರಂತದ ಕಾರಣವೆಂದು ಖಂಡಿಸಿದ ಕೊನೆಗೆ ಸೆನೆಟ್ ಸಭೆಯಲ್ಲಿಯೂ ಈ ವಿಚಾರ ಬಂತು. ಪ್ರಿನ್ಸಿಪಾಲರು ನಮ್ಮನ್ನು ಕರೆಸಿ ನಾವಾಗಿ ಕಾಲೇಜ್ ಬಿಡದೆ ಹೋದರೆ "ಬರ್‌ತರ್ಫ್" ಮಾಡುವುದಾಗಿ ಹೇಳಿದರು ಯತ್ನವಿಲ್ಲದೆ ಒಪ್ಪಿಕೊಂಡೆವು ನಮ್ಮಲ್ಲೊಬ್ಬಳು ಪ್ರೈವೇಟಲ್ಲಿ ಓದಿ ಬಿ ಎ ಪಾಸ್ ಮಾಡಿದಳು ಇನ್ನೊಬ್ಬಳು ಹಿಂದಿನ ಗೆಳೆಯನೊಬ್ಬ ನನ್ನು ಮದುವೆಯಾದಳು ತಂದೆಯ ದೇಹಾಂತವಾದ್ದರಿಂದ ನಾನು ಬೆಂಗಳೂರಿಗೆ ಹಿಂದಿರುಗಿದೆ ನಾಲ್ಕು ವರ್ಷ ಮನೆಯಲ್ಲಿದ್ದು ತಾಯಿಯ ಒತ್ತಾಯದಿಂದ ಪರಿಮಳ ಸೋಪ್ ಫ್ಯಾಕ್ಟರಿಗೆ ಟೈಪಿಸ್ಟ್ ಸೆಕ್ರೆಟರಿಯಾಗಿ ಸೇರಿದೆ."

ಪದ್ಮಳ ಕಾಲೇಜ್ ಜೀವನ ಕೇಳಿ ಜೋಷಿಗೆ ನಿಜವಾಗಿ ದುಃಖ ವಾಯಿತು. ಪಾಶ್ಚಾತ್ಯದೇಶಗಳಲ್ಲಿ ವಿದ್ಯಾವತಿಯರಾದ ಮನೆತನದ ಹೆಣ್ಣು ಮಕ್ಕಳು ಈ ರೀತಿ ಉಚ್ಛೃಂಖಲತೆಯಿಂದ ವರ್ತಿಸುವರೆಂಬುದನ್ನು ಅವನು ಪುಸ್ತಕಗಳಲ್ಲಿ ಓದಿದ್ದ ಸ್ವಭಾವತಃ ಲಜ್ಜಾವತಿಯರಾದ ಭಾರತದ ಹೆಣ್ಣು ಮಕ್ಕಳು ಎಂತಹ ಸನ್ನಿವೇಶದಲ್ಲಿಯೂ ಹಾಗಾಗುವ ಸಂಭವವಿಲ್ಲವೆಂದು ಅವನ ಭಾವನೆ. ಆ ವಿಶ್ವಾಸ ಬಯಲಾದದ್ದು ಅವನ ಮನಸ್ಸಿಗೆ ಹೆಚ್ಚು ನೋವನ್ನುಂಟುಮಾಡಿತು. ಪದ್ಮಾ ಮತ್ತು ಅವಳ ಗೆಳತಿಯರಂಥವರು ಎಲ್ಲೋ ಕೆಲವರೆಂದೂ, ಮಹಿಳಾ ವಿದ್ಯಾಭ್ಯಾಸದ ಯುಕ್ತಾಯುಕ್ತತೆಗಳನ್ನು ಅಂತಹವರ ನಿದರ್ಶನದಿಂದ ನಿರ್ಧರಿಸುವುದು ಅಯುಕ್ತವೆಂದೂ ಸಮಾಧಾನ ಮಾಡಿಕೊಂಡು,

"ನೀನು ಎಂತಹವಳಾದರೂ ಆಗಿರು. ನಿನ್ನ ಹಿಂದಿನ ಜೀವನದಲ್ಲಿ ನನಗೆ ಆಸಕ್ತಿಯಿಲ್ಲ ಕಳೆದುದನ್ನು ಮರೆತು ವರ್ತಮಾನದಲ್ಲಿ ಜೀವಿಸೋಣ" ಎಂದು ಅನುನಯದಿಂದ ಹೇಳಿದ.

ಆದರೆ ಪದ್ಮಾ ಸುಮ್ಮನಾಗಲಿಲ್ಲ ಅವಕಾಶ ಸಿಕ್ಕಾಗಲೆಲ್ಲ ತನ್ನ ಪ್ರಣಯ ಜೀವನದ ಹಿಂದಿನ ಘಟನೆಗಳನ್ನು ಉಲ್ಲೇಖಿಸುವಳು. ಒಂದು ದಿನ ಪ್ರಾಸಂಗಿಕವಾಗಿ ಕಾರ್ಖಾನೆಯ ಮಾಲಿಕ ಪದ್ಮನಾಭಯ್ಯ ಮತ್ತು ಮಂಗೇಶರಾಯನ ವಿಷಯ ಬಂದಿತು.

" ಪದ್ಮನಾಭಯ್ಯನವರು ನನ್ನನ್ನು ಕೆಲಸಕ್ಕೆ ಸೇರಿಸಿಕೊಂಡಾಗಲೇ ತಿಳಿದುಕೊಂಡೆ. ಅವರ ಉದ್ದೇಶ ಬೇರೆಯೆಂದು. ಕುರಿ ಬಲಿತಷ್ಟೂ ಕುರುಬನಿಗೆ ಲಾಭ ಎಂದುಕೊಂಡು ನಾನೂ ಸುಮ್ಮನಿದ್ದೆ. ಆರು ತಿಂಗಳು ಕಳೆದು ಸೀರೆ ಕುಪ್ಪುಸ ಬಹುಮಾನಗಳಿಗಾಗಿ ಸಾವಿರ ರೂಪಾಯಿ ಕರ್ಚಾದ ಮೇಲೆ ಅಯ್ಯನಿಗೆ ಅರಿವಾಯಿತು, ಈ ಚದುರೆ ತನಗೆ ಸಿಕ್ಕುವುದಿಲ್ಲವೆಂದು, ಸಿಕ್ಕರೂ ದಕ್ಕಿಸಿಕೊಳ್ಳುವ ಚೈತನ್ಯ ತನಗಿಲ್ಲವೆಂದು. ಈಗ ಕಛೇರಿಯಲ್ಲಿ ನನ್ನ ಗಾಳಿ ಬೀಸುತ್ತಿದ್ದರೇ ಆತನಿಗೆ ತೃಪ್ತಿ. ಕಾರ್ಖಾನೆಗೆ ನಾನು ಅಲಂಕಾರ ಪ್ರಾಯಳೆಂದು ಭಾವಿಸಿ ಕೆಲಸದಲ್ಲಿಟ್ಟುಕೊಂಡಿದ್ದಾನೆ

" ಮಂಗೇಶನೊಬ್ಬ ಫೂಲ್. ಹಣಕ್ಕಾಗಿ ಏನು ಮಾಡಲೂ ಸಿದ್ಧ. ಜಿಗಣೆಯಂತೆ ಹಣ ಹೀರುವುದು ಅವನ ಕೆಲಸ. ಷರೀಫ್ ಸಿಕ್ಕುವ ಮೊದಲು ಸಿನಿಮಾ ಹಾಡಿಗೆ ಸರಿಯಾಗಿ,

" ಆಜ್‌ಕಲ್ಕೆ ಜಂಟಲ್ ಮೆನ್ ಖಾಲಿ ಜೇಬಮೆ ರಹತೇ ಹೈ " ಎಂಬಂತಿದ್ದ ಮದುವೆಯಾದ ಮೇಲೆ ಹೆಂಡತೀನ ತೋರಿಸಿ ದುಡ್ಡು ಮಾಡಲು ಹೊರಟಿದ್ದಾನೆ ಆ ಹುಳುವಿಗೇನಾದರೂ ಜೀವವಿದೆಯೇ ಎಂದು ನೋಡಲು ಒಂದು ದಿನ ಕಾಲಲ್ಲಿ ಮಾತಾಡಿಸಿದೆ. ಮೇಲೆ ಬೀಳಲು ಬಂದಾಗ ಪುನಃ ತಿಪ್ಪೆಗೆ ತಳ್ಳಿದೆ. ತನ್ನ ಪ್ಯಾಂಟ್, ಹ್ಯಾಟ್, ಬೂಟುಗಳಿಗೆ ಹೆಂಗಸು ಒಲಿಯುವುದಾಗಿ ಅವನು ತಿಳಿದಂತಿದೆ "

" ಹಾಗಾದರೆ ಹೆಂಗಸರು ಒಲಿಯುವುದು ಯಾವುದಕ್ಕೆ ?"

" ಹೆತ್ತವರಿಗೆ ಹೆಗ್ಗಣ ಮುದ್ದು ಎಂಬ ಗಾಥೆ ನೀವು ಕೇಳಿಲ್ಲವೇ ? ಹೆಂಗಸರ ವಿಚಾರವೆಲ್ಲ ಹಾಗೆ. ತಾವು ಅಪೇಕ್ಷಿಸಿದ ವಸ್ತುವಿನಲ್ಲಿರಬಹುದಾದ ಲೋಪ ದೋಷಗಳನ್ನು ಅವರು ಗಮನಿಸುವುದಿಲ್ಲ. ಅದನ್ನು ತಮ್ಮದಾಗಿ ಮಾಡಿಕೊಳ್ಳುವುದೊಂದೇ ಅವರ ಉದ್ದೇಶ. ನಾನು ಕಾಲೇಜಲ್ಲಿದ್ದಾಗ ಖಾದಿಯೆಂದರೆ ದೂರ ಹೋಗುತ್ತಿದ್ದೆ. ನಿಮ್ಮ ಪರಿಚಯವಾದ ಮೇಲೆ

ನಿಮ್ಮಂತೆ ನಾನೂ ಖಾದಿ ಉಡಲೇ ಎನ್ನಿಸುತ್ತದೆ"

"ಹಾಗಾದರೆ ನಾಳೆಯೇ ನಿನನಗೆರಡು ಖಾದಿ ಸೀರೆ ತಂದು ಕೊಡುತ್ತೇನೆ."

ಮಾತು ತಿರುಗಿಸುವ ಉದ್ದೇಶದಿಂದ ಜೋಷಿ ಹೇಳಿದ

"ಲತಾಂಗಿಗೆ ತಂದುಕೊಡಿ ನನಗಿಂತ ಅವಳಿಗೆ ಖಾದಿ ಹೆಚ್ಚು ಒಪ್ಪುತ್ತದೆ"

"ಲತಾಂಗಿ ನಾಳೆ ಬರುವಳಲ್ಲವೇ ? ಯಾರನ್ನಾದರೂ ಸ್ಟೇಷನ್ನಿಗೆ ಕಳುಹಿಸಲು ಮರೆಯಬೇಡ ಪದ್ಮಾ"

"ತಾಯಿ ಬರುತ್ತಾಳೆ ಮಂಗೇಶ ಸಂಗಡಿದ್ದಾನೆ ಮೈಸೂರು ರೈಲು ಬರುವುದು ಪ್ರಾತಃಕಾಲ ೫ ಗಂಟೆಗೆ ಸ್ಟೇಷನ್ನಿಗೆ ಹೋಗುವುದು ನನ್ನಿಂದ ಸಾಧ್ಯವಿಲ್ಲ ಬೆಳಿಗ್ಗೆ ಮನೆಗೆ ಹೋಗಿ ನೋಡಿಕೊಂಡು ನಿಮಗೆ ಫೋನ್ ಮಾಡುತ್ತೇನೆ"

ಪದ್ಮ ಸಹಜವಾಗಿ ಇದನ್ನು ಹೇಳಿದಳು ಅವಳ ಪ್ರಕೃತಿಯನ್ನು ಅರಿತಿದ್ದ ಜೋಷಿ ಅದರಲ್ಲಿ ವ್ಯಂಗ್ಯ ಅಥವಾ ಅಸೂಯೆಯ ಸೂಚನೆಯಿಲ್ಲ ವೆಂಬುದನ್ನು ತಿಳಿದ ಪದ್ಮಳ ಪ್ರಣಯ ಕತೆಗಳನ್ನು ಕೇಳಿ ಅವನಿಗೆ ಭರವಸೆ ಮೂಡಿತ್ತು, ಒಂದು ವೇಳೆ ತಾನು ಲತಾಂಗಿಯನ್ನು ಅಪೇಕ್ಷಿಸಿದರೂ ಪದ್ಮ ಅಡ್ಡಿ ಬರುವುದಿಲ್ಲವೆಂದು ಲತಾಂಗಿಯ ವಿಚಾರದಲ್ಲಿ ಪದ್ಮಾ ಮೊದಲ ದಿನ ಹೇಳಿದ ಮಾತುಗಳ ಉದ್ದೇಶ ತನ್ನ ಅಭೀಷ್ಟ ಸಾಧನೆಗಾಗಿ ಹೂಡಿದ ತಂತ್ರವೋ ಅಥವಾ ಗೆಳತಿಯ ಮೇಲಿನ ನಿಜವಾದ ಸ್ನೇಹವೋ ಆಗಿರಬೇಕೆಂದು ಅವನು ಭಾವಿಸಿದ.

ಆದರೂ ಲತಾಂಗಿಯ ಮೇಲಿನ ಕಾಮನೆಯನ್ನು ಸದ್ಯದಲ್ಲಿ ಮನಸ್ಸಿನಿಂದ ದೂರ ಮಾಡುವುದು ಉತ್ತಮವೆಂದು ಅವನಿಗೆ ತೋರಿತು. "ಲತಾಂಗಿ ಯಾವಾಗಲೂ ನಿನ್ನ ಕೈಲಿರುವವಳು. ಪದ್ಮಾ ಹಾರುವ ಹಕ್ಕಿ ಇಂದು ನಿನ್ನವಳು. ನಾಳೆ ಯಾರವಳೋ?" ಎಂದು ಮನಸ್ಸಿನ ಸಂಶಯ ಪಿಸುಗುಟ್ಟು ತ್ತಿತ್ತು. ಈ ದ್ವಂದ್ವದ ತುಯ್ದಾಟದಲ್ಲಿ ಅವನು ಪದ್ಮಳ ಪ್ರೌಢಾಲಿಂಗನ ದಿಂದ ಲತಾಂಗಿಯನ್ನು ಮರೆಯಲು ನಿರ್ಧರಿಸಿದ.

## ಎಂಟನೆಯ ತರಂಗ

— ೧ —

ನಗದು ಮೂರು ಸಹಸ್ರ ರೂಪಾಯಿಗಳು, ಸುಮಾರು ಅಷ್ಟೇ ಬೆಲೆಯ ಆಭರಣಗಳು ದೊರಕಿದಾಗ ರತ್ನಮ್ಮನ ಮನಸ್ಸಿನಿಂದ ವಿಠಲರಾಯರು ಮರೆಯಾದರು ಗೊತ್ತಾದ ದಿನ ಬಸ್ ಹತ್ತಿ ಮೈಸೂರು ತಲಪುತ್ತಲೆ ಅವಳು ದಾಸಪ್ರಕಾಶ್ ಹೋಟಲಲ್ಲಿ ಒಂದು ದೊಡ್ಡ ರೂಂ ಬಾಡಿಗೆಗೆ ತೆಗೆದುಕೊಂಡು "ಎರಡು ದಿನವಿದ್ದು ಹೋಗೋಣ" ಎಂದು ಮಗಳಿಗೆ ಹೇಳಿದಳು. ಇಷ್ಟವಿಲ್ಲದಿದ್ದರೂ ಲತಾಂಗಿ ಒಪ್ಪಿದಳು ಬೃಂದಾವನ, ಜೂ, ಅರಮನೆ, ಚಾಮುಂಡಿ ಬೆಟ್ಟ ಮುಂತಾದ ಪ್ರೇಕ್ಷಣೀಯ ಸ್ಥಳಗಳನ್ನು ನೋಡಿಕೊಂಡು ಅವರು ನಾಲ್ಕನೆಯ ದಿನ ಸಂಜೆ ಗಾಡಿಗೆ ಬೆಂಗಳೂರು ತಲಪಿದರು

ರೈಲ್ವೆ ನಿಲ್ದಾಣದಲ್ಲಿ ಪದ್ಮಾ ತನಗಾಗಿ ಕಾದಿರುವುದನ್ನು ಕಂಡು ಲತಾಂಗಿಯ ಎದೆ ಹಾರಿತು. ಓಡಿ ಬಂದು ಗೆಳತಿಯನ್ನು ಅಪ್ಪಿಕೊಂಡು "ಜೋಷಿಯನ್ನು ನೋಡಿದ್ದೆಯಾ? ನನ್ನ ಕಾಗದಗಳನ್ನು ಅವರಿಗೆ ತೋರಿಸಿದೆಯಾ? ಅವರೇನೆಂದರು?" ಎಂದು ಕೇಳಿದಳು.

"ಒಂದೇ ಉಸಿರಲ್ಲಿ ಎಷ್ಟೊಂದು ಪ್ರಶ್ನೆ, ಲತಾ?"

—ಪದ್ಮಾ ನಗುತ್ತ ಉತ್ತರ ಕೊಟ್ಟಳು.

ರತ್ನಮ್ಮ ದೂರದಲ್ಲಿ ನಿಂತು ಈ ದೃಶ್ಯವನ್ನು ಎವೆಯಿಕ್ಕದೆ ನೋಡುತ್ತಿದ್ದಳು ಪದ್ಮಳ ಕುಂಕುಮವಿಲ್ಲದ ಹಣೆ, ಕುಂಡಲಾಕಾರವಾಗಿ ಕೊರಳ ಮೇಲೆ ಬೀಳುವಂತೆ ಬಲೆಯಿಂದ ಕಟ್ಟಿದ್ದ ಹೆರಳು, ಹಿಡಿದಿದ್ದ ಪ್ಲಾಸ್ಟಿಕ್ ಕೈ ಚೀಲ ಇವುಗಳನ್ನು ರತ್ನಮ್ಮ ದೂರದಿಂದಲೆ ನೋಡಿ ಯೋಚಿಸತೊಡಗಿದಳು. ಮೂಗಳೂರು ಬಿಟ್ಟಾಗಿನಿಂದ ಅವಳಿಗೆ ಒಂದೇ ಚಿಂತೆ, ಮಗಳನ್ನೂ

ಅಳಿಯನನ್ನೂ ಕೈಯಲ್ಲಿಟ್ಟುಕೊಂಡು ಸಂಸಾರ ನಡೆಸುವುದು ಹೇಗೆಂದು. ಮೈಸೂರಲ್ಲಿದ್ದ ಎರಡು ದಿನಗಳಲ್ಲಿ ಅವಳು ತಿಳಿದುಕೊಂಡಳು, ಅಳಿಯನನ್ನು ಕಿರು ಬೆರಳಲ್ಲಿ ಕುಣಿಸಬಲ್ಲೆನೆಂದು

ಆದರೆ ಲತಾಂಗಿ! ಮದುವೆಯಾದ ಮೇಲೆ ಮಗಳ ರೀತಿಯಲ್ಲಿ ಬಹುಮಟ್ಟಿಗೆ ಬದಲಾವಣೆಯಾಗಿದೆಯೆಂದು ರತ್ನಮ್ಮನಿಗೆ ತೋರಿತು. ಒಂದು ತಿಂಗಳು ಮಂಗಳೂರಲ್ಲಿ ತಾಯಿ ಮಗಳು ಒಂದೇ ಮನೆಯಲ್ಲಿದ್ದರೂ ಒಬ್ಬರೊಡನೊಬ್ಬರು ಮನಸ್ಸು ಬಿಚ್ಚಿ ಮಾತಾಡಿರಲಿಲ್ಲ ಸ್ವಂತ ಸಮಸ್ಯೆಗಳಲ್ಲಿ ಮುಳುಗಿರುತ್ತಿದ್ದ ರತ್ನಮ್ಮ ಮಗಳನ್ನು ಮರೆತಿದ್ದಳು. ತನ್ನ ತೊಡಕುಗಳನ್ನು ತಾನಾಗಿ ತಾಯಿಗೆ ಹೇಳಿಕೊಳ್ಳುವ ಸಹನೆ ಲತಾಂಗಿಗಿರಲಿಲ್ಲ. ಮಗಳ ಈ ಸ್ವಾಭಿಮಾನ ಮತ್ತು ರಹಸ್ಯ ಮನೋಭಾವನೆಯ ಕಾರಣ ವೇನು? ಕೆಲಸಕ್ಕೆ ಸೇರಿದ್ದೇ? ಅಥವ ಇತರರ ಪ್ರಭಾವವೋ? ಪದ್ಮಳನ್ನು ಕಂಡು ತನ್ನ ಪ್ರಶ್ನೆಗಳಿಗೆ ಉತ್ತರ ದೊರಕಿತೆಂದು ರತ್ನಮ್ಮ ತಿಳಿದಳು

"ಕಾರು ತಂದಿದ್ದೇನೆ ಅದರಲ್ಲಿಯೇ ಮನೆಗೆ ಹೋಗೋಣ" ಎಂದು ಪದ್ಮಾ ಪಿಸು ಮಾತಿನಲ್ಲಿ ರಹಸ್ಯವಾಗಿ ಹೇಳಿದಳು.—"ಜೋಷಿ ಬರುವೆನೆಂದರು. ನಾನೇ ಬೇಡವೆಂದೆ ರಾತ್ರಿ ಎಂಟು ಗಂಟೆಗೆ ನಮ್ಮ ಮನೆಗೆ ಬರುತ್ತಾರೆ ಅಲ್ಲಿ ನೋಡ ಬಹುದು."

"ಬೇಡ. ನಾಳೆ ಕಛೇರಿಯಲ್ಲಿ ನೋಡುತ್ತೇನೆ."

ಎಂದು ಲತಾ ಉತ್ತರ ಕೊಟ್ಟಳು ಅಷ್ಟು ಹೊತ್ತಿಗೆ ರತ್ನಮ್ಮ ಅಲ್ಲಿಗೆ ಬಂದಳು. ಪದ್ಮಳಿಗೆ ತಾಯಿಯ ಪರಿಚಯ ಮಾಡಿಸಿ ಲತಾಂಗಿ ಹೇಳಿದಳು. "ಇವರು ನನ್ನ ಗೆಳತಿ, ಪದ್ಮಾ ಎಂದು. ಒಂದು ಸಂದರ್ಭದಲ್ಲಿ ನನಗೆ ಬಹಳ ಉಪಕಾರ ಮಾಡಿದ್ದಾರೆ."

ರತ್ನಮ್ಮ ಇಷ್ಟವಿಲ್ಲದಿದ್ದರೂ ಮುಗುಳು ನಗೆಯಿಂದ ನಾಲ್ಕು ಮಾತಾಡಿದಳು. ಮಂಗೇಶ ಕೂಲಿಯವರನ್ನು ಗೊತ್ತುಮಾಡಿ ಸಾಮಾನು ಸರಂಜಾಮುಗಳನ್ನು ತೆಗೆಸಿಕೊಂಡು ಹೋಗಿ ಕಾರಲ್ಲಿ ಹಾಕಿದ. ಅನಂತರ ಎಲ್ಲರೂ ಕಾರಲ್ಲಿ ಕುಳಿತು ಮನೆಗೆ ಹೊರಟರು

ಮನೆ ನೋಡಿ ರತ್ನಮ್ಮನಿಗೆ ಸಂತೋಷವಾಯಿತು. ಅಳಿಯನ ಬುದ್ಧಿವಂತಿಕೆಯನ್ನು ಮೆಚ್ಚಿಕೊಂಡಳು. ಮನೆ ದೊರಕಿದ್ದು ಪದ್ಮಳ

ಮುಖಾಂತರವಾಗಿಯೇ ಎಂದು ಮಂಗೇಶ ಹೇಳಿದಾಗ "ಯಾರಪ್ಪಾ, ಈ ಪದ್ಮಾ? ಎಲ್ಲೆಲ್ಲೂ ಅವಳೇ ಆಗಿದ್ದಾಳ" ಎಂದಳು

ಮಂಗೇಶ ಕಾರ್ಖಾನೆಯಲ್ಲಿ ಅವಳು ಕೆಲಸಮಾಡುವ ವಿಚಾರ ತಿಳಿಸಿದ.

"ಲತಾಗೆ ಪತ್ರಿಕಾ ಕಛೇರಿಗೆ ಸೇರುವ ಹುಚ್ಚು ಹಿಡಿಸಿದವಳೂ ಇವಳೇ ಎಂತ ಕಾಣುತ್ತದೆ"—ರತ್ನಮ್ಮ ನುಡಿದಳು

ಮಂಗೇಶ ಮಾತಾಡಲಿಲ್ಲ ಲತಾಂಗಿ ಕೇಳಿಯೂ ಕೇಳದವಳಂತೆ ಸುಮ್ಮನಿದ್ದಳು ಮನೆ ಸೇರಿದ ಪ್ರತಿ ಕ್ಷಣದಲ್ಲಿ ತಾಯಿಯ ಸಂಗಡ ಜಗಳ ಹೊಡುವುದು ಅವಳಿಗೆ ಸರಿಯಾಗಿ ಕಾಣಲಿಲ್ಲ ಮನಸ್ಸಿನಲ್ಲಿ ಭಾವಿಸಿಕೊಂಡಳು, ತಾಯಿ ಬಂದದ್ದರಿಂದ ತನ್ನ ತೊಡಕುಗಳು ಪರಿಹಾರವಾರವಾಗುವ ಪ್ರತಿಯಾಗಿ ಹೆಚ್ಚಬಹುದೆಂದು ಪದ್ಮಳ ಮನೆಗೆ ಹೋಗಿ ಸ್ವಲ್ಪ ಹೊತ್ತು ಮಾತಾಡುತ್ತಿದ್ದು ಹಿಂದಿರುಗಲೇ ಎಂದು ಯೋಚಿಸಿ ಅದರಿಂದ ತಾಯಿಯ ಕೋಪ ಹೆಚ್ಚುವುದೆಂದು ತಿಳಿದು ಸುಮ್ಮನಾದಳು.

—೨—

"ನೀವು ಇಲ್ಲದಿದ್ದದ್ದು ಕಛೇರಿ ಕತ್ತಲೆ ಕವಿದಂತಿದ್ದಿತು ಲತಾದೇವಿ."

ಎಂದು ಶ್ರೀನಾಥ ಮರುದಿನ ಲತಾಂಗಿಯನ್ನು ಸ್ವಾಗತಿಸಿದ.

ಲತಾ ಕುರ್ಜಿಯ ಮೇಲೆ ಕುಳಿತುಕೊಂಡು ಕಾಗದಗಳನ್ನು ಸರಿಪಡಿಸುತ್ತಾ "ಕಛೇರಿ ಹೇಗೆ ನಡೆಯುತ್ತಿದೆ? ಏನು ಸಮಾಚಾರ?" ಎಂದಳು.

"ಪತ್ರಿಕೆಯಲ್ಲಿ ಬರುವುದೇ ಸಮಾಚಾರ. ಅದನ್ನು ಬಿಟ್ಟರೆ ಪತ್ರಿಕೋದ್ಯಮಿಯ ಜೀವನದಲ್ಲಿ ಮತ್ತೇನು ಸ್ವಾರಸ್ಯ ನಡೆಯುತ್ತದೆ?"

"ಸಂಪಾದಕರೇನನ್ನುವರು?"

"ನಾಲ್ಕೈದು ವಾರಗಳಿಂದ ಮಹಿಳಾ ಮತ್ತು ಮಕ್ಕಳ ಪುಟ ಪ್ರಕಟವಾಗಲಿಲ್ಲವೆಂದು ಎಲ್ಲ ಕಡೆಯಿಂದಲೂ ಕಾಗದ ಬರುತ್ತಿದೆ ಅವುಗಳಿಗೆ ಉತ್ತರ ಕೊಡುವುದರಲ್ಲಿ ನ್ಯೂಸ್ ಎಡಿಟರ ತಾಪತ್ರಯ ಹೇಳಿತೀರದು."

ಶ್ರೀನಾಥ ಈ ಮಾತು ಹೇಳುತ್ತಿದ್ದಂತೆ ಅಚ್ಚುಕೂಟದಿಂದ ಆನಂದ

ರಾಯ ಹಿಂದಿರುಗಿ ಲತಾಂಗಿಯನ್ನು ನೋಡಿದ ಅವನ ಹುಬ್ಬುಗಳು ಕುಂಚಿತವಾದವು ಗಂಟಲು ಸರಿಪಡಿಸಿಕೊಂಡು " ನೀವು ಬಾರದೆ ಹೋಗಿದ್ದರೆ ಮುಂದಿನ ವಾರದಿಂದ ಮಕ್ಕಳ ಪುಟಕ್ಕೆ ಬೇರೆ ಏರ್ಪಾಟು ಮಾಡಬೇಕೆಂದು ಯೋಚಿಸುತ್ತಿದ್ದೆ " ಎಂದ

" ಅದಕ್ಕೆ ನಾಲ್ಕು ವಾರ ಯೋಚಿಸಬೇಕಾಗಿತ್ತೆ ಆನಂದರಾಯರೇ ? ನನ್ನ ರಜಾ ಕಾಗದ ತಲುಪುತ್ತಲೇ ತಾತ್ಕಾಲಿಕವಾಗಿ ಏನಾದರೂ ಏರ್ಪಾಡು ಮಾಡಬಹುದಾಗಿತ್ತಲ್ಲವೆ ?"

ಲತಾ ಬಿರುಸಾಗಿಯೇ ಉತ್ತರ ಕೊಟ್ಟಳು ಕಛೇರಿಗೆ ಬಂದ ಪ್ರತಿ ಕ್ಷಣದಲ್ಲಿ ಆನಂದರಾಯನ ಈ ಚುಚ್ಚು ಮಾತು ಅವಳನ್ನು ಕೆರಳಿಸಿತು ಸಭ್ಯ ವಿನಯಗಳಿಲ್ಲದ ಇಂತಹನರು ಪತ್ರಿಕಾ ಕಛೇರಿಗಳಲ್ಲಿ ಆಡಳಿತ ಸ್ಥಾನ ಗಳಲ್ಲಿರುವವರಿಗೆ ಮಹಿಳೆಯರು ಪತ್ರಿಕಾ ವೃತ್ತಿಗೆ ಬರುವುದು ಹೇಗೆ ಸಾಧ್ಯ ಎಂದು ಭಾವಿಸಿಕೊಂಡಳು

" ನಾನು ಸಂಪಾದಕರಿಗೆ ಅದನ್ನೇ ಹೇಳಿದೆ. ಅವರು ನನ್ನ ಮಾತೆಲ್ಲಿ ಕೇಳುತ್ತಾರೆ?"

ಎಂದು ಹೇಳಿ ಆನಂದರಾಯ ತನ್ನ ಸ್ಥಾನಕ್ಕೆ ಹೋಗಿ ಕುಳಿತುಕೊಂಡ.

ಲತಾಂಗಿ ಪತ್ರಿಕೆಯ ಸಂಪುಟಗಳನ್ನು ತೆಗೆದುಕೊಂಡು ತಾನು ಮಂಗಳೂರಿಗೆ ಹೋದ ಮೇಲೆ ಪ್ರಕಟವಾದ ಸಂಚಿಕೆಗಳನ್ನು ಓದುತ್ತ ಕುಳಿತು ಕೊಂಡಳು ಸ್ವಲ್ಪ ಹೊತ್ತಿನ ಮೇಲೆ ಜೋಷಿ ಕಛೇರಿಗೆ ಬಂದು ಲತಾ ಬಂದಿರುವ ವಿಚಾರ ತಿಳಿದು ಹೇಳಿ ಕಳುಹಿಸಿದ

" ನಿನ್ನ ತಂದೆಯ ಮರಣ ವಾರ್ತೆ ಕೇಳಿ ನನಗೆ ಬಹಳ ದುಃಖ ವಾಯಿತು ಲತಾ. ನಾನೇ ಪತ್ರ ಬರೆಯೋಣವೆಂದಿದ್ದೆ. ಕೊನೆಗೆ ಪದ್ಮಳ ಮುಖಾಂತರ ಬರೆಸಿದೆ "

ಜೋಷಿಯ ಸಹಾನುಭೂತಿಯ ಮಾತು ಕೇಳಿ ಲತಾಂಗಿಯ ಕಣ್ಣುಗಳಲ್ಲಿ ಕಂಬನಿ ತುಂಬಿದವು. ಮಾತಾಡದೆ ಸ್ವಲ್ಪ ಹೊತ್ತು ಕುಳಿತು ಬಿಟ್ಟಳು. ಅನಂತರ ಸೆರಗಿಂದ ಕಣ್ಣೊರೆಸಿಕೊಂಡು ಹೇಳಿದಳು

" ನೀವು ಮತ್ತು ಪದ್ಮಾ ಇಲ್ಲದಿದ್ದರೆ ನಾನು ಪುನಃ ಬೆಂಗಳೂರಿಗೆ

ಹಿಂತಿರುಗುತ್ತಿರಲಿಲ್ಲ ನಿಮಗೆ ನನ್ನಿಂದ ಎಷ್ಟೊಂದು
" ತೊಂದರೆಯೇನು ಬಂತು !"

" ಮಹಿಳಾ ಮತ್ತು ಮಕ್ಕಳ ಪುಟಗಳ ಪ್ರಕಟನೆ ನಿಂತುಹೋದದ್ದು ತೊಂದರೆಯಲ್ಲವೇ ?"

" ಇಂತಹ ತೊಂದರೆಗಳು ಪತ್ರಿಕೆಗಳಿಗೆ ಯಾವಾಗಲೂ ಇರುತ್ತವೆ. ನಾವು ಪ್ರಾರಂಭಿಸಿದ ಆ ಹೊಸ ವಿಧಾನ ವಾಚಕರಿಗೆ ಹಿಡಿದಿದೆಯೋ ಎಂಬುದನ್ನು ತಿಳಿದುಕೊಳ್ಳಲು ಕಳೆದ ಕೆಲವು ವಾರಗಳು ನನಗೆ ಸಹಾಯಕ ವಾದವು ಎರಡು ವಾರಗಳು ಯಾರೂ ಆ ಲೋಪ ಗಮನಿಸಲಿಲ್ಲ ಅನಂತರ ಒಬ್ಬೊಬ್ಬರಾಗಿ ಬರೆಯಲು ಪ್ರಾರಂಭಿಸಿದರು, " ಏಕೆ ಪ್ರಕಟನೆ ನಿಲ್ಲಿಸಿದಿರಿ ?" ಎಂದು ಈ ವಾರ ಬರದವರಲ್ಲಿ ಕಲವು ಮಂದಿ ಮಹಿಳೆಯರೂ, ನಿವೃತ್ತ ಅಧಿಕಾರಿಗಳೂ, ಲೇಖಕರೂ ಇದ್ದಾರೆ ಮೂರನೆ ವಾರದಿಂದ ಭಾನುವಾರದ ಸಂಚಿಕೆಯ ಪ್ರಚಾರವೂ ಸ್ವಲ್ಪ ಕಡಿಮೆಯಾಯಿತು ಆ ಸಂದರ್ಭವನ್ನು ಉಪಯೋಗಿಸಿಕೊಂಡು ಒಂದು ಪ್ರಕಟನೆ ಕೊಟ್ಟೆ– " ಮಹಿಳಾ ಪುಟದ ಸಂಪಾದಿಕೆ ರಜಾದ ಮೇಲಿದ್ದಾರೆ ಇನ್ನೆರಡು ವಾರಗಳಲ್ಲಿ ಪುನಃ ಬರೆಯಲು ಪ್ರಾರಂಭ ಮಾಡುವರು ಅವರ ಸಂಪಾದಕತ್ವದಲ್ಲಿ ಮಹಿಳೆಯರು ಮತ್ತು ಮಕ್ಕಳಿಗಾಗಿಯೇ ' ಸಖೀ ' ಎಂಬ ಹೆಸರಿನ ಸಚಿತ್ರ ಮಾಸ ಪತ್ರಿಕೆ ಯೊಂದು ಶೀಘ್ರದಲ್ಲಿ ಪ್ರಕಟವಾಗುವುದು" ಎಂದು ಪ್ರಕಟನೆ ಹೊರಬಿದ್ದದ್ದೇ ತಡ ಏಜೆಂಟರು ಬರೆಯುತ್ತಿದ್ದಾರೆ ನಮಗೆ ತಮಗೆ ಎಂದು ಕೆಲವರು ಡಿಪಾಜಿಟ್‌ಗಳನ್ನೂ ಕಳುಹಿಸಿದ್ದಾರ ನೋಡಿದರೆ ಮೊದಲ ಸಂಚಿಕೆ ೫೦೦೦ ಸಾವಿರ ಮುದ್ರಿಸ ಬೇಕಾಗಬಹುದು "

ಜೋಷಿಯ ಉತ್ಸಾಹ ಸಾಂಕ್ರಾಮಿಕದಂತೆ ಲತಾಳಿಗೂ ಹರಡಿತು. " ಪ್ರಕಟನೆಯ ತಾರೀಖು ಗೊತ್ತಾಗಿದೆಯೋ?" ಎಂದು ಕೇಳಿದಳು.

" ಕನ್ನಡವೊಂದೇ ಆಗಿದ್ದರೆ ನಾನೇ ಗೊತ್ತುಮಾಡುತ್ತಿದ್ದೆ. ತಮಿಳು ತೆಲಗು ಅವತರಣಗಳನ್ನೂ ಏಕಕಾಲಕ್ಕೆ ಪ್ರಕಟಿಸುವ ಯೋಚನೆಯಿರುವು ದರಿಂದ ಸ್ವಲ್ಪ ತಡವಾಗಬಹುದು "

ಅಷ್ಟು ಹೊತ್ತಿಗೆ ಅಟೆಂಡರ್ ಪಕ್ಕದ ಕಾಫೀ ಬಾರಿಂದ ಎರಡು ಕಾಫೀ ತಂದು ಕೊಟ್ಟ. ಕುಡಿಯುತ್ತಾ ಲತಾ ಹೇಳಿದಳು, ' ತಂದೆಯನ್ನು ಕಳೆದು

ಕೊಂಡು ಕಛೇರಿಗೆ ಬಂದದ್ದೇ ಆನಂದರಾಯರ ಕಿರುಕುಳ ಪ್ರಾರಂಭ ವಾಯಿತು ಅನುಕಂಪದ ಎರಡು ಮಾತುಗಳನ್ನು ಮೊದಲು ಕೇಳಿದ್ದು ನಿಮ್ಮಿಂದಲೇ."

"ಏನು ಹೇಳಿದ ಅವನು ?"

"ಮುಂದಿನ ವಾರದಿಂದ ಮಹಿಳಾ ಪುಟಕ್ಕಾಗಿ ಬೇರೆ ಏರ್ಪಾಡು ಮಾಡಲು ಯೋಚಿಸಿದ್ದರಂತೆ"

"ಅವನ ತಲೆಕಾಯಿ ! ದಿನ ದಿನಕ್ಕೆ ಮಿತಿ ಮೀರುತ್ತಿದ್ದಾನೆ. ಆ ಮಾತು ಬಿಡು, ಲತಾ ಈ ಕಛೇರಿಯಲ್ಲಿ ಯಾವುದೊಂದನ್ನೂ ನಿರ್ಧರಿ ಸುವವನು ನಾನು ನೀನಿಲ್ಲದಿದ್ದದ್ದು ನನ್ನ ಅಗ್ರ ಲೇಖನಗಳೇ ಸರಿಯಾಗಿ ಬರುತ್ತಿಲ್ಲ ಪೆನ್ ತೆಗೆದುಕೋ ಡಿಕ್ಟೇಟ್ ಮಾಡುತ್ತೇನೆ"

ಎಂದು ಹೇಳಿ ಜೊಷಿ ಅಟೆಂಡರನ್ನು ಕರೆದು ಕೆಲವು ಕಾಗದಗಳನ್ನು ಕೊಟ್ಟು ಮ್ಯಾನೇಜರಿಗೆ ಕೊಡುವಂತೆ ಹೇಳಿ ಸಿಗರೆಟ್ ಹತ್ತಿಸಿ ಅಗ್ರ ಲೇಖನ ಏನು ಬರೆಯಬೇಕೆಂಬುದನ್ನು ಯೋಚಿಸ ತೊಡಗಿದ

ಜೋಷಿಯ ಸಿಗರೆಟ್ ಬ್ರಾಂಡ್ ಬದಲಾವಣೆಯಾಗಿದ್ದದ್ದನ್ನು ಲತಾ ಗಮನಿಸಿದಳು ಪದ್ಮಾ ಜೋಷಿ ಇಬ್ಬರ ಬ್ರಾಂಡ್ ಈಗ ಒಂದೇ ಆಗಿದ್ದಿತು ಈ ಪರಿವರ್ತನೆಯ ಅರ್ಥವೇನು ? ಸಂಜೆ ಎಂಟು ಗಂಟೆಗೆ ಜೋಷಿ ಮನೆಗೆ ಬರುವುದಾಗಿ ಪದ್ಮಾ ರೈಲ್ವೆ ನಿಲ್ದಾಣದಲ್ಲಿ ಹೇಳಿದ್ದು ನೆನಪಾಯಿತು.

"ಸಂಸ್ಥಾನದಲ್ಲಿ ಕಾಂಗ್ರೆಸ್ ಚಳುವಳಿ ಉಗ್ರ ರೂಪ ತಾಳುತ್ತಿದೆ. ಎಲ್ಲ ಕಡೆಗಳಿಂದ ದಸ್ತಗಿರಿಯ ಸುದ್ದಿಗಳು ಬರುತ್ತಿವೆ ಈ ದಿನ ಆ ವಿಚಾರ ವಾಗಿ ಅಗ್ರ ಲೇಖನ ಬರೆಯಲು ಯೋಚಿಸುತ್ತಿದ್ದೇನೆ."

—ಜೋಷಿ ಹೇಳಿದ.

"ಬೀದಿ ಮಾತಲ್ಲಿ ಆ ವಿಚಾರ ಆಗಲೆ ಒಂದೆರಡು ಸಾರಿ ಬರೆದಿದ್ದೀರಿ. ಅಗ್ರಲೇಖನ ಬರೆಯಲು ಇದು ಸುಸಮಯ"

"ನೀನು ಯಾವಾಗ ಓದಿದೆ ?"

"ಈ ದಿನ ಕಛೇರಿಗೆ ಬಂದ ಕೂಡಲೆ ಫೈಲುಗಳನ್ನು ನೋಡಿದೆ"

"ಅಭಿನಂದನೆಗಳು ಲತಾ. ನೀನು ನಿಜವಾಗಿ ಪತ್ರಿಕೋದ್ಯಮಿಯಾದೆ. ತಾನು ಕೆಲಸ ಮಾಡುವ ಪತ್ರಿಕೆಯಲ್ಲಿ ಏನು ಪ್ರಕಟವಾಗುತ್ತಿದೆಯೆಂಬುದನ್ನು

ತಿಳಿದುಕೊಳ್ಳುವುದು ಪತ್ರಿಕೋದ್ಯಮಿಯ ಪ್ರಥಮ ಕರ್ತವ್ಯ.''

'' ಮಂಗಳೂರಲ್ಲಿ ಪತ್ರಿಕೆಗಳನ್ನು ತರಿಸಿಕೊಂಡು ಓದುತ್ತಿದ್ದೆ. ಆದರೆ ಒಂದೊಂದು ದಿನ ಸಿಕ್ಕುತ್ತಿರಲಿಲ್ಲ ಬಂದ ಕೂಡಲೆ ಮಾರಾಟವಾಗಿ ಹೋಗುತಿತ್ತು."

'' ವಿಶ್ವಮಿತ್ರ '' ದ ಜನಪ್ರಿಯತೆಯ ಈ ನಿದರ್ಶನವನ್ನು ಕೇಳಿ ಜೋಷಿಗೆ ಸಂತೋಷವಾಯಿತು ಅವನು ಹೇಳಿದ

'' ಬೀದಿ ಮಾತಲ್ಲಿ ಬರೆಯುವುದು ಸುಲಭ ಆದರೆ ಅಗ್ರ ಲೇಖನ ಬರೆಯುವ ಮೊದಲು ಪತ್ರಿಕೆಯ ನೀತಿ ನಿರ್ಧಾರವಾಗಬೇಕು "

'' ಆ ವಿಷಯದಲ್ಲಿ ನಿಮಗಿನ್ನೂ ಸಂದೇಹವಿದೆಯೇ ?''

'' ವೈಯಕ್ತಿಕವಾಗಿ ಸಂದೇಹವೇನೂ ಇಲ್ಲ. ಕಾಂಗ್ರೆಸ್ ಚಳುವಳಿಯಲ್ಲಿ ನಾನು ಸ್ವತಃ ಭಾಗವಹಿಸದಿದ್ದರೂ ನನ್ನ ಒಲವು ಸಂಪೂರ್ಣವಾಗಿ ಆ ಕಡೆಗಿದೆ ಮಹಾತ್ಮಾ ಗಾಂಧಿಯವರು ೧೯೩೦ ರಲ್ಲಿ ದಂಡಿಯಾತ್ರೆ ಮಾಡಿದಾಗ ಅವರ ಬಿಡಾರದಲ್ಲಿದ್ದ ಭಾರತ ಪತ್ರಿಕೋದ್ಯಮಿಗಳಲ್ಲಿ ನಾನೂ ಒಬ್ಬನು ಮೈಸೂರಲ್ಲಿ ನಡೆಯುತ್ತಿರುವ ಕಾಂಗ್ರೆಸ್ ಚಳುವಳಿಗೆ 'ವಿಶ್ವಮಿತ್ರ' ಎಲ್ಲ ರೀತಿಯಿಂದ ಸಹಾಯ ಮಾಡಬೇಕೆಂಬುದು ನನ್ನ ಆಶೆ.''

'' ಹಾಗಾದರೆ ನೀವು ಬರೆಯಲು ಅಡಚಣೆಯೇನಿದೆ ?''

'' ಸಿಂಹರ ಅಭಿಪ್ರಾಯ ತಿಳಿದುಕೊಳ್ಳದೆ ನಾನು ಪತ್ರಿಕೆಯ ನೀತಿಯನ್ನು ನಿರ್ಧರಿಸುವಂತಿಲ್ಲ ಬೀದಿ ಮಾತಲ್ಲಿ ಬರೆಯುವುದು ನನ್ನ ಸ್ವಂತ ಅಭಿಪ್ರಾಯ ಅದಕ್ಕೆ ನಾನು ಸಂಪೂರ್ಣ ಹೊಣೆ ಆದರೆ ಪತ್ರಿಕೆಯ ರೀತಿನೀತಿಯನ್ನು ನಿರ್ಧರಿಸಿ ಅಗ್ರಲೇಖನ ಬರೆಯುವ ಮೊದಲು ಹಣ ಹಾಕಿ ಪತ್ರಿಕೆ ನಡೆಸುವವರ ಅಭಿಪ್ರಾಯ ತಿಳಿದು ಕೊಳ್ಳಬೇಕು "

" ಆ ವಿಚಾರ ನನಗೆ ತಿಳಿದಿರಲಿಲ್ಲ "

" ವೈಯಕ್ತಿಕ ಅಭಿಪ್ರಾಯಗಳೇನೇ ಇರಲಿ, ತಾವು ಕೆಲಸ ಮಾಡುವ ಪತ್ರಿಕೆಯ ರೀತಿನೀತಿಗಳಿಗೆ ಹೊಂದಿಕೊಳ್ಳುವುದು ಪತ್ರಿಕೋದ್ಯಮಿ ಕಲಿಯಬೇಕಾದ ಪಾಠ "

" ಪತ್ರಿಕೆಯರೀತಿ ನೀತಿಗಳು ನಮ್ಮ ವೈಯಕ್ತಿಕ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದರೆ ?"

" ವಿರೋಧ ಸಾಮಾನ್ಯವಾದುದಾದರೆ ಹೊಂದಿಕೊಂಡು ಕೆಲಸ ಮಾಡ ಬಹುದು ಹೊಂದಿಕೊಳ್ಳಲಾಗದಷ್ಟು ಉಗ್ರತರದ ವಿರೋಧವಾಗಿದ್ದರೆ ಕೆಲಸ ಬಿಡುವುದೊಂದೇ ಪತ್ರಿಕೋದ್ಯಮಿಗಿರುವ ಮಾರ್ಗ ಬೇರೆ ಕ್ಷೇತ್ರ ಗಳಲ್ಲಿ ಕೆಲಸಗಾರರಿಗಿರುವ ಅಭಿಪ್ರಾಯ ಸ್ವಾತಂತ್ರ್ಯ ಪತ್ರಿಕಾಕ್ಷೇತ್ರದಲ್ಲಿರು ವುದಿಲ್ಲ ಪತ್ರಿಕಾವೃತ್ತಿಗೆ ಹೆಚ್ಚು ಜನ ಬಾರದಿರಲು ಇದು ಮುಖ್ಯ ಕಾರಣ "

" ಕೊನೆಗೆ ನಿಮ್ಮ ನಿರ್ಧಾರವೇನು ? ಈ ದಿನ ಯಾವ ವಿಷಯದ ಮೇಲೆ ಬರೆಯುತ್ತೀರಿ ?"

ಜೋಷಿ ಮೇಜಿನ ಮೇಲಿದ್ದ ಕಾಗದಗಳನ್ನು ತಿರುವಿಹಾಕುತ್ತ " ಕಲ್ಕತ್ತಾದಲ್ಲಿ ಅಖಿಲ ಭಾರತ ಮಹಿಳಾ ಸಮ್ಮೇಳನದ ಅಧ್ಯಕ್ಷ ಭಾಷಣದ ಮುಂಗಡದ ಪ್ರತಿ ಈಗ ತಾನೆ ಬಂದಿದೆ ಅದರ ಮೇಲೇಕೆ ಬರಯುಬಾರದು ?

ಮಹಿಳಾಪುರುಷರೂ ಮತ್ತು ರಾಜಕೀಯವೂ "

ಎಂದು ಪ್ರಾರಂಭ ಮಾಡಿ ಅಗ್ರಲೇಖನ ಹೇಳಿ ಬರೆಯಿಸಿದ ಒಂದು ಗಂಟೆ ಕಾಲ ಡಿಕ್ಟೇಷನ್ ನಡೆಯಿತು ಕ್ಯಾಂಟೀನಿಂದ ಇಬ್ಬರೂ ಲಂಚ್ ತರಿಸಿಕೊಂಡು ತಿಂದರು

ಎರಡು ಗಂಟೆಗೆ ಲತಾ ಸಂಪಾದಕರ ಕಛೇರಿಯಿಂದ ಹೊರಗೆ ಬಂದಾಗ ಆನಂದರಾಯ ಗಂಭೀರವಾಗಿ ಕುಳಿತುಕೊಂಡು ಮೇಕಪ್ ಕೆಲಸಗಾರನಿಗೆ ಸೂಚನೆ ಕೊಡುತ್ತಿದ್ದ ಲತಾಂಗಿಯನ್ನು ಕಂಡು ಅವನಿಗೆ ಹೊಟ್ಟೆಯಲ್ಲಿ ಬೆಂಕಿ ಸುರಿದಂತಾಯಿತು ಪ್ರೂಫ್ ಕಾಗದಗಳನ್ನು ಕೆಲಸಗಾರನಿಗೆ ಕೊಟ್ಟು " ನಿನಗೆ ತೋರಿದಂತೆ ಮಾಡು ಹೋಗು " ಎಂದು ಹೇಳಿದ

— ೩ —

ಅಂದು ಲತಾ ಮನೆಗೆ ಬಂದಾಗ ಮಂಗೇಶ ರೂಮಲ್ಲಿ ಕುಳಿತಿದ್ದ ರತ್ನಮ್ಮ ಬಾಗಿಲಲ್ಲಿ ನಿಂತು ಏನೋ ಮಾತಾಡುತ್ತಿದ್ದಳು ಲತಾಂಗಿಯನ್ನು ನೋಡುತ್ತಲೆ ಇಬ್ಬರೂ ಮಾತು ನಿಲ್ಲಿಸಿದರು. ಮಂಗೇಶನ ಕುಹಕ ದೃಷ್ಟಿ

ಯಿಂದ ಅವರು ತನ್ನ ವಿಷಯವಾಗಿಯೇ ಮಾತಾಡುತ್ತಿದ್ದಾರೆಂದು ಲತಾ ತಿಳಿದುಕೊಂಡಳು

ಅವಳು ನೇರವಾಗಿ ಒಳಗಿನ ಕೊಟಡಿಗೆ ಹೋಗಿ ಕೈಯಲ್ಲಿದ್ದ ಬ್ಯಾಗ್ ಮತ್ತು ಪುಸ್ತಕಗಳನ್ನು ಮೇಜಿನ ಮೇಲಿಟ್ಟು ಹಾಸಿಗೆಗೆ ಒರಗಿಕೊಂಡು ಕುಳಿತಳು ಕ್ರಮ ಕ್ರಮವಾಗಿ ತಾಯಿ ತನ್ನಿಂದ ದೂರವಾಗುತ್ತಿರುವ ಳೆಂದೂ, ತನ್ನ ಪರೋಕ್ಷದಲ್ಲಿ ಮಂಗೇಶ ಅತ್ತೆಯ ಸಂಗಡ ತನ್ನ ವಿಚಾರ ವಾಗಿ ಏನೋ ಹೇಳುತ್ತಿರಬೇಕೆಂದೂ ಅವಳಿಗೆ ಮೈಸೂರಲ್ಲೇ ಸಂದೇಹ ಮೂಡಿತ್ತು

ಮೈಸೂರು ತಲಪಿದ ಮರುದಿನ 'ಜೂ' ನೋಡಿ ಬರಲು ತಾಯಿ ಕರೆದಾಗ "ನೀವು ಹೋಗಿ ಬನ್ನಿ ನನ್ನ ಗೆಳತಿಯೊಬ್ಬಳು ಆಸ್ಪತ್ರೆಯಲ್ಲಿ ದಾದಿಯಾಗಿದ್ದಾಳೆ ಅವಳನ್ನು ನೋಡಿ ಬರುತ್ತೇನೆ" ಎಂದಳು

"ಯಾರು ನಿನ್ನ ಗೆಳತಿ?"— ರತ್ನಮ್ಮ ಕೇಳಿದಳು

"ತುಲಸೀ ತಿಳಿಯದೆ? ಪುತ್ಲಿಬಾಯಿಯ ತಂಗಿ"

"ಅವಳೀಗ ಮೈಸೂರಲ್ಲಿದ್ದಾಳೋ? ನೀನು ಅವಳ ಮನೆಗೆ ಹೋಗು ವುದು ನನಗಿಷ್ಟವಿಲ್ಲ ಲತಾ"

ಲತಾಂಗಿ ಉತ್ತರ ಕೊಡಲಿಲ್ಲ ತಾಯಿ ಬಲಾತ್ಕರಿಸಿದಾಗ "ನನಗೆ 'ಜೂ' ನೋಡುವ ಆಸೆಯಿಲ್ಲ ನಾನು ಖಂದಿತವಾಗಿ ಎಲ್ಲಿಗೂ ಬರುವುದಿಲ್ಲ. ನೀವು ಬೇಕಾದರೆ ಹೋಗಿ ಬನ್ನಿ" ಎಂದುಬಿಟ್ಟಳು

ಆಮೇಲೆ ರತ್ನಮ್ಮ ತಲೆ ಬಾಚಿ, ಅಲಂಕೃತೆಯಾಗಿ ಅಳಿಯನೊಡನೆ ಷಾಪ್‌ಸಂದ್ ಗಾಡಿಯಲ್ಲಿ ಹೊರಟಳು ಲತಾ ಬಾಗಿಲು ಹಾಕಿಕೊಂಡು ಮಲಗಿ ಬಿಟ್ಟಳು ಆ ದಿನ ಅವರು 'ಜೂ', ಸಿನಿಮಾ ಮೊದಲ ಆಟ ನೋಡಿಕೊಂಡು ಹೋಟಲಿಗೆ ಬರುವಾಗ ರಾತ್ರಿ ಒಂಭತ್ತು ಗಂಟೆಯಾಗಿತ್ತು. ತಾಯಿಯ ಕೆಂಪೇರಿದ ಕಣ್ಣುಗಳು, ಜೇನು ತೊಡೆದಂತಿದ್ದ ತುಟಿ ಇವು ಗಳನ್ನು ಕಂಡು ಲತಾ ತಿಳಿದುಕೊಂಡಳು, ಕುಡಿದು ಬಂದಿರುವಳೆಂದು. ಪತಿಯ ಮರಣದಿಂದ ದುಃಖಪೀಡಿತೆಯಾದ ಅತ್ತೆಯನ್ನು ಸಮಾಧಾನ ಪಡಿಸಲು ಮಂಗಳೂರಲ್ಲಿದ್ದಾಗಲೇ ಮಂಗೇಶ ಒಂದೆರಡು ಸಾರಿ ಮದ್ಯದ ಸೀಸೆಗಳನ್ನು ತಂದುಕೊಟ್ಟಿದ್ದ ಮೈಸೂರಲ್ಲಿ ಅವಕಾಶ ದೊರೆತಾಗ ಅವನು

ಅತ್ತೆಯನ್ನು ‘ ಬಾರಿಗೆ ’ ಕರೆದುಕೊಂಡು ಹೋದದ್ದು ಅಸಂಭಾವ್ಯವಲ್ಲವೆಂದು ಲತಾ ತಿಳಿದಳು. ತಾಯಿಯ ಸಂಗಡ ತಾನೂ ಹೋಗಿದ್ದರೆ ಈ ಪ್ರಸಂಗ ವನ್ನು ತಪ್ಪಿಸಬಹುದಾಗಿತ್ತೆಂದು ಅವಳಿಗೆ ತೋರಿತು ಆ ತರುವಾಯ ಮೈಸೂರಲ್ಲಿದಷ್ಟು ದಿನವೂ ತಾಯಿಯ ಸಂಗಡ ತಿರುಗಾಡಿ ಅಂತಹ ಅಸಂಗತ ನಡೆಯದಂತೆ ನೋಡಿಕೊಂಡಳು

ಕೊಟಡಿಯ ್ಲ ಮಲಗಿದ್ದಂತೆ ಅವಳಿಗೆ ಮೈಸೂರಿನ ಈ ಘಟನೆಗಳು ನೆನಪಿಗೆ ಬಂದವು ನೀತಿಭ್ರಷ್ಟಳಾದ ಇಂತಹ ತಾಯಿ, ಔಚಿತ್ಯ-ಅನೌಚಿತ್ಯಗಳ ಅರಿವಿಲ್ಲದ ಧನ ಪಿಶಾಚ ಪತಿ ಇವರ ನಡುವೆ ಬೆಂಗಳೂರಲ್ಲಿ ತಾನು ಬಾಳುವೆ ನಡೆಸುವುದು ಹೇಗೆ ಎಂದು ಯೋಚಿಸತೊಡಗಿದಳು ವಿರಲ ರಾಯರು ಬದುಕಿದ್ದರೆ ತಾಯನ್ನು ಹತೋಟಿಯಲ್ಲಿಡುವುದು ಸುಲಭವಾಗು ತ್ತಿತ್ತು ಕೈಗೆ ಹಣ ದೊರಕಿದ್ದರಿಂದ ಈಗ ತಾಯಿ ಕಟ್ಟು ಬಿಚ್ಚಿದ ಅಗಡು ಕುದುರೆಯಂತಾಗಿದ್ದಾಳೆ ಅವಳು ಹೇಳಿದ್ದಕ್ಕೆ ತಾಳ ಹಾಕಲು ತಕ್ಕ ಅಳಿಯನೂ ಸಿಕ್ಕಿದ್ದಾನೆ ಈ ಅನುಕೂಲ ಸನ್ನಿವೇಶದಲ್ಲಿ ಮುಂದೆ ಏನು ತಾನೆ ನಡೆಯಬಾರದು ? ಭವಿಷ್ಯ ಕಾರ್ಗತ್ತಲೆಯಿಂದ ಕೂಡಿದೆಯೆಂದು ಲತಾ ಭಾವಿಸಿದಳು

“ ಪದ್ಮಾ ಮನೆಯಿಂದ ಕೆಲಸದವಳು ಬಂದಿದ್ದಳು ನಿನಗೆ ಬರುವಂತೆ ಹೇಳಿ ಕಳುಹಿಸಿದ್ದಾಳೆ ”

ರತ್ನಮ್ಮ ಬಾಗಿಲಲ್ಲಿ ನಿಂತು ಹೇಳಿದಳು

“ ಹೋಗುತ್ತೇನೆ ” ಎಂದು ಮಾತ್ರ ಲತಾ ಉತ್ತರ ಕೊಟ್ಟಳು. ರತ್ನಮ್ಮ ಮಗಳ ಮುಖವನ್ನು ದೃಷ್ಟಿಸಿ ನೋಡುತ್ತಾ “ ಮದುವೆಯಾದ ಮೇಲೆ ನಿನ್ನ ರೀತಿಯೇ ಬದಲಾಯಿಸಿದೆ, ಲತಾ ಕೈಹಿಡಿದ ಗಂಡನ ಸಂಗಡ ಒಂದು ದಿನವಾದರೂ ಸರಿಯಾಗಿ ಮಾತಾಡುವುದು ಬೇಡವೇ ?” ಎಂದಳು.

“ ಒಂದು ದಿನಕ್ಕೇ ನನ್ನ ಮೇಲೆ ನಿನ್ನ ಹತ್ತಿರ ದೂರಿಗೆ ಪ್ರಾರಂಭ ಮಾಡಿದರೋ ಅವರು ?”

“ ಮಂಗೇಶ ನನಗೇನೂ ಹೇಳಲಿಲ್ಲ ನೋಡಿ ತಿಳಿದುಕೊಳ್ಳಲಾರೆನೇ ನಾನು ? ಬೆಳಗಾಗ ಹತ್ತು ಗಂಟೆಗೆ ಕೆಲಸಕ್ಕೆ ಹೋದವಳು ಈಗ ಮನೆಗೆ ಬಂದು ಯಾರ ಸಂಗಡಲೂ ಮಾತಾಡದೆ ಮಲಗಿಬಿಟ್ಟೆ. ಎದುರಿಗಿದ್ದರೂ

ಆ ಕಡೆ ದೃಷ್ಟಿಸುವುದಿಲ್ಲ ಮಾತಾಡುವುದಿಲ್ಲ ಇದೆಲ್ಲಾ ನನಗೆ ಅರ್ಥ ವಾಗುವುದಿಲ್ಲವೇ ?"

"ಈ ಲೆಕ್ಚರ್ ನನಗೆ ಬೇಡ ನಿನ್ನಿಂದ ನಾನು ದಾಂಪತ್ಯ ಜೀವನದ ಪಾಠ ಕಲಿಯಬೇಕಾಗಿಲ್ಲ"

ಎಂದು ಹೇಳಿ ಲತಾ ಎದ್ದು ಸ್ನಾನದ ಮನೆಗೆ ಹೋಗಿ ಮುಖ ತೊಳೆದು ಕೊಂಡು ಅಡಿಗೆಯ ಮನೆಗೆ ಬಂದು ನೋಡಿದಳು ಕಾಫಿ ಕಾಯಿಸಿದ ಬಟ್ಟಲು ಬರಿದಾಗಿತ್ತು ಅಳಿಯನಿಗೆ ಕಾಫಿ ಮಾಡಿಕೊಟ್ಟ ತಾಯಿಗೆ ತನಗೊಂದು ಕಪ್ ಉಳಿಸುವಷ್ಟು ಸೌಜನ್ಯವೂ ಇಲ್ಲವೆ ಹೋಯಿತೇ ಎಂದು ಮರುಗಿದಳು ಪ್ರಕಟವಾಗಿ ಏನೂ ಹೇಳಲಿಲ್ಲ ಒಲೆಯಲ್ಲಿ ಬೆಂಕಿಯಿತ್ತು. ಪುನಃ ಉರಿ ಮಾಡಿ ತಾನೇ ಸ್ವಲ್ಪ ಕಾಫಿ ಕಾಯಿಸಿಕೊಂಡು ಕುಡಿದು ಪದ್ಮಳ ಮನೆಗೆ ಹೋದಳು

ನಡುಮನೆಯಲ್ಲಿ ಕುಳಿತಿದ್ದ ರತ್ನಮ್ಮ ಮಗಳು ಹೋದದ್ದನ್ನು ಕಂಡು ಹೊರಗಿನ ಕೊಟಡಿಯಲ್ಲಿದ್ದ ಮಂಗೇಶನಿಗೆ ಕೇಳುವಂತೆ ಹೇಳಿದಳು

"ನೀನು ಸರಿಯಾಗಿದ್ದಿದ್ದರೆ ಇಷ್ಟೆಲ್ಲಾ ಆಗುತ್ತಿತ್ತೇ ಮಂಗೇಶ ? ಲಗಾಮು ಕಿತ್ತ ಕುದುರೆಯಂತಾಗಿದ್ದಾಳೆ ಲತಾ ಅವಳಿಗೆ ನಿನ್ನ ಹೆದರಿಕೆ ಯಿಲ್ಲ ನನ್ನ ಹೆದರಿಕೆಯಂತೂ ಮೊದಲೇ ಇಲ್ಲ ಇಷ್ಟ ಬಂದಾಗ ಬರುತ್ತಾಳೆ ಇಷ್ಟ ಬಂದಾಗ ಹೋಗುತ್ತಾಳೆ ಹದ್ದು ಹತೋಟಿ ಒಂದೂ ಇಲ್ಲ ಅವಳಿಗೆ ಈ ಮನೆಯಲ್ಲಿ"

ಕೊಟಡಿಯಲ್ಲಿ ಮಂಗೇಶ ಕೇಳಿದರೂ ಕೇಳದವನಂತೆ ಸುಮ್ಮನಿದ್ದ. ಅತ್ತೆಯ ಬಾಯಿ ದೊಡ್ಡದೆಂಬುದು ಅವನಿಗೆ ಅನುಭವವಾಗಿತ್ತು ಇಲ್ಲ ದಿದ್ದರೆ ಮಂಗಳೂರಲ್ಲಿ ಪಂಚಾಯಿತರೆದುರು ಅಷ್ಟೊಂದು ಮಾತಾಡಿ ಮೂರು ಸಾವಿರ ರೂಪಾಯಿ ನಗದು ಅಷ್ಟೇ ಬೆಲೆಯ ಒಡವೆಗಳನ್ನು ಗಿಟ್ಟಿಸಿಕೊಳ್ಳು ವುದು ಸಾಧ್ಯವಿತ್ತೆ ? ಅತ್ತೆಯ ಶಕ್ತಿ ಸಾಮರ್ಥ್ಯ ಮಾತುಗಾರಿಕೆಯಲ್ಲಿ ಅವನಿಗೆ ಅಪಾರ ಗೌರವ. ತನ್ನ ಮಂದಬುದ್ಧಿ, ಮೆರಗು ಮಾತುಗಳಿಂದ ಅವಳ ಮುಂದೆ ನಿಂತು ಅಪಮಾನಿತನಾಗುವ ಇಷ್ಟ ಅವನಿಗಿರಲಿಲ್ಲ

ಮಂಗೇಶ ಸುಮ್ಮನಿದ್ದುದನ್ನು ಕಂಡು ರತ್ನಮ್ಮನೂ ಸುಮ್ಮನಾದಳು. ವಿಠಲರಾಯರು ಹೇಳುತ್ತಿದ್ದ ಸರ್ವಜ್ಞನ ತ್ರಿಪದಿ ಅವಳಿಗೆ ನೆನಪಾಯಿತು.

ಕುದುರೆಯೂ ಚದುರೆಯೂ ಹದನೆರಡು ಒಂದಯ್ಯ
ಚದುರನೇರಿದರೆ ಕುಣಿಯುವುದು, ಬೆಳ್ಳನ
ಬಿದರಿ ಹಾಕುವುದು ಸರ್ವಜ್ಞ

ಸರ್ವಜ್ಞನ ನುಡಿ ಸಮಾಜದ ಮೆರಗನ್ನು ಭೇದಿಸಿ ಬಾಳುವೆಗೆ ಮೂಲಭೂತವಾದ ಸುಪ್ತ ಚೈತನ್ಯದ ನಗ್ನಸತ್ಯದ ಮೇಲೆ ಜ್ಞಾನದ ಬೆಳಕನ್ನು ಚೆಲ್ಲಿದೆಯೆಂಬುದನ್ನು ರತ್ನಮ್ಮ ತನ್ನ ಪ್ರಣಯ ಜೀವನದ ಇಪ್ಪತ್ತೈದು ವರ್ಷದ ಅನುಭವದಿಂದ ಚೆನ್ನಾಗಿ ಅರಿತಿದ್ದಳು ಹೆಣ್ಣು ಉತ್ತೇಜಿತವಾದ ಜಾತ್ಯಶ್ವದಂತೆ ಅಶ್ವ ಹೃದಯವನ್ನು ಅರಿತವರು ಮಾತ್ರವೇ ಅಶ್ವಿನಿಯನ್ನು ಕುಣಿಸಬಲ್ಲರು, ವಶಪಡಿಸಿಕೊಳ್ಳಬಲ್ಲರು ಅಶ್ವಾರೋಹಿ ಚತುರನಲ್ಲದಿದ್ದರೆ ತಾನಾಗಿ ಕೆಳಗೆ ಬೀಳುವನು ಇಲ್ಲವೇ ಕುದುರೆಯೇ ಕಡಹುವುದು ಈ ಎರಡರಲ್ಲಿ ಒಂದು ನಡೆಯುವುದು ಸ್ವಾಭಾವಿಕ ಹೆಣ್ಣಿನ ವಿಚಾರದಲ್ಲಿಯೂ ಹೀಗೆಯೇ ಲತಾಂಗಿಯನ್ನು ದೂರುವುದು ಅವಿವೇಕವೆಂದೂ, ಪತಿ ಪತ್ನಿಯರ ಅಸಾಮಂಜಸ್ಯಕ್ಕೆ ಮಂಗೇಶನೇ ಕಾರಣನೆಂದೂ ಅವಳಿಗೆ ಸಂದೇಹವಾಯಿತು ಕಾರಣವನ್ನು ಸರಿಯಾಗಿ ತಿಳಿದು ಪರಿಹಾರವನ್ನು ಚಿಂತಿಸುವುದು ತನ್ನ ಕರ್ತವ್ಯವೆಂದು ನಿರ್ಧರಿಸಿಕೊಂಡಳು

— ೪ —

ಪದ್ಮಾ ಲತಾಂಗಿಗಾಗಿ ಎದುರು ನೋಡುತ್ತಿದ್ದಳು ಬಂದ ಕೂಡಲೆ ಕೊಟಡಿಗೆ ಕರದುಕೊಂಡು ಹೋಗಿ ಕುಳ್ಳಿರಿಸಿ ತಾಯಿಗೆ ಕಾಫಿ ತರುವಂತೆ ಹೇಳಿದಳು

“ಬೇಡ ಪದ್ಮಾ, ಈಗತಾನೆ ಮನೆಯಲ್ಲಿ ಕುಡಿದು ಬಂದೆ”

“ಇನ್ನೊಂದು ಸಾರಿ ಕುಡಿದರೇನಾಗುತ್ತದೆ ? ನಾನೇ ಬರಬೇಕೆಂದು ಯೋಚಿಸಿದೆ. ನಿಮ್ಮ ತಾಯಿ ಅದೇಕೋ ಸರಿಯಾಗಿ ಮಾತಾಡುವುದಿಲ್ಲ. ಆದ್ದರಿಂದಲೆ ಕೆಲಸದವಳನ್ನು ಕಳುಹಿಸಿದೆ”

“ಅವಳು ಬಂದು ಹೇಳದಿದ್ದರೆ ನಾನೇ ಬರುತ್ತಿದ್ದೆ”

ತಾಯಿ ಒಂದು ತಟ್ಟೆಯಲ್ಲಿ ಸಜ್ಜಿಗೆ, ಹೀರೇಕಾಯಿ ಬೋಂಡಾ, ಕಾಫಿ ತಂದಳು ಇಬ್ಬರೂ ತಿಂದರು ಬಳಿಕ ಪದ್ಮಾ ಸಿಗರೇಟ್ ಡಬ್ಬಾ ಹೊರಗೆ ತೆಗೆದಳು ಲತಾ ಅರ್ಥಗರ್ಭಿತ ದೃಷ್ಟಿಯಿಂದ ಅವಳ ಮುಖ ನೋಡುತ್ತಾ ಕೇಳಿದಳು.

" ಈಗ ಜೋಷಿಯವರೂ ನಿನ್ನ ' ಬ್ರಾಂಡ್ ' ಸೇದುತ್ತಾರೆ ? ಎಷ್ಟು ದಿನದಿಂದ ನಿಮ್ಮಿಬ್ಬರ ಸ್ನೇಹ ?"

ಲತಾಂಗಿಯ ಪ್ರಶ್ನೆಯಿಂದ ಪದ್ಮಾ ಕ್ಷಣಕಾಲ ಅಪ್ರತಿಭಳಾದಳು. ತನ್ನ ಮತ್ತು ಜೋಷಿ ಸಂಬಂಧವನ್ನು ಗೆಳತಿಯಿಂದ ಮುಚ್ಚಿಡುವುದು ಪದ್ಮಳ ಉದ್ದೇಶವಾಗಿರಲಿಲ್ಲ ಸಮಯ ಸಿಕ್ಕಾಗ ತಾನೇ ಅವಳಿಗೆ ಎಲ್ಲವನ್ನೂ ತಿಳಿಸಬೇಕೆಂದು ಅವಳು ಯೋಚಿಸಿ ಕೊಂಡಿದ್ದಳು ಲತಾ ಕೋಪ ಮತ್ಸರ ಗಳನ್ನು ಪ್ರದರ್ಶಿಸಿದರೇನು ಮಾಡುವುದು ? ಎಂದು ಅವಳಿಗೆ ಶಂಕೆಯುಂಟಾ ಗಿತ್ತು ಬೆಂಗಳೂರಿಗೆ ಬಂದ ಮರುದಿನವೇ ಲತಾಂಗಿ ವಾಸ್ತವಪರಿಸ್ಥಿತಿ ಯನ್ನು ಗ್ರಹಿಸಿ ಅಸೂಯೆ ಮತ್ಸರಗಳ ನೆರಳೂ ಇಲ್ಲದ ಸಹಜ ಕಂಠದಿಂದ ಈ ಪ್ರಶ್ನೆ ಕೇಳಿದುದು ಅವಳಿಗೆ ಅಸಂಭವವಾಗಿ ಕಂಡಿತು

" ಒಂದೇ ಬ್ರಾಂಡ್ ಸಿಗರೇಟ್ ಉಪಯೋಗಿಸಿದ ಮಾತ್ರಕ್ಕೆ ಸ್ನೇಹ ಬೆಳೆದಿದೆಯೆಂದು ಹೇಗೆ ಹೇಳುತ್ತಿ ?"—ಎಂದಳು

" ಬೇರೆಯವರ ವಿಚಾರವಾಗಿದ್ದರೆ ನಾನು ಹಾಗೆ ಭಾವಿಸುತ್ತಿರಲಿಲ್ಲ. ಆದರೆ ನೀನು ಮತ್ತು ಜೋಷಿ, ನಿಮ್ಮಿಬ್ಬರ ಸ್ವಭಾವ ಚೆನ್ನಾಗಿ ತಿಳಿದ ನನಗೆ ನನ್ನ ಪರೋಕ್ಷದಲ್ಲಿ ಏನು ನಡೆಯಿತೆಂಬುದನ್ನು ಊಹಿಸುವುದು ಕಷ್ಟವೇ ? ಆ ದಿನ ನೀವು ಮನೆಯಲ್ಲಿ ಸಂಧಿಸಿದಾಗಲೆ ತಿಳಿದೆ—ನೀವಿಬ್ಬರೂ ಒಬ್ಬರಿಗಾಗಿ ಒಬ್ಬರು ಮಾಡಲ್ಪಟ್ಟವರೆಂದು ಆಗಿನ ನನ್ನ ಭಾವನೆ ನಿರರ್ಥಕವಾಗಲಿಲ್ಲ "

ವಾಸ್ತವವನ್ನು ಮುಚ್ಚಿಡುವ ಪ್ರಯತ್ನ ನಿರರ್ಥಕವೆಂದು ಪದ್ಮಾ ಸಂಕೋಚವಿಲ್ಲದೆ ಗೆಳತಿಗೆ ಎಲ್ಲವನ್ನೂ ಹೇಳಿದಳು ಅವಳ ವಿಚಾರವಾಗಿ ನಡೆದ ಮಾತುಕತೆಗಳನ್ನು ಮಾತ್ರ ಮುಚ್ಚಿಟ್ಟಳು, ಕೊನೆಗೆಂದಳು

" ನಿನಗೂ ಜೋಷಿಗೂ ಸಂಬಂಧವಿಲ್ಲವೆಂದು ಖಂಡಿತವಾದ ಮೇಲೇ ನಾನು ಒಪ್ಪಿದೆ ಹಾಗಿದ್ದಿದ್ದರೆ ನಾನು ನಿನ್ನ ಸುಖಕ್ಕೆ ಎಂದಿಗೂ ಅಡ್ಡಿ ಬರುತ್ತಿರಲಿಲ್ಲ. ನನ್ನಿಂದ ಏನಾದರೂ ಅಪರಾಧವಾಗಿದ್ದರೆ ಕ್ಷಮಿಸು

ಲತಾಂಗಿ."

ಉದ್ಧಟಳೂ ಸ್ವಾಭಿಮಾನಿಯೂ ಆದ ಪದ್ಮಾ ಈ ಮಾತು ಹೇಳಿದ್ದನ್ನು ಕೇಳಿ ಲತಾ ಆಶ್ಚರ್ಯಗೊಂಡಳು ಕಂಠಗದ್ಗದಿತವಾಯಿತು ಪದ್ಮಳ ಕೈಗಳನ್ನು ಹಿಡಿದು ಹೇಳಿದಳು

"ಯಾವ ಅಪರಾಧಕ್ಕಾಗಿ ನೀನು ನನ್ನ ಕ್ಷಮೆ ಬೇಡಬೇಕು? ಆ ದಿನ ನೀನೂ ಜೋಷಿ ಬಾರದಿದ್ದರೆ ಇಷ್ಟುಹೊತ್ತಿಗೆ ನಾನೇನಾಗುತ್ತಿದ್ದೆನೋ? ನೀವಿಬ್ಬರೂ ನನ್ನನ್ನು ಉದ್ಧಾರ ಮಾಡಿದಿರಿ ನೀವು ಸಂತೋಷವಾಗಿದ್ದರೆ ನನಗೂ ಸಂತೋಷ"

"ಹಾಗಾದರೆ ನೀನು ನನ್ನನ್ನು ಕ್ಷಮಿಸಿರುವೆ ಲತಾ? ನನ್ನ ಮೇಲೆ ನಿನಗೆ ಸ್ವಲ್ಪವೂ ಮತ್ಸರವಿಲ್ಲವಷ್ಟೇ?"

"ನಿನ್ನಲ್ಲಿ ನನಗೆ ಮತ್ಸರವೇ ಪದ್ಮಾ! ಹಿಂದೊಂದು ಸಾರಿ ಹೇಳಿದ್ದೇನೆ —ಜೋಷಿ ನನ್ನ ಭಾಗದ ದೇವತೆಯೆಂದು ದೇವತೆಯ ಪ್ರಣಯಿನಿಯಾಗಿ ನೀನೂ ನನ್ನ ದೇವತೆಯಾದೆ"

ಲತಾಂಗಿಯ ಮಾತುಗಳಿಂದ ಪದ್ಮಳ ಮನಸ್ಸು ಉದ್ವಿಗ್ನವಾಯಿತು ಇಷ್ಟೊಂದು ತ್ಯಾಗ ಹೆಣ್ಣಿಗೆ ಸಾಧ್ಯವೇ? ಅಥವಾ ಲತಾಂಗಿಯ ಹೃದಯದಲ್ಲಿ ಜೋಷಿಗೆ ಯಾವ ಸ್ಥಾನವೂ ಇರಲಿಲ್ಲವೋ? ಪದ್ಮಾ ಆವೇಗದಿಂದೆದ್ದು ಗೆಳತಿಯನ್ನು ಆಲಂಗಿಸಿ ಕೊಂಡಳು ಒಬ್ಬರ ಭುಜದ ಮೇಲೊಬ್ಬರು ತಲೆಯಿಟ್ಟು ಇಬ್ಬರೂ ಸ್ವಲ್ಪಕಾಲ ನೀರವವಾಗಿ ರೋಧಿಸಿದರು ಅನಂತರ ಲತಾ ಕಣ್ಣೊರೆಸಿಕೊಂಡು ಪದ್ಮಳನ್ನು ಹಾಸಿಗೆಯ ಮೇಲೆ ಕುಳ್ಳಿರಿಸಿ,

* ಅಳುವುದು ನನ್ನ ಬಾಳಿಗೆ ಮೀಸಲು, ಅಕ್ಕಾ. ನನ್ನ ದುಃಖದ ಕಾರ್ಮೋಡ ನಿಮ್ಮ ಮೇಲೆ ಬೀಳದಿರಲಿ"

ಎಂದು ಹೇಳಿ ಡಬ್ಬದಿಂದ ಸಿಗರೇಟ್ ತೆಗೆದು ಪದ್ಮಳ ಬಾಯಿಗಿಟ್ಟು ಬೆಂಕಿ ಹಚ್ಚಿದಳು. ಪದ್ಮಾ ಧೂಮಪಾನ ಮಾಡುತ್ತಿದ್ದಂತೆ ಲತಾಂಗಿಯ ಹೃದಯದಲ್ಲಿ ಭಾವ ತರಂಗಗಳು ಮಿಂಚಿನಂತೆ ಸುಳಿದವು "ನಾನು ಅಪೇಕ್ಷಿಸಿದ್ದರೆ ಜೋಷಿ ನನ್ನವರಾಗುತ್ತಿದ್ದರು ಬೃಂದಾವನದಲ್ಲಿ ನಡೆದದ್ದನ್ನು ಮರೆಯಲಾಗುವುದೇ? ಕೈಗೆ ಸಿಕ್ಕಿದ್ದನ್ನು ನಾನಾಗಿಯೇ ಕಳೆದುಕೊಂಡೆ. ಪ್ರಣಯಾರ್ಥಿಯನ್ನು ದೇವತೆಯ ಸ್ಥಾನದಲ್ಲಿ ಕುಳ್ಳಿರಿಸಲು ಪ್ರಯತ್ನಿಸಿದೆ.

ಪ್ರಣಯ ಹೋಯಿತು ಈಗ ದೇವರೂ ಕೈ ಬಿಡುತ್ತಿದ್ದಾನೆ. ತ್ಯಾಗ ಮತ್ತು ನೀತಿಗೆ ದೊರಕುವ ಫಲವೋ ಇದು! —ಅಥವಾ ನಾನು ಯಾವುದಕ್ಕಾಗಿ ದುಃಖಿಸಬೇಕು? ಜೋಷಿ ನನಗೆ ಯಾರು? ಹೆಣ್ಣಿನ ಆಕರ್ಷಣೆಗೆ ಸಿಲುಕಿ ನನ್ನನ್ನೊಂದು ಕ್ಷಣ ಬಯಸಿದರು ಬಯಕೆ ಫಲಿಸಲಿಲ್ಲ ನಿರುದ್ಯೋಗಿಯಾಗಿ ಕಷ್ಟದಲ್ಲಿ ಬಿದ್ದು ನಾನವರ ಸಹಾಯ ಬೇಡಿದೆ ಕೆಲಸ ಕೊಟ್ಟರು ಒಂದು ವೃತ್ತಿ ಕಲ್ಪಿಸಿ ಕೊಟ್ಟರು ಸದ್ಭಾವನೆ ಗೌರವಗಳಿಂದ ನಡೆಸಿಕೊಳ್ಳುತ್ತಿದ್ದಾರೆ ಅವರು ಮತ್ತೊಬ್ಬ ಹೆಂಗಸನ್ನು ಪ್ರೀತಿಸಿದರೆ ಅವರ ಸುಖಕ್ಕೆ ಅಡ್ಡಿ ಬರಲು ನಾನು ಯಾರು?—ನಿಜವಾಗಿ ಜೋಷಿ ಪದ್ಮಾ ಒಳ್ಳೇ ಮನಸ್ಸಿನವರು ಪದ್ಮಳಂತಹ ಗೆಳತಿ, ಜೋಷಿಯಂತಹ ಆಶ್ರಯದಾತರು ಸಿಕ್ಕುವುದು ದುರ್ಲಭ ದೇವರು ನನಗೆ ಇಬ್ಬರನ್ನೂ ಕರುಣಿಸಿದ್ದಾನೆ ಅದರಿಂದ ತೃಪ್ತಳಾಗುವುದು ನನ್ನ ಕರ್ತವ್ಯ ಮತ್ಸರ ಅಸೂಯೆಗಳಿಗೆ ಮನಸ್ಸಿನಲ್ಲಿ ಎಡೆ ಕೊಡಲು ಕಾರಣವೇನಿದೆ?—"

ಯೋಚಿಸುತ್ತಿದ್ದಂತೆ ಲತಾಂಗಿಯ ಹೃದಯದಲ್ಲಿ ಒಂದು ಅಪೂರ್ವ ಶಾಂತಿ ಭಾವನೆ ಉದಯವಾಯಿತು ಉಷಾಕಾಲದ ಮಂಜಿನ ತೆರೆಯಂತೆ ಉದ್ವೇಗ ಕರಗಿತು. ವಿಕಲ್ಪರಹಿತವಾದ ಅನಿರ್ವಚನೀಯ ಆನಂದದ ಸೆಳೆ ಮಿಂಚು ಅವಳ ಪರಿವತಪ್ತ ಅಂತಃಕರಣಗಳನ್ನು ಕ್ಷಣಕಾಲ ಬೆಳಗಿಸಿ ಅದೃಶ್ಯವಾಯಿತು ಪದ್ಮಳ ಕಡೆ ತಿರುಗಿ "ಮಂಗಳೂರಲ್ಲಿ ನಡೆದುದನ್ನು ನಿನಗೆ ತಿಳಿಸಬೇಕೆಂದು ಬಂದೆ ಮಾತು ನಮ್ಮನ್ನು ಎಲ್ಲಿಗೋ ಸೆಳೆದುಕೊಂಡು ಹೋಯಿತು" ಎಂದು ಪ್ರಾರಂಭ ಮಾಡಿ ತಂದೆಯ ಮರಣಾನಂತರ ನಡೆದುದೆಲ್ಲವನ್ನೂ ವಿವರಿಸಿದಳು ಪದ್ಮಾ ಅವಳ ಮಾತುಗಳನ್ನು ಮುಗ್ಧಳಂತೆ ಕೇಳಿದಳು. ಮುಗಿದ ಮೇಲೆ ನುಡಿದಳು:

"ಒಂದು ಉಪನ್ಯಾಸವನ್ನೇ ಕೊಟ್ಟೆಯಲ್ಲ, ಲತಾ."

"ಮನಸ್ಸಿನ ಅಳಲು ಇತರರಿಗೆ ಹೇಳಿಕೊಂಡರೆ ಸಮಾಧಾನವಾಗುವುದು, ಪದ್ಮಾ ತಂದೆಯನ್ನು ಕಳೆದುಕೊಂಡೆ. ಈಗ ನನ್ನ ಪಾಲಿಗೆ ಯಾರೂ ಇಲ್ಲದಂತಾಗಿದ್ದಾರೆ. ನಿನ್ನನ್ನು ಬಿಟ್ಟು ಇನ್ನಾರಿಗೆ ಹೇಳಿಕೊಳ್ಳಲಿ."

ಲತಾಂಗಿಯ ಮಾತಿನ ಹಿಂದಿದ್ದ ದುಃಖದ ಸೂಚನೆಯನ್ನು ಪದ್ಮಾ ತಿಳಿದುಕೊಂಡಳು. ಮನೆಯಲ್ಲಿ ತಾಯಿಯ ಸಂಗಡ ವೈಮನಸ್ಯಕ್ಕೆ

ಮೊದಲಾಗಿರಬೇಕೆಂದು ಅವಳಿಗೆ ತೋರಿತು ಆದರೆ ಈ ಸಂದರ್ಭದಲ್ಲಿ ಆ ಅಳಲನ್ನು ಕೆದಕುವುದು ಹೆಚ್ಚು ದುಃಖಕ್ಕೆ ಕಾರಣವೆಂದು ಭಾವಿಸಿ ಸುಮ್ಮನಾದಳು.

ಈ ಮಾತು ನಡೆದದ್ದು ಮೂವರ ಮಧ್ಯೆ ಗೆಳೆತನ ಕ್ರಮೇಣ ಗಾಢವಾಗಿ ಬೆಳೆಯಲು ಕಾರಣವಾಯಿತು ಪದ್ಮಾ, ಲತಾಂಗಿ, ಜೋಷಿ ಮೂವರೂ ಒಟ್ಟಾಗಿ ಸಿನಿಮಾ, ಕ್ಲಬ್ ಮುಂತಾದವುಗಳಿಗೆ ಹೋಗಲು ಮೊದಲು ಮಾಡಿದರು ಪದ್ಮಳ ಮನೆಯಲ್ಲಿಯೂ ಒಂದೊಂದು ಸಾರಿ ಮೂವರೂ ನೇರುವರು ಕಛೇರಿಯಲ್ಲಿ ಲತಾಂಗಿ ಜೋಷಿಯ ಆಪ್ತ ಕಾರ್ಯದರ್ಶಿನಿಯಾದಳು ಅಗ್ರಲೇಖನ ಬರೆಯುವುದು, ಸಂಪಾದಕೀಯ ಕಾಗದ ಪತ್ರಗಳನ್ನು ಫೈಲ್ ಮಾಡುವುದು, ಮುಂತಾದ ಕೆಲಸಗಳೂ ಲತಾಂಗಿಯ ಮೇಲ ಬಿದ್ದವು ಪ್ರತಿ ಭಾನುವಾರ ಪ್ರಕಟವಾಗುತ್ತಿದ್ದ ಮಹಿಳಾ ಮತ್ತು ಮಕ್ಕಳ ಪುಟಗಳ ಕೆಲಸದೊಡನೆ ಲತಾಂಗಿ ಈ ಕೆಲಸಗಳನ್ನೂ ದಕ್ಷತೆಯಿಂದ ನಿರ್ವಹಿಸುತ್ತಿದ್ದಳು ಮುಂದೆ ಪ್ರಕಟವಾಗುವ 'ಸಖೀ' ಮಾಸ ಪತ್ರಿಕೆಯ ಆರಂಭದ ಕಾರ್ಯಗಳೂ ಒಂದು ಕಡೆ ನಡೆಯುತ್ತಿದ್ದವು ಪತ್ರಿಕೆಯ ಒಡೆಯ ರಾಮದಯಾಲ್ ಸಿಂಹರು ಕೇಂದ್ರ ಶಾಸನ ಸಭೆಯ ಅಧಿವೇಶನ ಮುಗಿಸಿಕೊಂಡು ದೆಹಲಿಯಿಂದ ಬಂದ ಕೂಡಲೆ ಪ್ರಕಟನೆಯ ತಾರೀಖು ಗೊತ್ತಾಗಬೇಕಾಗಿತ್ತು ಇವುಗಳಿಂದ 'ವಿಶ್ವಮಿತ್ರ' ನೌಕರ ವರ್ಗದಲ್ಲಿ ಲತಾಂಗಿಯ ಗೌರವ ಒಂದು ರೀತಿಯಲ್ಲಿ ಹೆಚ್ಚಿದರೂ ಪದ್ಮಾ ಮತ್ತು ಜೋಷಿ ಸಂಗಡ ಅವಳು ಹೆಚ್ಚಿಗೆ ಕಾಣಿಸಿಕೊಳ್ಳುತ್ತಿದ್ದದ್ದು ಅಪವಾದಕ್ಕೆ ಕಾರಣವಾಯಿತು

ಮಂಗಳೂರಿಂದ ಬಂದ ಮೇಲೆ ಪದ್ಮಾ ಮಂಗೇಶನನ್ನು ಸಂಪೂರ್ಣವಾಗಿ ದೂರ ಮಾಡಿದಳು. ಪ್ರತಿ ಶನಿವಾರ ಸಿನಿಮಾಕ್ಕೆ ಹೋಗುತ್ತಿದ್ದದ್ದು ನಿಂತಿತು. ಕಾರ್ಖಾನೆಯಲ್ಲಿ ಕೂಡಾ ಅವಶ್ಯಕತೆಗಿಂತ ಹೆಚ್ಚು ಮಾತಾಡುತ್ತಿರಲಿಲ್ಲ. ಒಂದೊಂದು ಸಾರಿ ಅವನಲ್ಲಿ ಪದ್ಮಳ ವರ್ತನೆ ಸೌಜನ್ಯರಹಿತವೆನ್ನುವಂತೆ ಕಾಣುತ್ತಿತ್ತು. ಮಂಗೇಶ ಬುದ್ಧಿವಂತನಾಗಿದ್ದ ಪಕ್ಷದಲ್ಲಿ ಷರೀಫ್ ಸಂಬಂಧವಾದ ಘಟನೆಯೇ ಪದ್ಮಳ ಪರಾಮುಖ ವರ್ತನೆಯ ಕಾರಣವೆಂದು ತಿಳಿಯುತ್ತಿದ್ದ. ಅಷ್ಟು ದೂರ ಅವನ ಬುದ್ಧಿ ಓಡಲಿಲ್ಲ. ಜೋಷಿಯೊಡನೆ

ಬೆಳೆಯುತ್ತಿದ್ದ ಸಂಬಂಧ, ಲತಾಂಗಿ ತನ್ನ ವಿಷಯದಲ್ಲಿ ಆಡುವ ಮಾತುಗಳು ಇವೇ ಅದರ ಕಾರಣವೆಂದು ಭಾವಿಸಿ ಪತ್ನಿಯ ಮೇಲೆ ವಿಷ ಕಾರಲು ಪ್ರಾರಂಭಿಸಿದ ಜೋಷಿ ಮತ್ತು ಪದ್ಮಳ ಸಂಗಡ ಲತಾಂಗಿಯೂ ಸಿನಿಮಾ ಮುಂತಾದವುಗಳಿಗೆ ಹೋಗುತ್ತಿದ್ದುದು ಅವನ ಕೋಪಾಗ್ನಿಗೆ ಆಜ್ಯಾಹುತಿ ಯಂತಾಯಿತು ಮನೆಯಲ್ಲಿ ಲತಾಂಗಿಗೆ ಕಿರುಕುಳ ಹೆಚ್ಚಿತು ರತ್ನಮ್ಮನೂ ಅಳಿಯನ ಪಕ್ಷ ವಹಿಸಿ ಮಗಳಿಗೆ ವಿರೋಧಿಯಾಗಿ ನಿಂತಳು

ಬೆಟ್ಟದಂತಹ ಸಹನೆಯಿಂದ ಲತಾಂಗಿ ಇವೆಲ್ಲವನ್ನೂ ಸಹಿಸಿಕೊಂಡಿದ್ದಳು ಎದುರುಬಿದ್ದರೆ ಮನೆಬಿಟ್ಟು ಹೋಗುವುದೊಂದೇ ದಾರಿಯೆಂದು ಅವಳಿಗೆ ಖಚಿತವಾಗಿತ್ತು ಆದರೆ ತಾನು ಹೋಗುವುದಾದರೂ ಎಲ್ಲಿಗೆ? ಬರುತ್ತಿದ್ದ ವೇತನ ಜೀವನಕ್ಕೆ ಸಾಕಾಗುತ್ತಿತ್ತು ಅಲ್ಲದೆ ತಾನೊಬ್ಬಳೇ ಪ್ರತ್ಯೇಕ ಮನೆ ಮಾಡಿಕೊಂಡಿರುವುದು ಸಾಧ್ಯವೇ ? ಭವಿಷ್ಯದ ದುಃಖಾನುಭವವನ್ನು ಚಿಂತಿಸಿ ಅವಳು ಭಯಗ್ರಸ್ತೆಯಾದಳು

ಈ ರೀತಿ ಕೆಲವು ತಿಂಗಳುಗಳು ಕಳೆದವು ಒಂದು ದಿನ ರಾತ್ರಿ ಜೋಷಿ ಸಿನಿಮಾ ನೋಡಿಕೊಂಡು ಪದ್ಮಳನ್ನು ಮನೆಗೆ ಬಿಟ್ಟು ಒಂದು ಗಂಟೆ ಸುಮಾರಿಗೆ ಕಛೇರಿಗೆ ಹಿಂದಿರುಗಿದ ಸ್ವಲ್ಪ ಹೊತ್ತು ರಾತ್ರಿ ಸಂಪಾದಕರೊಡನೆ ಕುಳಿತು ಬಂದಿದ್ದ ವಾರ್ತೆಗಳನ್ನು ವಿಹಂಗಮ ದೃಷ್ಟಿಯಿಂದ ಅವಲೋಕಿಸಿ ಮೂರನೆಯ ಅಂತಸ್ತಿನ ತನ್ನ ಬಿಡಾರಕ್ಕೆ ಹೋದ ಪದ್ಧತಿಯಂತೆ ವರಾಂಡದಲ್ಲಿ ಮಾತ್ರ ದೀಪ ಉರಿಯುತ್ತಿತ್ತು ನಡುಮನೆಗೆ ಹೋಗಿ ದೀಪ ಹೊತ್ತಿಸಿ ಬಟ್ಟೆ ಬದಲಾಯಿಸಲು ಮಲಗುವ ಕೋಣೆಗೆ ಹೋದ ಹಾಸಿಗೆಯ ಮೇಲೆ ಯಾರೋ ಮಲಗಿದ್ದಂತೆ ಕಂಡಿತು ಸಮೀಪಿಸಿದಾಗ ಅನಿರ್ವಚನೀಯವಾದ ಸೌಗಂಧದ ಅನುಭವವಾಯಿತು ಆ ದಿನ ಪದ್ಮಾ ಬಂದು ಹೋದ ಮೇಲೆ ಕೆಲವು ತಿಂಗಳಿಂದ ಸ್ತ್ರೀಯರಾರೂ ಆ ಕೋಣೆಗೆ ಬಂದಿರಲಿಲ್ಲ ಬ್ರಹ್ಮಚಾರಿಯ ಆಶ್ರಮದಂತೆ ಅದರ ಪರಿಶುದ್ಧತೆ ಸಾಂಕೇತಿಕವಾಗಿ ರಕ್ಷಿಸಲ್ಪಟ್ಟಿತ್ತು ಈಗ ಈ ಸುಗಂಧದ ಅರ್ಥವೇನು? ಅದು ಹೆಣ್ಣಿನಲ್ಲಿ ಋತುಧರ್ಮಾನುಗುಣವಾಗಿ ಕಾಣುವ ಕಾಮೋತ್ತೇಜಕ ದೇಹಗಂಧವೆಂದು ಅವನಿಗೆ ಅರಿವಾಯಿತು ಆಶ್ಚರ್ಯದಿಂದ ಅವನು ದೀಪ ಹತ್ತಿಸಿ ನೋಡಿದ. ತನ್ನ ಹಾಸಿಗೆಯ ಮೇಲೆ ಯುವತಿಯೊಬ್ಬಳು

ಮಲಗಿದ್ದಾಳೆ ಅವಳ ಅರಳಿದ ಕಣ್ಣುಗಳು ಕಾತರ ಕಾಮನೆಗಳಿಂದ ತನ್ನನ್ನು ಎವೆಯಿಕ್ಕದೆ ನೋಡುತ್ತಿವೆ.

ಜೋಷಿಯ ಬಾಯಿಂದ ಒಂದೇ ಒಂದು ಮಾತು ಹೊರಟಿತು

" ಲತಾ ! ನೀನಿಲ್ಲಿ ?"

— ೫ —

ಲತಾಂಗಿ ಮೂರು ದಿನಗಳಿಂದ ಕಛೇರಿಗೆ ಬಂದಿರಲಿಲ್ಲ ದೇಹಾಲಸ್ಯವೆಂದು ರಜಾಕ್ಕೆ ಬರೆದಿದ್ದಳು ವಾಸ್ತವದಲ್ಲಿ ಹೇಳಬಹುದಾದ ಆಲಸ್ಯವೇನೂ ಇಲ್ಲದಿದ್ದರೂ ದೇಹದಲ್ಲಿ ಒಂದು ಬಗೆಯ ಜಡತೆ, ಕೆಲಸ ಮಾಡುವ ಇಚ್ಛೆಯಿಲ್ಲ ಏನಾದರೊಂದು ಕಾದಂಬರಿಯನ್ನು ಓದುತ್ತಾ ಮಲಗಿರಬೇಕೆಂಬ ಅಪೇಕ್ಷೆ ಸಧ್ಯಕ್ಕೆ ವಿಶ್ರಾಂತಿ ಅಗತ್ಯವೆಂದೂ, ಋತುಸ್ನಾನವಾದ ಮೇಲೆ ಸರಿಹೋಗುವುದೆಂದೂ ಭಾವಿಸಿ ರಜ ತೆಗೆದುಕೊಂಡಳು. ಆದರೆ ಮನೆಯಲ್ಲಿ ನಿರೀಕ್ಷಿಸಿದ್ದ ವಿಶ್ರಾಂತಿ ದೊರಕಲಿಲ್ಲ. ಪ್ರತಿಯಾಗಿ ಸಣ್ಣ ಪುಟ್ಟ ಕಿರುಕುಳ ಮತ್ತು ಚುಚ್ಚುವ ಮಾತುಗಳು ಪ್ರಾರಂಭವಾದವು ಅತ್ತೆಯ ನೆರವು ದೊರೆತು ಮಂಗೇಶ 'ಸಿಂಗೇಶ'ನಾಗಿದ್ದ ಅಳಿಯ ತನ್ನ ಕಡೆ ಇರುವನೆಂದು ತಿಳಿದು ರತ್ನಮ್ಮ ದರ್ಪಿತೆಯಾಗಿದ್ದಳು

ಲತಾಂಗಿ ಎರಡು ದಿನಗಳನ್ನು ನಿರ್ವಾಹವಿಲ್ಲದೆ ಕಷ್ಟದಿಂದ ಕಳೆದಳು. ತಾಯಿ ಮತ್ತು ಗಂಡ ವ್ಯಂಗ್ಯವಾಗಿ ಆಡುತ್ತಿದ್ದ ಮೂದಲಿಕೆಯ ನುಡಿಗಳನ್ನು ಕೇಳಿಯೂ ಕೇಳದವಳಂತೆ ಸಹಿಸಿಕೊಂಡಳು ಪ್ರತಿಯಾಗಿ ಒಂದು ಮಾತೂ ಹೇಳಲಿಲ್ಲ ಮೂರನೆಯ ದಿನ ಸ್ನಾನ ಮಾಡಿ ಹತ್ತು ಗಂಟೆ ಸುಮಾರಿಗೆ ಪದ್ಮಳ ಮನೆಗೆ ಹೋದಳು ಆ ದಿನ ಅವಳೂ ಮನೆಯಲ್ಲಿದ್ದುದರಿಂದ ಇಬ್ಬರೂ ಬಹಳ ಹೊತ್ತು ಮಾತಾಡುತ್ತಾ ಕುಳಿತರು ಅನಂತರ ಅಲ್ಲಿಯೇ ಊಟ ಮುಗಿಸಿಕೊಂಡು ಒಂದೆರಡು ಗಂಟೆ ನಿದ್ದೆ ಮಾಡಿ ಐದು ಗಂಟೆ ಸುಮಾರಿಗೆ ಮನೆಗೆ ಬಂದಳು ನಡುಮನೆಯಲ್ಲಿ ಅಕ್ಕಿ ಆರಿಸುತ್ತ ಕುಳಿತಿದ್ದ ರತ್ನಮ್ಮ ಮಗಳ ಕಡೆ ತಲೆಯೆತ್ತಿ ನೋಡಲೂ ಇಲ್ಲ. ಲತಾಂಗಿ ಕೊಟಡಿಗೆ ಹೋಗಿ ಪುಸ್ತಕವೊಂದನ್ನು ತೆಗೆದುಕೊಂಡು ಓದುತ್ತಾ ಕುಳಿತುಕೊಂಡಳು.

ಆರು ಗಂಟೆ ಸುಮಾರಿಗೆ ಮಂಗೇಶ ಮನೆಗೆ ಬಂದ ರತ್ನಮ್ಮ ಅವನನ್ನು ಅಡಿಗೆ ಮನೆಗೆ ಕರೆದು ಮಧ್ಯಾಹ್ನ ಮಾಡಿಟ್ಟಿದ್ದ ಕೋಡಬಳೆ, ಕಾಫಿ ಕೊಟ್ಟಳು ಅವನು ತಿನ್ನುತ್ತಿದ್ದಂತೆ ಹೇಳಿದಳು

"ಬೆಳಿಗ್ಗೆ ಸ್ನಾನ ಮಾಡಿ ಹೋದವಳು , ಈಗ ಬಂದಿದ್ದಾಳೆ ಬೀದಿ ಬಸವಿ ಎರಡು ದಿನದಿಂದ ಮನೆಯಲ್ಲಿ ಹೇಗೆ ಕುಳಿತಿದ್ದಳೋ ಕಾಣೆ ! ಎಲ್ಲಿ ಹೋಗಿದ್ದಳು ಕೇಳು ಮಂಗೇಶ "

ಉದ್ದೇಶಪೂರ್ವಕವಾಗಿ ರತ್ನಮ್ಮ ದೊಡ್ಡ ದನಿಯಿಂದ ಮಾತಾಡಿದಳು

"ನೀನೇ ಕೇಳಬಾರದೆ ಅತ್ತೆ ? ತಾಯಿಗೆ ಅಧಿಕಾರವಿಲ್ಲವೇ ?" ಮಂಗೇಶ ಉತ್ತರ ಕೊಟ್ಟ.

"ಹೆಸರಿಗೆ ತಕ್ಕಂತೆ ನೀನೊಬ್ಬ ಮಂಗ ನಿನಗಿಲ್ಲದ ಅಧಿಕಾರ ನನಗೆ ಹೇಗೆ ಬರುತ್ತದೆ ? ನಾನು ಅವಳ ಗಂಡನಾಗಿದ್ದಿದ್ದರೆ ಕಪಾಳಕ್ಕೆರಡು ಕೊಟ್ಟು ಬುದ್ಧಿ ಕಲಿಸುತ್ತಿದ್ದೆ "

ಅತ್ತೆಯ ಕೋಪ ಮಂಗೇಶನನ್ನು ಸ್ತಬ್ಧನಾಗಿ ಮಾಡಿತು ಮೆಲುದನಿಯಿಂದ ಹೇಳಿದ "ಸುಮ್ಮನಿರು ಅತ್ತೆ ಯಾಕೆ ಹಾಗೆ ಕೂಗಾಡುತ್ತಿ ? ಪದ್ಮಳ ಮನೆಗೆ ಹೋಗಿರಬೇಕು ಇನ್ನೆಲ್ಲಿಗೆ ಹೋಗುತ್ತಾಳೆ "

ಮಂಗೇಶನ ಅನುನಯ ರತ್ನಮ್ಮನ ಕೋಪವನ್ನು ಕೆರಳಿಸಿತು ಅವಳು ಸಿಡಿದೆದ್ದು ಮತ್ತಷ್ಟು ದೊಡ್ಡ ದನಿಯಿಂದ ಹೇಳಿದಳು

"ಈ ಚಿತ್ತರಿಗೆ ಆ ಬಿತ್ತರಿಯೊಬ್ಬಳು ಸಿಕ್ಕಿದ್ದಾಳೆ ಇಬ್ಬರೂ ಸೇರಿ ಆ ಜೋಷಿ ಸಂಗಡ ಚಕ್ಕಂದವಾಡುತ್ತಿದ್ದರು ಎಂತ ಕಾಣುತ್ತೆ ಹೊತ್ತು ಹೋದದ್ದು ಹೇಗೆ ಗೊತ್ತಾಗಬೇಕು ? ಸರಿಯಾಗಿದ್ದಾರೆ ಅವನಿಗೆ, ಒಬ್ಬಳು ಶ್ರೀದೇವಿ, ಇನ್ನೊಬ್ಬಳು ಮೂದೇವಿ. ಆ ಮುದಿ ಮುಂಡೇದಕ್ಕೆ ಇಬ್ಬರು ಗೆಳತಿಯರು! ನಾನು ಗಂಡಸಾಗಿದ್ದರೆ ಒಂದು ದಿನ ಕಛೇರಿಗೆ ಹೋಗಿ ಚೆನ್ನಾಗಿ ಪೂಜೆ ಮಾಡಿ ಬರುತ್ತಿದ್ದೆ "

ಲತಾಂಗಿಗೆ ಇನ್ನು ಸಹಿಸುವುದು ಸಾಧ್ಯವಾಗಲಿಲ್ಲ. ಕೊಟಡಿಯಿಂದೆದ್ದು ಬಂದು ನಡುಮನೆಯಲ್ಲಿ ನಿಂತು ಹೇಳಿದಳು

"ನೀನು ನನ್ನನ್ನು ಬೇಕಾದ ಹಾಗೆ ಅನ್ನು ಅಮ್ಮ. ನಿನ್ನ ಮಗಳಾಗಿ ಹುಟ್ಟಿದ್ದಕ್ಕೆ ಸುಮ್ಮನೆ ಸಹಿಸುತ್ತೇನೆ. ಆದರೆ ಜೋಷಿಯವರು ನಿನಗೇನು

ಅಪಕಾರ ಮಾಡಿದರು ? ಅವರನ್ನು ಬೈದರೆ ನಾನು ಸಹಿಸಲಾರೆ"

"ಅವನು ಮಾಡಿದ ಅಪರಾಧವೇ ? ನಿನಗೆ ಕೆಲಸ ಕೊಟ್ಟು ಹಾಳು ಮಾಡಿದ"

"ಅದಕ್ಕಾಗಿ ಅವರನ್ನೇಕೆ ದೂರುವೆ ? ಷರೀಫ್ ಮನೆಗೆ ಹೆಜ್ಜೆಯಿಟ್ಟಾಗಲೇ ಸಂಸಾರ ಹಾಳಾಯಿತು !"

ಎಂದು ಹೇಳಿ ಲತಾ ಮಾತು ಬೆಳೆಸಲು ಅನಿಚ್ಛೆಯಿಂದ ಕೊಟಡಿಯ ಕಡೆಗೆ ಹೊರಟಳು ರತ್ನಮ್ಮ ಅಷ್ಟಕ್ಕೆ ಬಿಡಲಿಲ್ಲ 'ನಿಂತು ಮಾತಾಡೆ ಮೂಳಿ ! ಯಾರಿಂದ ಹಾಳಾಯಿತು ನಿನ್ನ ಸಂಸಾರ ? ಈ ಚಂದೊಳ್ಳಿ ಮುಖಕ್ಕೆ ಐನೂರು ರೂಪಾಯಿ ಸಾಲವೆ ? ಷರೀಫನ ಇಚ್ಛೆಯಂತೆ ನಡೆದಿದ್ದರೆ ನೀನೂ ಉದ್ಧಾರವಾಗುತ್ತಿದ್ದೆ ನಿನ್ನ ಗಂಡನೂ ಉದ್ಧಾರವಾಗುತ್ತಿದ್ದ"— ಎಂದಳು

ತಾಯಿಯ ಮಾತು ಕೇಳಿ ಲತಾಂಗಿ ಕುಪಿತ ಫಣಿನಿಯಾಗಿ ತಿರುಗಿ ನಿಂತು ನುಡಿದಳ. "ಕುಲಕ್ಕೆ ತಕ್ಕಂತೆ ಮಾತಾಡಿದೆ ಅಮ್ಮ ನನಗೆ ಅಂತಹ ಸಂಪಾದನೆ ಬೇಕಾಗಿಲ್ಲ ಜನ ಮೆಚ್ಚಿದರೆ ಮೆಚ್ಚಲಿ. ಮೆಚ್ಚದಿದ್ದರೆ ಬಿಡಲಿ. ದೇಹ ಪರಿಶ್ರಮದಿಂದ ದುಡಿದು ತಿನ್ನುತ್ತೇನೆ"

"ನಿನ್ನ ಪರಿಶ್ರಮ ನಾನು ಕಾಣೆನೆ ? ನೂರು ರೂಪಾಯಿ ಸಂಬಳಕ್ಕೆ ಹಗಲು ರಾತ್ರಿ ಜೋಷಿಯ ಸೂಳೆಯಾಗಿ ದುಡಿಯುವುದೇ ನಿನ್ನ ಪರಿಶ್ರಮ"

"ಇದುವರೆಗೆ ದುಡಿಯಲಿಲ್ಲ ಮುಂದೆ ಖಂಡಿತನಾಗಿ ಹಾಗೆಯೇ ಮಾಡುತ್ತೇನೆ"

ಎಂದು ಹೇಳಿ ಲತಾ ಮನೆಯಿಂದ ಹೊರಬಿದ್ದಳು ತಾಯಿಯಾಗಲಿ ಪತಿಯಾಗಲಿ ಅವಳನ್ನು ತಡೆಯಲಿಲ್ಲ ನೇರವಾಗಿ ಅವಳು ಪದ್ಮಳ ಮನೆಗೆ ಹೋದಳು ಪದ್ಮಾ ಮನೆಯಲ್ಲಿರಲಿಲ್ಲ. "ಈಗತಾನೆ ಜೋಷಿ ಸಂಗಡ ಹೋದಳು ನಿನಗೆ ಹಿಡಿಯಬೇಕಾಗಿದ್ದ ಶನಿ ಅವಳನ್ನು ಹಿಡಿದಿದೆ" ಎಂದು ಪದ್ಮಳ ತಾಯಿ ವ್ಯಂಗ್ಯವಾಗಿ ಉತ್ತರ ಕೊಟ್ಟಳು ಲತಾಂಗಿಗೆ ಒಳಗೆ ಹೋಗಲು ಇಚ್ಛೆಯಾಗಲಿಲ್ಲ ಏನು ಮಾಡಬೇಕೆಂದು ತೋಚದೆ ಬಸ್ ನಿಲ್ದಾಣದ ಕಡೆ ಹೋದಳು ಎಲ್ಲಿಯೋ ಗಡಿಯಾರದಲ್ಲಿ ಎಂಟು ಗಂಟೆ ಹೊಡೆಯಿತು. ಬಸ್ ಸಿದ್ಧವಾಗಿ ನಿಂತಿತ್ತು. ತದೇಕ ಚಿತ್ತಳಾಗಿ ಬಸ್

ಹತ್ತಿದಳು

ಕಂಡಕ್ಟರ್ ಟಿಕೆಟ್ ಕೇಳಿದ ಮೇಲೆ ಅವಳಿಗೆ ಎಚ್ಚರವಾಯಿತು. "ಪರ್ಸ್ ತಂದಿಲ್ಲ, ಇಳಿದುಬಿಡುತ್ತೇನೆ" ಎಂದಳು

ಕಂಡಕ್ಟರ್ ಪರಿಚಯಸ್ಥ, ಪ್ರತಿದಿನ ಲತಾಂಗಿ ಆ ಬಸ್ಸಿನಲ್ಲಿ ಹೋಗಿ ಬರುತಿದ್ದದ್ದು ಅವನಿಗೆ ತಿಳಿದಿತ್ತು "ದುಡ್ಡು ನಾಳೆಕೊಡಿ ಅಮ್ಮ, ಟಿಕೆಟ್ ತೆಗೆದುಕೊಳ್ಳಿ" ಎಂದು ಹೇಳಿ "ವಿಶ್ವಮಿತ್ರ" ಕಛೇರಿಯಿದ್ದ ಸ್ಥಳಕ್ಕೆ ಬೇಕಾದ ಟಿಕೆಟ್ ಹರಿದುಕೊಟ್ಟ ಅಲ್ಲಿಗೆ ಬಂದ ಕೂಡಲೆ ಲತಾ ಬಸ್ಸಿಂದ ಇಳಿದು ಸಂಪಾದಕ ಕಛೇರಿಗೆ ಹೋದಳು ಕೆಲಸಮಾಡುತ್ತಿದ್ದ ರಾತ್ರಿ ಸರದಿಯ ಉಪಸಂಪಾದಕರು ಅವಳನ್ನು ನೋಡಿ ಆಶ್ಚರ್ಯ ಚಕಿತರಾಗಿ "ಇದೇನು ಇಷ್ಟು ಹೊತ್ತಿನಲ್ಲಿ ಬಂದಿರಿ?" ಎಂದು ಕೇಳಿದರು

"ಚಿತ್ರ ನೋಡಲು ಬಂದಿದ್ದೆ ಚೆನ್ನಾಗಿಲ್ಲದ್ದರಿಂದ ಮಧ್ಯದಲ್ಲಿ ಹೊರಗೆ ಬಂದೆ" ಎಂದು ಹೇಳಿ ಅವಳು ಸ್ವಲ್ಪ ಹೊತ್ತು ಅಲ್ಲಿ ಕುಳಿತಿದ್ದು ಬಸ್ಸಲ್ಲಿ ಹೋಗುವುದಾಗಿ ಹೇಳಿ ಹೊರಗೆ ಬಂದಳು ಅಟೆಂಡರ್ ಎಲ್ಲಿಗೋ ಹೋಗಿದ್ದ ಲತಾ ಕೆಳಗಿಳಿಯುವ ಪ್ರತಿಯಾಗಿ ಮೂರನೆಯ ಅಂತಸ್ತಿನ ಮೆಟ್ಟಲು ಹತ್ತಿ ಜೋಷಿಯ ಬಿಡಾರಕ್ಕೆ ಹೋದಳು ಅಲ್ಲಿ ಯಾರೂ ಇರಲಿಲ್ಲ ವರಾಂಡದಲ್ಲಿ ದೀಪ ಮಾತ್ರ ಉರಿಯುತಿತ್ತು ಲತಾ ನಡುಮನೆಯನ್ನು ಪ್ರವೇಶಿಸಿ ಕ್ಷಣಕಾಲ ಯೋಚಿಸುತ್ತ ನಿಂತಳು ಅನಂತರ ಮಲಗುವ ಕೋಣೆಗೆ ಹೋದಳು ಮಂಚದ ಮೇಲೆ ಹರಡಿದ್ದ ಹಾಸಿಗೆ ದಿಂಬುಗಳು ಅವಳನ್ನು ವಿಶ್ರಾಂತಿಗಾಗಿ ಆಹ್ವಾನಿಸುವಂತಿದ್ದವು. ಲತಾ ಹಾಸಿಗೆಯ ಮೇಲೆ ಕುಸಿದು ಬಿದ್ದು ಬಳಲಿದ ದೇಹವನ್ನು ರಗ್ಗಿಂದ ಮುಚ್ಚಿಕೊಂಡಳು ಕೂಡಲೇ ನಿದ್ದೆ ಬಂತು

ಲತಾಂಗಿಗೆ ಪುನಃ ಎಚ್ಚರವಾದಾಗ ನಡುಮನೆಯಲ್ಲಿ ದೀಪ ಉರಿಯುತ್ತಿತ್ತು. ಜೋಷಿ ಮೇಜಿನ ಮುಂದೆ ನಿಂತಿದ್ದ ಹಠಾತ್ತಾಗಿ ತಾನೆಲ್ಲಿರುವೆನೆಂಬುದರ ಅರಿವಾಗಿ ಚಕಿತೆಯಾದಳು ಜೋಷಿ ಮಲಗುವ ಕೋಣೆಗೆ ಬಂದಾಗ ಅವಳ ದೇಹ ರೋಮಾಂಚಿತವಾಯಿತು. ತಲ್ಪದ ಮೇಲೆ ತನ್ನನ್ನು ನೋಡಿದಾಗ ಅವನೇನು ಹೇಳುವನೋ ಎಂದು ಉದ್ವಿಗ್ನೆಯಾದಳು. ಎದೆ ಹಾರಿತು. ಕೈಕಾಲುಗಳು ನಡುಗಿದವು. ಕಣ್ಣುಗಳಲ್ಲಿ ಮಾತ್ರ ಕಾತರ ರಹಿತ

ವಾದ ಕಾಮನೆಯ ಜ್ವಲಂತ ದೃಷ್ಟಿ ಮಿಂಚಿನಂತೆ ಹೊಳೆಯುತ್ತಿತ್ತು.

ದೀಪ ಹೊತ್ತಿಸಿ ಜೋಷಿ ಲತಾಂಗಿಯನ್ನು ನೋಡಿದಾಗ ಅವನ ಬಾಯಿಂದ ಒಂದೇ ಒಂದು ಮಾತು ಹೊರಟಿತು.

" ಲತಾ ! ನೀನಿಲ್ಲಿ !"

—೬—

ಭಾವಾವೇಶ ಅತ್ಯುನ್ನತಾವಸ್ಥೆಗೇರಿದಾಗ ಕ್ಷಣವೊಂದು ಯುಗವಾಗುವುದು ಯುಗವೊಂದು ಕ್ಷಣವಾಗುವುದು ಆ ಇರುಳಲ್ಲಿ ಏಕಾಂತ ಗೃಹದಲ್ಲಿ ಬೇಟಿಯಾದ ಆ ಸ್ತ್ರೀ ಪುರುಷರಿಗೆ ಹಾಗಾಯಿತು ಒಂದು ಕ್ಷಣದಲ್ಲಿ ಅವರ ಅಂತರಂಗಗಳು ಯುಗ ಯುಗಾಂತರಗಳನ್ನು ಕಳೆದಂತೆ ಅವರು ತಿಳಿದರು. ವಯಸ್ಸು, ಜನ್ಮ, ಸಂಸ್ಕೃತಿ, ಕುಲ, ಗೋತ್ರ, ಹೆಸರು, ರೂಪ ಈ ಎಲ್ಲ ಬಂಧನಗಳನ್ನೂ ದಾಟಿ ಅವರ ಆತ್ಮಗಳು ಭೂತ ಭವಿಷ್ಯ ವರ್ತಮಾನಗಳಿಗೆ ಅತೀತವಾದ ಅನಂತದಲ್ಲಿ ಸಮ್ಮಿಳಿತವಾದವು ಆ ಕ್ಷಣದಲ್ಲಿ ಅವರು ತಿಳಿದರು, ಜನ್ಮ ಜನ್ಮಾಂತರಗಳಿಂದ ಸಮ್ಮಿಳನಕ್ಕಾಗಿ ಅರಸುತ್ತಿರುವ ಒಂದೇ ಜೀವಾತ್ಮದ ಎರಡು ಅಂಶಗಳು ತಾವೆಂದು."

ಪ್ರತಿಕ್ಷಣದಲ್ಲಿ ಆವೇಶ ಭಂಗವಾಯಿತು ಆಲಿಂಗನದಿಂದ ಬಿಡಿಸಿಕೊಂಡು ಪಾರ್ಶ್ವದಲ್ಲಿ ಕುಳಿತು ಕದಪುಗಳನ್ನು ಸವರುತ್ತಾ ಜೋಷಿ ಹೇಳಿದ.

" ಇಷ್ಟು ಹೊತ್ತಿನಲ್ಲಿ ನೀನಿಲ್ಲೇಕೆ ಬಂದೆ ಲತಾ ?"

" ನಾನು ಬಂದಾಗ ಸುಮಾರು ಒಂಭತ್ತು ಗಂಟೆ. ನೀವಿರಲಿಲ್ಲ. ನಿಮ್ಮ ಹಾಸಿಗೆಯ ಮೇಲೆ ಮಲಗಿದೆ ಅದಕ್ಕಾಗಿ ನಿಮಗೆ ಅಸಮಾಧಾನವಿಲ್ಲ ತಾನೆ ?"

ಜೋಷಿ ಅದಕ್ಕೆ ಕೊಡಬಹುದಾಗಿದ್ದ ಉತ್ತರವೊಂದೇ ಪ್ರಣಯಿಗಳಿಗೆ ಆ ಸಮಯ ಸಂದರ್ಭಗಳಲ್ಲಿ ಸಮುಚಿತವಾದ ಆ ಉತ್ತರ ಕೊಡಲು ಪದ್ಮಳಿಗೆ ಕೊಟ್ಟಿದ್ದ ಅಭಿವಚನ ಅಡಚನೆಯಾಯಿತು

" ಯಾವುದಕ್ಕಾಗಿ ನನಗೆ ಅಸಮಾಧಾನ ! ಈಗ ಹೇಗಿದ್ದೀಯೆ ? ಮನೆಯಲ್ಲಿ ಏನಾದರೂ ನಡೆಯಿತೇ ?"—ಎಂದು ಕೇಳಿದ.

"ಅದು ನನ್ನ ಪಾಲಿಗೆ ಮನೆಯಲ್ಲ, ನರಕ. ನೀವು ನನ್ನನ್ನು ಆ ನರಕದಿಂದ ಉದ್ಧಾರ ಮಾಡದೆ ಹೋದರೆ ಖಂಡಿತವಾಗಿ ನಾನು ಉಳಿಯುವುದಿಲ್ಲ"

ಎಂದು ಲತಾ ಮನೆಯಲ್ಲಿ ನಡೆದುದನ್ನು ವಿವರಿಸಿದಳು ಜೋಷಿ ಕ್ಷಣಕಾಲ ಯೋಚಿಸಿ ಹೇಳಿದನು "ನಿನ್ನದು ಬಹಳ ತೊಡಕಿನ ಸಮಸ್ಯೆ ಲತಾ ಗಂಡನನ್ನು ಬಿಟ್ಟು, ತಾಯಿಯ ಸಹಾಯವಿಲ್ಲದೆ ನೀನು ಪ್ರತ್ಯೇಕ ಸಂಸಾರ ಹೂಡುವುದು ಸಾಧ್ಯವೇ ಎಂಬುದನ್ನು ಯೋಚಿಸು"

"ನಿಮ್ಮ ಸಹಾಯವಿದ್ದರೆ ಸಾಧ್ಯ"

"ಜನರೇನು ಹೇಳುವರು?"

"ಈಗ ನನ್ನ ತಾಯಿ ಹೇಳುತ್ತಿರುವುದಕ್ಕಿಂತ ಹೆಚ್ಚಿಗೇನನ್ನೂ ಹೇಳಲಾರರು ನೀವು ಪದ್ಮಳಿಗೆ ಆಶ್ರಯಕೊಟ್ಟದ್ದೀರಿ ನನಗೂ ಆಶ್ರಯ ಕೊಡಿ ನಿಮಗಾಗಿ ನಾನು ಜಗತ್ತನ್ನು ಎದುರಿಸಲು ಸಿದ್ಧಳಾಗಿದ್ದೇನೆ"

"ನಿನ್ನ ಪತಿ ಮೊಕದ್ದಮೆ ಹೂಡಿದರೆ?"

"ಕೋರ್ಟಿನಲ್ಲಿ ಹೇಳುತ್ತೇನೆ— ಅಂತಹ ಅಪ್ರಯೋಜಕನ ಪತ್ನಿಯಾಗಿರುವುದಕ್ಕಿಂತ ನಿಮ್ಮಂತಹವರ ಸೂಳೆಯಾಗಿರುವುದು ಮೇಲೆಂದು"

ಲತಾ ಹೇಳಿದನ್ನು ಕೇಳಿ ಜೋಷಿ ಸ್ತಬ್ಧನಾದ ಲತಾಂಗಿ ಉನ್ಮತ್ತೆಯಲ್ಲವೆಂದೂ, ಹೃದಯದ ವಾಸ್ತವ ನಿರ್ಧಾರವನ್ನು ಬಿಚ್ಚಿ ಹೇಳುತ್ತಿರುವಳೆಂದೂ ಅವನು ತಿಳಿಯಲು ಕೆಲವು ಕ್ಷಣಗಳಾದವು ಬಳಿಕ ಹೇಳಿದನು

"ನಿನ್ನ ಮಾತು ಉನ್ಮತ್ತಾಲಾಪ, ಲತಾ. ಪದ್ಮಾ ಅವಿವಾಹಿತೆ. ಅಪೇಕ್ಷಿಸಿದರೆ ನಾವು ವಿವಾಹವಾಗಬಹುದು ನಿನಗೆ ಮದುವೆಯಾದ ಗಂಡನಿದ್ದಾನೆ ಶಾಸನ ರೀತ್ಯಾ ವಿವಾಹ ವಿಚ್ಛೇದವಾಗುವವರೆಗೆ ನೀನು ನನಗೆ ಅಗ್ರಾಹ್ಯೆ ಪ್ರೇಮವಶನಾಗಿ ನಾನು ನಿನ್ನನ್ನು ಪರಿಗ್ರಹಿಸಿದರೆ ಸಮಾಜದಲ್ಲಿ ನಮ್ಮ ಅಧಃಪತನ ಸಿದ ವಾದಂತೆಯೇ."

"ನಾನೂ ಪದ್ಮಳಂತೆ ಅವಿವಾತೆಯಾಗಿದ್ದಿದ್ದರೆ ನೀವು ಈ ರೀತಿ ಹೇಳುತ್ತಿದ್ದಿರಾ?"

"ಆಗ ನಮ್ಮಿಬ್ಬರ ಮನಸ್ಸಿನಲ್ಲಿರುವ ಅಂತರ ಪ್ರೇಮಕ್ಕೆ ಅಡಚಣೆಯಾಗುತ್ತಿದ್ದಿತೋ ಏನೋ?"

"ಮತ್ತೊಂದು ಮಾತು ಈಗ ನನ್ನನ್ನು ಅಗ್ರಾಹ್ಯೆಯೆಂದು ನಿರಾಕರಿಸುವ ನೀವು ಬೃಂದಾವನದಲ್ಲಿ ನನ್ನನ್ನು ಅಪೇಕ್ಷಿಸಿದ್ದೇಕೆ ?"

"ನೀನು ಬುದ್ಧಿವಂತೆ ಲತಾ ಅದರ ಕಾರಣವನ್ನು ನೀನೇ ಯೋಚಿಸಿ ತಿಳಿದುಕೊಳ್ಳಲಾರೆಯಾ ?"

"ನನಗೆ ತಿಳಿದಿದ್ದರೆ ನಿಮ್ಮನ್ನು ಕೇಳುತ್ತಿದ್ದೆನೆ ?"

"ಆಗ ನೀನು ನನಗೆ ಅಪರಿಚಿತೆ ದೀಪಕ್ಕೆರಗುವ ಪತಂಗದಂತೆ ನಿನ್ನ ರೂಪ ಜ್ವಾಲೆ ನನ್ನನ್ನಾಕರ್ಷಿಸಿತು ಕಾಮತೃಪ್ತಿಯ ಹೊರತಾಗಿ ಆಗ ನನಗೆ ಮತ್ತಾವ ಉದ್ದೇಶವೂ ಇರಲಿಲ್ಲ ಆಮೇಲೆ ನಿನ್ನ ಪರಿಚಯವಾಯಿತು ನಿನ್ನ ಆತ್ಮ ನಿನ್ನ ದೇಹದಷ್ಟೇ ಸುಂದರವೆಂಬುದನ್ನು ತಿಳಿದುಕೊಂಡೆ ಈಗ ನಿನ್ನನ್ನು ನಾನು ಆತ್ಮೀಯಳಂತೆ ಪ್ರೀತಿಸುತ್ತೇನೆ ನಿನ್ನ ಸಹಚರ್ಯದಿಂದ ನನ್ನ ಮನಸ್ಸಿಗೆ ಶಾಂತಿ ದೊರಕಿದೆ ಆತ್ಮ ಆತ್ಮಗಳ ಮಿಳನ ಸಮೀಪಿಸಿದೆ ಕ್ಷಣಿಕವಾದ ಪೈಹಿಕ ಸುಖಕ್ಕಾಗಿ ನಮ್ಮ ಗೆಳೆತನದ ಪವಿತ್ರತೆ ನಾಶವಾಗುವುದು ನನಗಿಷ್ಟವಿಲ್ಲ"

ತನ್ನ ಮಾತುಗಳ ಅಂತರಿಕ ಅಸತ್ಯ, ಜೋಷಿಯ ಮನಸ್ಸನ್ನು ಚುಚ್ಚುತ್ತಿತ್ತು ಆದರೂ ಅವನು ದಕ್ಷನಾದ ನಟನಂತೆ ಆ ಸಂದರ್ಭದಲ್ಲಿ ತಾನು ಯಾವ ರೀತಿ ನಡೆಯಬೇಕೆಂಬುದನ್ನು ನಿರ್ಧರಿಸಿಕೊಂಡು ಪಾತ್ರಾನುಗುಣವಾಗಿ ಮಾತಾಡಿದ ಪತಿದ್ವೇಷ, ತಾಯಿಯ ಮೇಲಿನ ಕೋಪ ಈ ಎರಡು ವಿಷಗಳಿಂದ ಉದ್ವೇಲಿತೆಯಾಗಿದ್ದ ಲತಾ ಅವನ ಮಾತಿನ ಕೃತಕತೆಯನ್ನು ಅರಿತುಕೊಳ್ಳಲು ಅಸಮರ್ಥೆಯಾದಳು. ಅಭಿಲಾಷೆ ವಿಫಲವಾಯಿತೆಂಬ ಚಿಂತೆಯೊಂದು ಕಡೆ ಅವಳನ್ನು ಭಾದಿಸುತ್ತಿತ್ತು "ಹಾಗಾದರೆ ನಾನು ಈಗಲೆ ಇಲ್ಲಿಂದ ಹೋಗುತ್ತೇನೆ ದಯಮಾಡಿ ನನಗೊಂದು ಗಾಡಿ ತರಿಸಿ ಕೊಡಿ" ಎಂದು ಅವಳು ಜೋಷಿಗೆ ಹೇಳಿದಳು.

"ಈಗ ೧ ಗಂಟೆ ಇಷ್ಟುಹೊತ್ತಿನಲ್ಲಿ ನೀನು ಎಲ್ಲಿಗೆ ಹೋಗುವೆ ? ನೀನು ಇಲ್ಲೇ ವಿಶ್ರಮಿಸಿಕೋ ನಾನು ಕೆಳಗೆ ಕಛೇರಿಯಲ್ಲಿ ಮಲಗುತ್ತೇನೆ ಬೆಳಕು ಹರಿದಮೇಲೆ ಏನು ಮಾಡಬೇಕೆಂಬುದನ್ನು ನಿರ್ಧರಿಸೋಣ"

"ನಿಮ್ಮಿಂದ ಪರಿತ್ಯಕ್ತೆಯಾಗಿ ನಾನಿಲ್ಲಿ ಒಂದು ಕ್ಷಣವೂ ಇರಲಾರೆ"

ಲತಾಂಗಿಯ ದೃಢ ನಿರ್ಧಾರ ಜೋಷಿಯ ಮನಸ್ಸನ್ನು ಚಲಿಸಿತು

ಅನುನಯದ ದನಿಯಿಂದ ಅವನು ಹೇಳಿದನು

"ನೀನು ನನ್ನಿಂದ ಪರಿತ್ಯಕ್ತೆಯಲ್ಲ, ಲತಾ ನಿನಗಾಗಿ ಏನು ಬೇಕಾದರೂ ಮಾಡಲು ನಾನು ಸಿದ್ಧನಾಗಿದ್ದೇನೆ ಪಾರ್ವತಿಗೆ ಅರ್ಧ ದೇಹ ಕೊಟ್ಟ ಶಂಕರನು ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿದಂತೆ ನಾನೂ ನಿನ್ನನ್ನು ಧರಿಸುತ್ತೇನೆ ಪದ್ಮಾ ನನಗೆ ಅರ್ಧಾಂಗಿನಿಯಾದರೆ ನೀನು ನನಗೆ ಶಿರೋಧಾರ್ಯೆ ಆದರೆ ಒಂದು ದಿನದ ಅಚಾತುರ್ಯದಿಂದ ಲೋಕದ ದೃಷ್ಟಿಯಲ್ಲಿ ನಮ್ಮ ಸಂಬಂಧ ಕಲುಷಿತವಾಗುವುದು ಬೇಡ ನಾನು ಕೆಳಗೆ ಹೋಗಿ ಪುನಃ ಅರ್ಧ ಗಂಟೆಯಲ್ಲಿ ಬರುತ್ತೇನೆ ಅಷ್ಟರಲ್ಲಿ ನಮ್ಮ ಭವಿಷ್ಯ ವನ್ನು ನೀನು ಸಾವಧಾನದಿಂದ ಯೋಚಿಸಿ ನಿರ್ಧರಿಸು"

ಎಂದು ಹೇಳಿ ಜೋಷಿ ಮಲಗುವ ಮನೆಯ ದೀಪ ಆರಿಸಿ, ನಡು ಮನೆಯ ಬಾಗಿಲು ಮುಚ್ಚಿಕೊಂಡು ಕೆಳಗೆ ಹೋದ ಉಪ ಸಂಪಾದಕರು ಕೊನೆಯ flash ಸುದ್ದಿಗಳನ್ನು ಭಾಷಾಂತರಿಸುತ್ತಿದ್ದರು ಅಂದಿನ ಮುಖ್ಯ ವಾರ್ತೆಯೇನು ? ಮೊದಲ ಪುಟದಲ್ಲಿ ಯಾವ ವಾರ್ತೆಗಳನ್ನು ಕೊಡಬೇಕು ಎಂಬುದು ಇನ್ನೂ ನಿರ್ಧರಿಸಲ್ಪಟ್ಟಿರಲಿಲ್ಲ ಜೋಷಿ ಅರ್ಧ ಗಂಟೆ ನ್ಯೂಸ್ ಎಡಿಟರ್ ಸಂಗಡ ಕುಳಿತುಕೊಂಡು ಆ ವಿಚಾರ ಚರ್ಚಿಸಿದ ಅವಕಾಶ ದೊರೆತಾಗಲೆಲ್ಲ ಮೈಸೂರಿನ ಸುದ್ದಿಗಳಿಗೆ ಪ್ರಥಮ ಪುಟದ ಪ್ರಾಮುಖ್ಯತೆ ಕೊಡುವುದು ಅವನ ಉದ್ದೇಶವಾಗಿತ್ತು ಆಗತಾನೆ ಪ್ರಾರಂಭವಾಗಿದ್ದ ಜವಾಬ್ದಾರಿ ಸರ್ಕಾರ ಚಲುವಳಿಯನ್ನು ಕುರಿತು ಮೈಸೂರು ಕಾಂಗ್ರೆಸ್ ಅಧ್ಯಕ್ಷರ ದೀರ್ಘ ಹೇಳಿಕೆಯೊಂದು ಆ ದಿನ ಕೈಸೇರಿತ್ತು ಸರ್ಕಾರದ ಪ್ರತಿಗಾಮಿ ವರ್ತನೆ ಮತ್ತು ನ್ಯಾಯಬಾಹಿರ ದಬ್ಬಾಳಿಕೆಯನ್ನು ಅಧ್ಯಕ್ಷರು ನಿರ್ದಾಕ್ಷಿಣ್ಯವಾಗಿ ಟೀಕಿಸಿದ್ದರು ಹೇಳಿಕೆಯನ್ನು ಒಳಗಿನ ಪುಟಗಳಿಗೆ ಕೊಡುವುದು ನ್ಯೂಸ್ ಎಡಿಟರ ಉದ್ದೇಶವಾಗಿತ್ತು ಮೊದಲಿಂದ ಕೊನೆಯ ವರೆಗೆ ಹೇಳಿಕೆಯನ್ನು ಓದಿ ತಲೆ ಬರಹಗಳನ್ನು ಬದಲಾಯಿಸಿ ಅದಕ್ಕೆ ಮೊದಲ ಪುಟದಲ್ಲಿ ತಂತಿ ವಾರ್ತೆಗಳಷ್ಟೇ ಪ್ರಾಮುಖ್ಯತೆ ಕೊಡಬೇಕಾಗಿ ಜೋಷಿ ಸೂಚಿಸಿದ ನ್ಯೂಸ್ ಎಡಿಟರಿಗೂ ಜೋಷಿಗೂ ಸ್ವಲ್ಪಹೊತ್ತು ಈ ವಿಚಾರವಾಗಿ ಚರ್ಚೆ ನಡೆಯಿತು ಸಂಪಾದಕ ವರ್ಗ ತಮ್ಮ ಅಭಿಪ್ರಾಯ ಗಳನ್ನು ಸ್ಪಷ್ಟವಾಗಿ ತಿಳಿಸಲು ಜೋಷಿ ಅವಕಾಶ ಕೊಡುತ್ತಿದ್ದುದರಿಂದ

ಚರ್ಚೆ ಅವನಿಗೆ ಅನುಚಿತವೆಂದು ಕಾಣಲಿಲ್ಲ ಜನಾಭಿಮತದೊಂದಿಗೆ ಪತ್ರಿಕೆಗಳಿಗಿರಬೇಕಾದ ಅನನ್ಯ ಸಂಬಂಧ, ವಾರ್ತೆಗಳಿಗೆ ಸಮುಚಿತವಾದ ಸ್ಥಾನ ಕೊಡುವುದರಿಂದ ಪತ್ರಿಕೋದ್ಯಮಿ ಈ ಸಂಬಂಧವನ್ನು ಯಾವ ರೀತಿ ರಕ್ಷಿಸಿಕೊಳ್ಳಬೇಕು ಎಂಬ ವಿಚಾರವಾಗಿ ಒಂದು ಸಣ್ಣ ಉಪನ್ಯಾಸವನ್ನೇ ಕೊಟ್ಟ ಕೊನೆಗೆ ನಿರ್ಧರವಾಯಿತು, ವೈಸೂರಿನ ಜನತೆಯ ದೃಷ್ಟಿಯಿಂದ ಅಂದು ಹೊರಬಿದ್ದ ಅಧ್ಯಕ್ಷ ಹೇಳಿಕೆ ದೇಶ ವಿದೇಶಗಳ ತಂತಿ ವಾರ್ತೆಗಳಿಗಿಂತ ಪ್ರಾಮುಖ್ಯವಾದ್ದ ಂದ ಅದಕ್ಕೆ Head line (ತಲೆ ಬರಹ) ಕೊಡಬೇಕೆಂದು. ಅಷ್ಟು ಹೊತ್ತಿಗೆ ಕ್ಯಾಂಟಿನಿನಿಂದ ಕಾಫಿ ಬಂತು ಜೋಷಿ ಕಾಫಿ ಕುಡಿದು, ಉಪ ಸಂಪಾದಕರಿಂದ ಬೀಕ್ಗೊಂಡು ಅಚ್ಚು ಕೂಟಕ್ಕೆ ಇಳಿದು ಹೋದ

## ಒಂಭತ್ತನೆಯ ತರಂಗ

— ೧ —

ಜೋಷಿ ಹೊರಗೆ ಹೋಗುತ್ತಲೆ ಲತಾಂಗಿಯ ಮನಸ್ಸು ಚಿಂತೆಯಲ್ಲಿ ಮುಳುಗಿತು ಮಾನವನ ವ್ಯಕ್ತಿತ್ವ ಬಹುಮುಖವಾದದ್ದೆಂಬುದು ಮನಶ್ಶಾಸ್ತ್ರ ತಜ್ಞರ ಅಭಿಪ್ರಾಯ ಸತ್ವ, ರಜ, ತಮೋಗುಣಗಳು ಎಲ್ಲ ಮಾನವರಲ್ಲಿ ಒಂದೇ ಪ್ರಮಾಣದಲ್ಲಿದ್ದರೂ ಸಮಯ, ಸಂನಿವೇಶ, ಸಂಸ್ಕೃತಿಗಳನ್ನು ಅನುಸರಿಸಿ ಒಂದು ಗುಣ ಪ್ರಧಾನವೂ ಉಳಿದ ಗುಣಗಳು ಗೌಣವೂ ಆಗುತ್ತವೆ. ಪ್ರಧಾನ ಗುಣದ ಅವಲಂಬದಿಂದ ತಾತ್ಕಾಲಿಕವಾಗಿ ಮಾನವ ವ್ಯಕ್ತಿತ್ವ ಸಾತ್ವಿಕ, ರಾಜಸ, ಅಥವಾ ತಾಮಸ ರೂಪ ತಾಳುತ್ತದೆ. ಈ ಪರಿವರ್ತನೆಗೊಳಗಾಗಿ ಮಾನವನು ದೇವತೆಯೂ, ಭೋಗಿಯು ವಿರಕ್ತನೂ, ಸನ್ಯಾಸಿಯು ವಿಷಯ ಲಂಪಟನೂ ಆಗುತ್ತಾರೆ

ಲತಾಂಗಿಯ ಹೃದಯದಲ್ಲಿ ಈ ತ್ರಿಗುಣಗಳ ಮೇಲಾಟವನ್ನು ವಿವರಿಸುವುದು ಈ ಸಂದರ್ಭದಲ್ಲಿ ಅನುಚಿತವಲ್ಲ ತಾಯಿಯ ಕಲುಷಿತ ಆದರ್ಶದ ಫಲವಾಗಿ ಅವಳಲ್ಲಿ ರಾಜಸ ತಾಮಸ ಗುಣಗಳು ಬಾಲ್ಯದಲ್ಲಿಯೇ ಜಾಗರಿತವಾಗಿದ್ದುವು ಕೊಲ್ಲೂರಲ್ಲಿ ಅವಳ ತಾಯಿ ರತ್ನಮ್ಮನಿಗೂ ವಿಠಲರಾಯರಿಗೂ ಪರಿಚಯವಾದಾಗ ಅವಳು ಹತ್ತು ವರ್ಷದ ಬಾಲಿಕೆ ತೆಳುವಾದ ದೇಹದಲ್ಲಿ ಆಗತಾನೆ ಹೆಣ್ತನದ ಲಕ್ಷಣಗಳು ಮೊನೆಯಿಟ್ಟಿತ್ತಾದರೂ ಮನಸ್ಸು ಮಾತ್ರ ಯೌವನೋಚಿತವಾದ ಉದ್ರೇಕಗಳನ್ನು ಬಯಸುತ್ತಿತ್ತು ಬಾಲಿಕೆಯೆಂದು ಸಲಿಗೆಯಿಂದ ವಿಠಲರಾಯರು ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಮುದ್ದಿಸಿದಾಗ ಅವಳು ರೋಮಾಂಚಿತೆಯಾದಳು· ಕೆನ್ನೆಗಳು ಕೆಂಪೇರಿದವು ತುಟಿಗಳು ಸ್ಫುರಿಸಿದವು. ಎದೆ ಹಾರಿತು. ಪ್ರಥಮ ಪ್ರಣಯದ ಎಲ್ಲ ಲಕ್ಷಣಗಳೂ ತಲೆದೋರಿದವು. ಪರಸ್ಪರ ಆಕರ್ಷಣೆ

ಪಲ್ಲಿ ಮಗ್ನರಾಗಿದ್ದ ವಿಠಲರಾಯರಾಗಲಿ ರತ್ನಮ್ಮನಾಗಲಿ ಇದನ್ನು ಗಮನಿಸ ಲಿಲ್ಲ ಗಮನಿಸಿದ್ದರೂ ಬಾಲಿಕಾಸಹಜವಾದ ಲಜ್ಜೆಯೆಂದು ತಿಳಿಯು ತ್ತಿದ್ದರು ಮಂಗಳೂರಿಗೆ ಬಂದಮೇಲೆ ವಿಠಲರಾಯರ ಪಿತೃ ಸದೃಶವಾದ ಮಮತೆ, ಆದರ, ಸದ್ವರ್ತನೆಗಳಿಂದ ಈ ಅಸಹಜ ಪ್ರಣಯ ಅವಳ ಅಂತರಂಗದ ಸುಪ್ತ ಭಾವನೆಗಳಲ್ಲಿ ಅಂತರ್ಧಾನವಾಯಿತು ವಯೋನು ಗುಣವಾಗಿ ಬುದ್ಧಿ ವಿವೇಕಗಳು ಬೆಳೆದಂತೆ ಅವಳ ಮನೋ ದೌರ್ಬಲ್ಯ ಮರೆಯಾಗಿ ಅದರ ಸ್ಥಾನವನ್ನು ತನ್ನ ಅಭಿಲಾಷೆಗೆ ಅಡಚಣೆಯಾಗಿದ್ದ ತಾಯಿಯ ಮೇಲಿನ ದ್ವೇಷ ಭಾವನೆ ಆಕ್ರಮಿಸಿತು ಮಲತಮ್ಮ ಕಮಲಾಕ್ಷನ ಸಂಬಂಧವಾದ ಘಟನೆ ನಡೆದದ್ದು ಈ ಸಂದರ್ಭದಲ್ಲಿ ಆ ಘಟನೆಯಿಂದ ಲತಾಂಗಿಯ ಹೃದಯದಲ್ಲಿ ಒಂದು ನೂತನ ಪರಿವರ್ತನೆ ಉಂಟಾಯಿತು ಅಲ್ಲಿಯವರೆಗೆ ಪ್ರಸುಪ್ತವಾಗಿದ್ದ ಸಾತ್ವಿಕ ಭಾವನೆ ವಿದ್ಯಾಭ್ಯಾಸದ ನೈತಿಕ ಬಲದಿಂದ ಪ್ರಚೋದನ ಪಡೆದು ಕ್ಷಣ ಕಾಲ ಬೆಳಗಿತು ಪುರುಷನ ಆಕರ್ಷಣೆಗೆ ರೂಪ ಕಾರಣವೆಂದು ತಿಳಿದು ಆ ರೂಪನ್ನು ಕೆಡಿಸಿಕೊಳ್ಳಲು ಪ್ರಯತ್ನಿಸಿದಳು. ಪ್ರತಿ ಕ್ಷಣದಲ್ಲಿ ತಾಯಿಯ ಕಾಮುಕ ವರ್ತನೆ ಕಂಡು ಅವಳ ದ್ವೇಷಭಾವನೆ ಇಮ್ಮಡಿಸಿತು ಮನೆಬಿಟ್ಟು ಬೆಂಗಳೂರಿಗೆ ಬಂದಳು. ಮಂಗೇಶನೊಡನೆ ಮದುವೆಯಾಯಿತು

ಮಂಗೇಶ ಓದುಬರಹ ಬಲ್ಲವನಾದರೂ ಸಂಸ್ಕೃತಿಯಿಲ್ಲದ ತರುಣನೆಂಬು ದನ್ನು ವಾಚಕರು ಅರಿತಿದ್ದಾರೆ ಪ್ರದರ್ಶನಕ್ಕೆ ಬಂದ ಮೊದಲ ದಿನವೇ ಹೊಸ ಚಿತ್ರಗಳನ್ನು ನೋಡುವುದು ಅವನ ಆಕಾಂಕ್ಷೆಯ ಪರಾಕಾಷ್ಠೆ ಅದ ಕ್ಕಾಗಿ ಅವನು ಚಿತ್ರಮಂದಿರಗಳ ಮುಂಭಾಗದಲ್ಲಿ ಗಂಟೆಗಟ್ಟಲೆ "ಕ್ಯೂ" ನಿಲ್ಲಲು ಸಿದ್ಧನಾಗಿರುತ್ತಿದ್ದ ಒಂದೊಂದು ದಿನ "ಕ್ಯೂ" ಮುಂದೆ ಸಾಗಿ ಟಿಕೆಟ್ ಸಿಗುವಷ್ಟರಲ್ಲಿ ಅವನು ಹತ್ತಾರು ಸಿಗರೆಟ್ಟುಗಳನ್ನು ಭಸ್ಮಮಾಡಿ ಗೆಳೆ ಯರಲ್ಲಿ "ರಿಕಾರ್ಡ" ಸ್ಥಾಪಿಸಿದ್ದುಂಟು ಹಣಕ್ಕಾಗಿ ಯಾವ ಮಟ್ಟಕ್ಕಾ ದರೂ ಇಳಿಯುವುದು ಅವನ ಅಭ್ಯಾಸ ವರನನ್ನು ನೋಡಿದಾಗ ಲತಾಂಗಿಯ ಹೃದಯದಲ್ಲಿ ಸಂದೇಹದ ನೆರಳು ಕಂಡಿತಾದರೂ ತಾಯಿಯ ಹಿಡಿತದಿಂದ ತಪ್ಪಿಸಿಕೊಳ್ಳಲು ಮದುವೆಗೆ ಒಪ್ಪಿದಳು. ಪತಿಯ ಲೋಪ ದೋಷಗಳನ್ನು ಬುದ್ಧಿ ಚತುರತೆಯಿಂದ ತಿದ್ದಿಕೊಳ್ಳಬಹುದೆಂಬ ಆಸೆಯೂ ಅವಳಿಗಿತ್ತು.

ಆದರೆ ವಿವಾಹದ ರಾತ್ರಿಯೇ ಅವಳ ಆಶಾಭಂಗವಾಯಿತು ಸಂಸ್ಕೃತಿ ಆದರಗಳ ಮಧ್ಯೆ ಬೆಳೆದು, ವಿಲಾಸ ಸೌಜನ್ಯಗಳ ಕೋಮಲ ಭಾವನೆಗಳಿಂದ ಉಜ್ವಲವಾಗಿದ್ದ ಅವಳ ಹೃದಯ ಮಂಗೇಶನ ಪಶುವರ್ತನೆಯಿಂದ ಸಿಡಿದೆದ್ದು ಪುರುಷ ದ್ವೇಷದಲ್ಲಿ ಪರಿಣಮಿಸಿತು ಕೆಲವು ದಿನಗಳೊಳಗಾಗಿ ಪತಿಯೊಡನೆ ಏಕಶಯನದಲ್ಲಿ ಮಲಗಲೂ ಅವಳು ಅಸಂಮತಿಯಾದಳು. ಉಚ್ಚ ಶಿಕ್ಷಣ ಪಡೆದ ವಿದ್ಯಾವತಿಯಾದ ಪತ್ನಿಯ ವಿಚಾರದಲ್ಲಿ ಉದ್ಧಟತನ ತೋರಿಸಿ ಬಲಾತ್ಕಾರದಿಂದ ನಡೆಯುವ ಧೈರ್ಯ ಮಂಗೇಶನಿಗಿರಲಿಲ್ಲ ದಿನ ದಿನಕ್ಕೆ ಪತಿ ಪತ್ನಿಯರ ಮಧ್ಯೆ ವೈಮನಸ್ಯ ಹೆಚ್ಚುತ್ತ ಬಂದಿತು ಲತಾಂಗಿ ಈ ಪರಿಸ್ಥಿತಿಯಲ್ಲಿಯೇ ಮೊದಲ ಸಾರಿ ಮೈಸೂರಿಗೆ ಹೋದದ್ದು ಅಂಬುಜಮ್ಮನ ಮನೆಯಲ್ಲಿ ಜೋಷಿಯ ಪರಿಚಯವಾದದ್ದು

ಜೋಷಿ ವಿಠಲರಾಯರಿಗಿಂತ ವಯಸ್ಸಿನಲ್ಲಿ ನಾಲ್ಕೈದು ವರ್ಷ ಚಿಕ್ಕವನಾಗಿದ್ದರೂ ರೂಪ, ಆಕಾರ, ವೇಷಭೂಷಣಗಳಲ್ಲಿ ಒಂದು ಬಗೆಯ ಸಾಮ್ಯವಿದ್ದಿತು ಲತಾಂಗಿ ಜೋಷಿಯ ಕಡೆಗೆ ಆಕರ್ಷಿಸಲ್ಪಟ್ಟದ್ದು ಈ ಸಾಮ್ಯದಿಂದಲೇ ಎಂಬುದನ್ನು ವಾಚಕರು ಅರಿತಿದ್ದಾರೆ ಅಲ್ಲಿಯವರೆಗೆ ಪ್ರಸುಪ್ತವಾಗಿದ್ದ ಅವಳ ಬಾಲ್ಯ ಪ್ರಣಯ ಜೋಷಿಯನ್ನು ಕಂಡಾಗ ಪುನಃ ಜಾಗರಿತವಾಯಿತು ತನಗೆ ಅಗೋಚರವಾಗಿ ಅವಳು ಜೋಷಿಯ ಸಾಮೀಪ್ಯ ಸಹವಾಸಗಳಿಗಾಗಿ ಕಾತರಗೊಂಡಳು ಆದರೆ ಪ್ರೇಮದೊಡನೆ ಗೌರವವೂ ಇದ್ದುದರಿಂದ ಇಬ್ಬರ ಸಂಬಂಧದಲ್ಲಿ ಕಾಮಕ್ಕಿಂತ ಸೌಜನ್ಯ ಸಹೃದಯತೆಗಳು ಹೆಚ್ಚು ಪ್ರಕಾಶಕ್ಕೆ ಬಂದವು ಕ್ರಮ ಕ್ರಮವಾಗಿ ಅವಳು ಜೋಷಿಯನ್ನು ಆಶ್ರಯಧಾತನಾದ ಸ್ನೇಹಿತನೆಂದು ಭಾವಿಸತೊಡಗಿದಳು.

ಮಂಗಳೂರಿಂದ ಹಿಂದಿರುಗಿದ ಮೇಲೆ ಪದ್ಮಾ ಮತ್ತು ಜೋಷಿಯ ಮಧ್ಯೆ ಬೆಳೆದಿದ್ದ ಸ್ನೇಹವನ್ನು ಕಂಡಾಗ ಲತಾಂಗಿಯ ಮನಸ್ಸು ವಿಚಲಿತವಾಗದಿದ್ದುದರ ಕಾರಣ ಅವಳ ಸ್ನೇಹ ಭಾವನೆಯೇ ವಿಠಲರಾಯರ ಪ್ರಣಯಕ್ಕಾಗಿ ತಾಯಿಯ ಸಂಗಡ ಸ್ಪರ್ಧಿಸಲು ಅವಳ ಹೃದಯ ಹಿಂಜರಿದಂತೆ ಈಗ ಪದ್ಮಳ ಮೇಲೆ ಅಸೂಯೆಗೊಳ್ಳಲು ಹಿಂದೆಗೆಯಿತು. ಅಸೂಯೆ 'ಸ್ಪರ್ಧೆಗಳು ದುಃಖದ ಕಾರಣವೆಂದು ತಿಳಿದು ಅವಳು ಜೋಷಿಯ ಪ್ರಣಯದಲ್ಲಿ ಪದ್ಮಳೊಡನೆ ಸಮ ಭಾಗಿನಿಯಾಗಲು ಸಿದ್ಧವಾದಳು.

ಮನಸ್ಸು ಈ ಪರಿಸ್ಥಿತಿಯಲ್ಲಿದ್ದಾಗ ಅವಳು ಮನೆಬಿಟ್ಟದ್ದು ಅಲ್ಲಿಂದ ಅವಳು ನೇರವಾಗಿ ಜೋಷಿಯ ಬಿಡಾರಕ್ಕೆ ಬಂದು ಅವನ ತಲ್ಪದಲ್ಲಿ ಸ್ವಲ್ಪ ಕಾಲ ವಿಶ್ರಮಿಸಿ ಕೊಂಡಿದ್ದಳು ಸ್ತ್ರೀ ಸಹಜವಾದ ದೈಹಿಕ ಪರಿವರ್ತನೆಯ ಪರಿಣಾಮವಾಗಿ ಆಗ ಅವಳ ಅಂತಃಕರಣದಲ್ಲಿ ರಜೋಂಶದಿಂದ ಪ್ರಚೋದನೆ ಪಡೆದ ತಾಮಸ ಕಳೆ ಎದ್ದು ನಿಂತಿತು ಅದರ ಪ್ರಾಚೀನ ಮತ್ತು ನವೀನ ರೂಪಗಳು ಪರಸ್ಪರ ಮೇಲಾಟಕ್ಕಾಗಿ ವಾದ ಹೂಡಿದ್ದವು

ಪ್ರಾಚೀನೆ ಹೇಳಿದಳು ನೀನು ಜೋಷಿಯನ್ನು ಬಯಸಿ ಅವನಿಂದ ನಿರಾಕರಿಸಲ್ಪಟ್ಟು ಅಪಮಾನಿತೆಯಾದೆ ಈಗ ದೈಹಿಕ ಮಾಯೆಯಿಂದ ಅವನನ್ನು ವಶಪಡಿಸಿಕೊಂಡು ಅಪಮಾನದ ಪ್ರತಿಶೋಧ ಮಾಡು ನೀನು ರೂಪವತಿ, ಯೌವನವತಿ ನಿನ್ನ ಮೋಹ ಜ್ವಾಲೆಯಲ್ಲಿ ಅವನು ಪತಂಗದಂತೆ ನಾಶವಾಗಲಿ.

ನವೀನೆ ಹೇಳಿದಳು ನಾನು ವೇಶ್ಯೆಯಲ್ಲ ವಿವಾಹಿತೆ ವಿದ್ಯಾ ಸಂಸ್ಕೃತಿಗಳಲ್ಲಿ ಬೆಳೆದವಳು ಜೋಷಿ ನನಗೆ ಆಶ್ರಯ ಕೊಟ್ಟಿದ್ದಾರೆ. ಗೌರವ ವಿಶ್ವಾಸಗಳಿಂದ ನಡೆಸಿಕೊಂಡಿದ್ದಾರೆ ಅದರ ಪ್ರತಿಯಾಗಿ ನಾನು ಅವರನ್ನು ನಾಶ ಮಾಡಲೆ !

ಪ್ರಾಚೀನೆ ಯಾರು ಹೇಳಿದರು ನೀನು ವೇಶ್ಯೆಯಲ್ಲವೆಂದು ? ನೀನು ವೇಶ್ಯೆಯ ಮಗಳು ನಿನ್ನ ನರ ನಾಡಿಗಳಲ್ಲಿ ವೈಶಿಕ ಸಂಸ್ಕೃತಿ ಜೀವರಸದಂತೆ ಹರಿಯುತ್ತಿದೆ. ಅದಕ್ಕೆ ನಿನ್ನ ಜನ್ಮ ಮಾತ್ರವೇ ಕಾರಣವಲ್ಲ ಪ್ರತಿಯೊಬ್ಬ ಹೆಂಗಸೂ ಪುರುಷರನ್ನು ಒಲಿಸುವ ವೈಶಿಕ ವಿದ್ಯೆಯನ್ನು ಸಹಜವಾಗಿ ಕಲಿಯುತ್ತಾಳೆ. ಬಹು ಪತಿತ್ವ ಹೆಣ್ಣಿನ ಸಹಜ ಸ್ವಭಾವ ಸುಖ ಭೋಗ ಗಳಿಂದ ಪುರುಷನನ್ನು ತನ್ನವನನ್ನಾಗಿ ಮಾಡಿಕೊಂಡು ಸೃಷ್ಟಿ ಕಾರ್ಯವನ್ನು ಸಾಧಿಸುವುದು ಸ್ತ್ರೀ ಜನ್ಮದ ಉದ್ದೇಶ.

ನವೀನೆ–ನಾನು ಜೋಷಿಯನ್ನು ತಂದೆಯಂತೆ ಪ್ರೀತಿಸುತ್ತೇನೆ. ಗುರು ವಿನಂತೆ ಗೌರವಿಸುತ್ತೇನೆ.

ಪ್ರಾಚೀನೆ—ಸಾಕುಮಾಡು ನಿನ್ನ ನಾಟಕ ! ಲೋಕವನ್ನು ವಂಚಿಸಿ ಈಗ ನಿನ್ನನ್ನೇ ವಂಚಿಸಿಕೊಳ್ಳಲು ಪ್ರಯತ್ನಿಸುತ್ತಿರುವೆ ನೀನು ಜೋಷಿ ಯನ್ನು ಗುರುಸ್ಥಾನದಲ್ಲಿ ಕುಳ್ಳಿರಿಸಿರುವ ಉದ್ದೇಶ ನಾನು ತಿಳಿದಿದ್ದೇನೆ.

ನವೀನೆ—ಏನು ನೀನು ತಿಳಿದಿರುವುದು ?

ಪ್ರಾಚೀನೆ—ಅವರಿಂದ ಸಾಧ್ಯವಿದ್ದಷ್ಟನ್ನು ಕಸಿದುಕೊಂಡು ಪ್ರತಿಯಾಗಿ ಏನನ್ನೂ ಕೊಡದಿರುವುದು ಆ ಉದ್ದೇಶದಿಂದಲೇ ನೀನು ಈ ನಾಟಕ ಹೂಡಿರುವೆ ನಿನ್ನ ವೈಶಿಕ ವೃತ್ತಿ ಇದರಿಂದ ಸ್ಪಷ್ಟವಾಗುವುದು.

ನವೀನೆ—ನೀನು ದುಷ್ಟೆ ! ನಿನ್ನ ಸಂಗಡ ವಾದದಿಂದ ಯಾವ ಉಪಯೋಗವೂ ಇಲ್ಲ.

ಪ್ರಾಚೀನೆ—ಸೋಲನ್ನೊಪ್ಪಿಕೊಂಡು ನಾನು ಹೇಳಿದಂತೆ ಮಾಡು. ಎಲ್ಲವೂ ಸರಿಹೋಗುವುದು

ನವೀನೆ—ಈಗ ನಾನೇನು ಮಾಡಬೇಕು ?

ಪ್ರಾಚೀನೆ—ಬಲೆ ಹರಡಿ ಕಾದು ಕುಳಿತರೆ ಬೇಟೆ ತಾನಾಗಿ ಬಂದು ಬೀಳುವುದು ಕಾಳಿದಾಸ ಮೇಘದೂತದಲ್ಲಿ ಹೇಳಿದ್ದನ್ನು ಮರೆತೆಯಾ ?

ಜ್ಞಾತಾಸ್ವಾದೋ ವಿವೃತಜಘನಾಂ ಕೋ ವಿಹಾತುಂ ಸಮರ್ಥಃ

ನವೀನೆ—ನಿನ್ನ ಸಂಸ್ಕೃತ ನನಗೆ ಅರ್ಥವಾಗುವುದಿಲ್ಲ

ಪ್ರಾಚೀನೆ—ಅರ್ಥವಾಗದೆ ಜೋಷಿಯನ್ನು ಹುಡುಕಿಕೊಂಡು ಬಂದೆಯಲ್ಲವೆ ? ಅವನ ಮನೆಯಲ್ಲಿ ಹಾಸಿಗೆಯಲ್ಲಿ ಮಲಗಿದೆಯಲ್ಲವೇ ? ಪತಿಯನ್ನು ಬಿಟ್ಟು ಅವನ ಸೂಳೆಯಾಗಿರಲು ಒಪ್ಪಿದೆಯಲ್ಲವೇ ?

ನವೀನೆ—ಹೆಣ್ಣು ಅಬಲೆಯೂ ಅವಿದ್ಯಾವತಿಯೂ ಆಗಿರುವವರೆಗೆ ರಕ್ಷಣೆಗಾಗಿ ಪುರುಷರನ್ನು ಒಲಿಸುವುದು ಅಗತ್ಯವಾಗಿತ್ತು ಈಗ ಸ್ತ್ರೀಯರು ವಿದ್ಯಾವತಿಯರು, ಸ್ವತಂತ್ರರು ಈಗ ಅವರಿಗೆ ಸ್ವಂತ ಪರಿಶ್ರಮದಿಂದ ಜೀವನ ನಡೆಸಬಲ್ಲ ಶಕ್ತಿಯಿದೆ. ನಾನು ಗಂಡನನ್ನು ಬಿಟ್ಟು ಸ್ವತಂತ್ರಳಾಗಿ ಜೀವಿಸುತ್ತೇನೆ ಯಾರಿಗೂ ಅಧೀನಳಾಗಿರುವುದಿಲ್ಲ

ಪ್ರಾಚೀನೆ—ಹೆಣ್ಣು ಯಾವಾಗಲೂ ಅಧೀನೆಯಲ್ಲ, ಸ್ವತಂತ್ರೆ. ಪುರುಷರನ್ನು ವಶಪಡಿಸಿಕೊಳ್ಳಲು ಅಧೀನೆಯಂತೆ ನಟಿಸುವುದು ಹೆಣ್ಣಿನ ಕೌಶಲ. ಹೆಣ್ಣು ಹರಿಣದಂತೆ ಓಡಿ ಬೇಟೆಗಾರನನ್ನು ಆಕರ್ಷಿಸುತ್ತಾಳೆ. ನಿಜವಾಗಿ ನೋಡಿದರೆ ಬೇಟೆಯಾಡುವವಳು ಹೆಣ್ಣು, ಬೇಟೆಯಾಡಲ್ಪಡುವ ಪಶು ಗಂಡು. ಪುರುಷ ದೃಷ್ಟಿಯಲ್ಲಿ ಬೇಟೆಯ ಪಶು ಬೇಟೆಗಾರನಂತೆಯೂ, ಬೇಟೆಗಾರನು ಬೇಟೆಯ ಪಶುವಿನಂತೆಯೂ ಕಾಣುವುದು ಹೆಣ್ಣು ಹೆರಡಿರುವ ಮಾಯೆಯ

ಪರಿಣಾಮ ಬುದ್ಧಿವಂತೆಯಾದ ನೀನು ಇದನ್ನು ತಿಳಿದುಕೊಳ್ಳಲಾರೆಯ ?

ನವೀನೆ— ಹಾಗಾದರೆ ನಾನಾಗಿ ಜೋಷಿಯನ್ನು ಕಾಮಿಸಿ ಬಂದೆನೆಂದೇ ನಿನ್ನ ಭಾವನೆ ?

ಪ್ರಾಚೀನೆ— ಬಂದೆಯೋ ಇಲ್ಲವೋ ನೀನೇ ಯೋಚಿಸು. ಮೈಸೂರಲ್ಲಿ ಅಂಬುಜಮ್ಮನ ಮನೆಯಲ್ಲಿ ನಿನ್ನ ಬೇಟಿ ಪ್ರಾರಂಭವಾಯಿತು ಅಂದಿನಿಂದ ನೀನು ಜೋಷಿಯನ್ನು ಬಯಸುತ್ತಿರುವೆ ಅವನನ್ನು ನಿನ್ನವನನ್ನಾಗಿ ಮಾಡಿಕೊಳ್ಳಲು ಸರ್ವ ಪ್ರಯತ್ನಗಳನ್ನೂ ಮಾಡುತ್ತಿರುವೆ

ನವೀನೆ—ಹಾಗಿದ್ದಿದ್ದರೆ ಬೃಂದಾವನದಲ್ಲಿ ನಾನು ಜೋಷಿಯನ್ನು ನಿರಾಕರಿಸುತ್ತಿದ್ದೆನೆ ?

ಪ್ರಾಚೀನೆ—ನಿರಾಕರಣೆಯೂ ಒಂದು ಆಟ ಬೆಕ್ಕು ಇಲಿಯನ್ನು ಒಂದೇಸಾರಿಗೆ ಕೊಲ್ಲುವುದಿಲ್ಲ ಕಾಡಿಸಿ ಪೀಡಿಸಿ ಅರ್ಧ ಪ್ರಾಣ ಮಾಡಿ ಕೊನೆಗೆ ಕೊಲ್ಲುವುದು ಹಿಂಸಕ ವೃತ್ತಿ ಬೆಕ್ಕಿನಂತೆ ಹೆಣ್ಣಿಗೂ ಸ್ವಾಭಾವಿಕ.

ನವೀನೆ—ನಾನು ಜೋಷಿಯನ್ನು ಹಿಂಸಿಸುತ್ತಿಲ್ಲ

ಪ್ರಾಚೀನೆ—ಮತ್ತೇನು ಮಾಡುತ್ತಿರುವೆ ? ಪ್ರತಿದಿನ ಅವನ ಮುಂದೆ ನಲಿಯುತ್ತಾ ಆಸೆಯನ್ನು ಉದ್ರೇಕಿಸುವುದರ ಅರ್ಥವೇನು ? ನಿನ್ನ ಆಕರ್ಷಣೆಯನ್ನು ತಪ್ಪಿಸಿಕೊಳ್ಳಲು ಅವನು ಪದ್ಮಳ ಮೊರೆ ಹೊಕ್ಕನು. ನೀನು ಪರಾಜಿತೆಯಾದೆ ಪದ್ಮಳ ಮೇಲಿನ ಮತ್ಸರಕ್ಕೆ ಈಗಿನ ನಿನ್ನ ವರ್ತನೆಯೇ ಕಾರಣ.

ನವೀನೆ—ಹಿಂದಿನ ಕಾಲದಲ್ಲಿ ಪುರುಷರು ಹೆಣ್ಣಿಗಾಗಿ ಹೋರಾಡುತ್ತಿದ್ದರು ಈಗ ಅದಕ್ಕೆ ವಿರುದ್ಧ ಹೆಂಗಸರು ಗಂಡಸಿಗಾಗಿ ಹೋರಾಡುತ್ತಾರೆ.

ನವೀನೆ—ಪದ್ಮಾ ನನ್ನ ಗೆಳತಿ ಅವಳ ವಿಚಾರದಲ್ಲಿ ನನಗೆ ಮತ್ಸರವಿಲ್ಲ.

ಪ್ರಾಚೀನೆ—ಪದ್ಮಾ ಅವಿವಾಹಿತೆ ಜೋಷಿ ಅವಳನ್ನು ಮದುವೆಯಾಗಬಹುದು. ನೀನು ವಿವಾಹಿತೆ ವಿವಾಹ ಬಂಧನದಿಂದ ಬಿಡುಗಡೆ ನಿನಗೆ ಸಾಧ್ಯವಿಲ್ಲ. ನೀನು ಜೋಷಿಯ ವೇಶ್ಯೆಯಾಗಬಲ್ಲೆ. ಪತ್ನಿಯಾಗಲಾರೆ. ಈ ದೌರ್ಬಲ್ಯವೇ ನಿನ್ನ ಅನಾಸಕ್ತಿಯ ಕಾರಣ.

ನವೀನೆ—ಇದುವರೆಗೆ ಪತ್ನಿಯಾಗಿದ್ದೆ ನಾಳೆ ವೇಶ್ಯೆಯಾದರೆ ನಷ್ಟವೇನು ?

ಪ್ರಾಚೀನೆ—ನಾಳೆ ಆಗಬೇಕಾದ್ದು ಇಂದೇ ನಡೆಯಲಿ ವಿಧಿಯೊಡನೆ ಹೋರಾಡುವುದರಿಂದ ಯಾವ ಫಲವೂ ಇಲ್ಲ

ನವೀನೆ—ಅದೇ ನಮ್ಮಿಬ್ಬರಿಗೂ ಇರುವ ಅಂತರ. ಕರ್ಮ ಕರ್ಮವೆಂದು ಸುಮ್ಮನೆ ಕುಳಿತುಕೊಳ್ಳುವುದು ವಿದ್ಯಾವತಿಯ ಲಕ್ಷಣವಲ್ಲ. ನಾನು ವಿಧಿಯೊಡನೆ ಹೋರಾಡುವೆನು ನನ್ನ ಭವಿಷ್ಯವನ್ನು ನಾನೇ ನಿರ್ಮಿಸಿ ಕೊಳ್ಳುವೆನು.

ಪ್ರಾಚೀನೆ—ನಮ್ಮಿಬ್ಬರಿಗೂ ಇರುವ ಅಂತರವನ್ನು ನಾನು ಸ್ಪಷ್ಟ ಪಡಿಸುತ್ತೇನೆ ನಾನು ವೇಶ್ಯೆ. ನನ್ನ ವೃತ್ತಿಯನ್ನು ಬಹಿರಂಗವಾಗಿ ಅನುಸರಿಸುತ್ತೇನೆ ಪುರುಷರು ಏನನ್ನು ಅಪೇಕ್ಷಿಸಿ ನನ್ನ ಬಳಿಗೆ ಬರುವರೋ ವಂಚನೆಯಿಲ್ಲದೆ ಅದನ್ನು ಅವರಿಗೆ ಕೊಡುತ್ತೇನೆ ನೀನು ಅಂತರಂಗದಲ್ಲಿ ನನ್ನಂತೆಯೇ ಆದರೂ ನೀತಿ, ಧರ್ಮ, ಮರ್ಯಾದೆಗಳ ತೆರೆಯಿಂದ ಸತ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಿರುವೆ ಗೃಹಿಣಿಯ ವೇಷದಲ್ಲಿ ವೇಶ್ಯೆಯ ಅನುಕೂಲ ಲಾಭಗಳನ್ನು ಪಡೆಯಲೆಳಿಸುವೆ ನಿನ್ನ ಕಪಟಾಚರಣೆ ವೇಶ್ಯಾ ವೃತ್ತಿಗಿಂತ ನಿಂದನೀಯ ಲೋಕದ ದೃಷ್ಟಿಯಲ್ಲಿ ನೀನು ಗೃಹಿಣಿ ಅಂತ ರಂಗದಲ್ಲಿ ವೇಶ್ಯೆ ನಿನ್ನ ವಿದ್ಯೆ ನಿನ್ನನ್ನು ಯಾವ ಸ್ಥಿತಿಗೆ ತಂದಿಟ್ಟಿತೆಂಬುದು ಈಗಲಾದರೂ ನಿನಗೆ ಅರ್ಥವಾಯಿತೆ?

ನವೀನೆ—ಈಗ ನಾನೇನು ಮಾಡಬೇಕೆಂದು ನಿನ್ನ ಸಲಹೆ?

ಪ್ರಾಚೀನೆ—ನನ್ನ ಸಲಹೆಯಂತೆ ನಡೆಯುವೆಯಾ?

ನವೀನೆ—ಸಲಹೆಯೇನೆಂಬುದನ್ನು ತಿಳಿಸು

ಪ್ರಾಚೀನೆ—ಗೃಹಿಣಿಯಾಗಿ] ನೀನು ಆಡುತ್ತಿರುವ ನಾಟಕ ನಿಲ್ಲಲಿ. ಮಂಗೇಶ ನಿನಗೆ ಯೋಗ್ಯನಾದ ಪತಿಯಲ್ಲ ಅವನನ್ನು ಬಿಟ್ಟು ಜೋಷಿಯ ಆಶ್ರಯದಲ್ಲಿ ಸುಖವಾಗಿರು

ನವೀನೆ—"ವಿಶ್ವಮಿತ್ರ" ಕಛೇರಿಯಲ್ಲಿ ನನ್ನ ಕೆಲಸ?

ಪ್ರಾಚೀನೆ—ವೇಶ್ಯೆಗಿರುವುದು ಒಂದೇ ಕೆಲಸ, ಪುರುಷರನ್ನೊಲಿಸುವುದು. ನೀನು ಆ ಒಂದು ವಿದ್ಯೆಯನ್ನು ಚನ್ನಾಗಿ ಅಭ್ಯಾಸ ಮಾಡು. ಉದರ ಪೋಷಣೆಗಾಗಿ ದುಡಿಯುವ ಶ್ರಮ ತಪ್ಪುವುದು ನಿನ್ನ ತಾಯಿ ಅತ್ತೆಯ ರಿಂದ ನೀನು ಈ ಪಾಠ ಕಲಿಯಬಹುದಾಗಿತ್ತು. ಅವರು ಕಲಿಸಿದರೂ ನೀನು

ಕಲಿಯಲಿಲ್ಲ ನಿನ್ನ ತಿಳಿಗೇಡಿತನಕ್ಕೆ ಇದಕ್ಕಿಂತ ಬೇರೆ ನಿದರ್ಶನ ಬೇಕೇ ?

ನವೀನೆ—ನಿನ್ನ ಸಲಹೆ ನನಗೆ ಒಪ್ಪಿಗೆಯಿಲ್ಲ

ಪ್ರಾಚೀನೆ—ಹಾಳಾಗಿಹೋಗು ನಿನ್ನ ಹಣೆಬರಹಕ್ಕೆ ನಾನೇನು ಮಾಡುವುದು ?

ನವೀನೆಯ ಕೋಪ ಪ್ರಜ್ವಲಿಸಿತು ಬಾಹ್ಯ ಜಗತ್ತಿನ ಮಾತುಗಳಿಂದ ಹೇಳುವುದಾದರೆ ಅವಳು ಪ್ರಾಚೀನೆಯ ಕೆನ್ನೆಗೆ ಫಟಾರನೆ ಹೊಡೆದಳು ಏಟು ತಿಂದವಳು ಸುಮ್ಮನಿರುವಳೇ ? ನವೀನೆಯ ಜಡೆಯನ್ನು ಪ್ರಾಚೀನೆ ಹಿಡಿದೆಳೆದಳು. ಇಬ್ಬರಿಗೂ ತಾತ್ವಿಕವಾಗಿ ಕೇಶಾಕೇಶಿ ಮಲ್ಲಯುದ್ಧ ಪ್ರಾರಂಭವಾಯಿತು

ಅಂತರಂಗದಲ್ಲಿ ನಡೆಯುತ್ತಿದ್ದ ಈ ಒಳತೋಟಿಯಿಂದ ಲತಾಂಗಿ ವಿಕ್ಷುಬ್ಧೆಯಾದಳು ಜ್ವರೋದ್ರೇಕದಿಂದ ರೋಗಿ ಕಂಪಿಸುವಂತೆ ಅವಳ ದೇಹ ನಡುಗಿತು ಸ್ವಲ್ಪಹೊತ್ತಿನಮೇಲೆ ಅವಳು ಎಚ್ಚೆತ್ತು ಪ್ರಯತ್ನ ಪೂರ್ವಕವಾಗಿ ಮನಸ್ಸನ್ನು ಸ್ವಾಧೀನಕ್ಕೆ ತಂದುಕೊಂಡಳು ಸುಪ್ತ ಭಾವನೆ ಗಳ ಮರೆಯಲ್ಲಿ ನಿಂತು ವಾದ ಕೇಳುತ್ತಿದ್ದ ಸಾತ್ವಿಕ ಕಳೆ ಈ ಅನುಕೂಲಾವ ಸರವನ್ನು ಸಾಧಿಸಿ, ಸಜ್ಜುಗೊಳಿಸಿದ ನಾಟಕದ ಕೊನೆಯ ದೃಶ್ಯದಲ್ಲಿ ದೈವ ಸಾಕ್ಷಾತ್ಕಾರವಾಗುವಂತೆ ಹೋರಾಡುತ್ತಿದ್ದ ಪ್ರಾಚೀನೆ ನವೀನೆಯರ ಮಧ್ಯೆ ಪ್ರತ್ಯಕ್ಷಳಾಗಿ ಹೇಳಿದಳು

“ ನಿಮ್ಮಿಬ್ಬರಿಗೂ ವಿವೇಕವಿಲ್ಲ. ನಿಮ್ಮ ಅನುಭವ, ಸಂಸ್ಕೃತಿ, ವಿದ್ಯಾ ಬುದ್ಧಿಗಳು ವ್ಯರ್ಥ ನಿಮ್ಮ ತೊಡಕನ್ನು ನಾನು ಪರಿಹರಿಸುತ್ತೇನೆ. ಒಂದೇ ವಸ್ತುವಿಗಾಗಿ ನೀವು ಹೋರಾಡುತ್ತಿದ್ದೀರಿ. ನಿಮಗೆ ಬೇಕಾದ್ದು ಜೋಷಿಯ ಆತ್ಮವೇ ದೇಹವೇ ? ದೈಹಿಕವಾಗಿ ಜೋಷಿ ಪದ್ಮಳ ಪ್ರಿಯನಾಗಿರಬಹುದು. ಆದರೆ ಅವನ ಅಂತರಂಗ ನಿನ್ನದು ನವೀನೆ ಇದನ್ನು ತಿಳಿದಿದ್ದಾಳೆ ಆ ಕಾರಣದಿಂದಲೆ ಜೋಷಿಯ ದೇಹಸಂಬಂಧಕ್ಕಾಗಿ ಅವಳು ಇದುವರೆಗೆ ಆತುರ ಪಡದಿದ್ದುದು ಅಪೇಕ್ಷಿಸಿದಾಗ ಅದು ತನ್ನ ವಸ್ತುವೆಂದು ಅವಳಿಗೆ ತಿಳಿದಿದೆ ಹಗ್ಗ ಕಟ್ಟಿ ಮೇಯಲು ಬಿಟ್ಟ ಪಶು ಸುತ್ತಿ ಸುತ್ತಿ ಕೊನೆಗೆ ಕಟ್ಟಿದ್ದ ಸ್ಥಳಕ್ಕೆ ಬಂದೇ ತೀರಬೇಕು ಕರ್ಮಸೂತ್ರವನ್ನು ವಂಚಿಸುವುದು ಸಾಧ್ಯವಲ್ಲ ಲತಾಂಗಿಯನ್ನು ಕಂಡ ದಿನ ಜೋಷಿಯ ಹೃದಯದಲ್ಲಿ ಅಂಕುರಿಸಿದ ಪ್ರೇಮ

ಕರ್ಮ ಪಾಶದಂತೆ ಅವನನ್ನು ಹಿಡಿದಿದೆ ಇಂದಲ್ಲ ನಾಳೆ ಅವನು ಪದ್ಮಳಿಂದ ಬಿಡಿಸಿಕೊಂಡು ನಿನ್ನಹತ್ತಿರ ಬರುತ್ತಾನೆ

"ಪ್ರಾಚೀನೆ ಇದನ್ನರಿಯಳು ಜೋಷಿಯ ದೇಹ ಆತ್ಮಗಳೆರಡೂ ಈ ಕೂಡಲೆ ತನ್ನದಾಗಬೇಕೆಂದು ಅವಳ ಇಚ್ಛೆ. ಆತ್ಮವಿದ್ದ ಕಡೆ ದೇಹ ತಾನಾಗಿ ಬರುವುದೆಂದು ತಿಳಿಯದೆ ಅವಳು ದುಡುಕುತ್ತಿದ್ದಾಳೆ ತನ್ನ ಆಸೆ ಈಡೇರಲು ಜೋಷಿಯ ಕಾಲುಗಳ ಮೇಲೆ ಬೀಳುವುದೊಂದು ಮಾತ್ರ ಉಳಿದಿದೆ ಅವಳಿಗೆ ಜಗತ್ತನ್ನು ಮರೆತು ಅವನ ಪ್ರಣಯಿನಿಯಾಗಿ ಬದುಕುವುದು ಅವಳ ಆಶಯ

"ನನ್ನ ದೃಷ್ಟಿಯಲ್ಲಿ ಇವೆರಡೂ ದೌರ್ಬಲ್ಯದ ಮಾರ್ಗಗಳು ಸ್ವತಂತ್ರಳಾದ ಹೆಂಗಸು ಈ ಎರಡು ಮಾರ್ಗಗಳನ್ನೂ ಬಿಟ್ಟು ಬೇರೆ ಮಾರ್ಗ ಹಿಡಿಯಬೇಕು ಕರ್ಮವನ್ನು ಹೆಣೆಯಬಲ್ಲ ಕೈ ಕರ್ಮಕ್ಕೆ ಅಧೀನವಾಗುವುದನ್ನು ನಾನು ಒಪ್ಪಲಾರೆ ವಿವಾಹವು ಹೆಣ್ಣಿಗೆ ದಾಸ್ಯದ ಶೃಂಖಲೆ, ವೇಶ್ಯಾವೃತ್ತಿ ಆತ್ಮನಾಶದ ಪ್ರಪಾತ ವಿವಾಹಿತೆಯಾದ ಹೆಣ್ಣು ದಾಸಿಯಾದರೂ ಆತ್ಮವನ್ನು ಕಳೆದುಕೊಳ್ಳುವುದಿಲ್ಲ ವೇಶ್ಯೆ ಆತ್ಮವನ್ನು ಕಳದುಕೊಂಡು ಬಹುಜನರ ಬಂಧನರಹಿತ ದಾಸಿಯಾಗುತ್ತಾಳೆ ಈ ಎರಡರಿಂದ ಪ್ರತ್ಯೇಕವಾದ ಸ್ವತಂತ್ರ ಜೀವನದಲ್ಲಿದೆ ಹೆಣ್ಣಿನ ಮುಕ್ತಿ "

ಲತಾಂಗಿಯ ಹೃದಯದಲ್ಲಿ ಮೂರನೆಯ ಸಾರಿ ಪ್ರಶ್ನೆ ಮೂಡಿತು—
"ಈ ಸಂದರ್ಭದಲ್ಲಿ ನಾನೇನು ಮಾಡಬೇಕು ?"

ಸಾತ್ವಿಕ ಕಳೆ ಉತ್ತರ ಕೊಟ್ಟಳು "ಪತಿ, ಪ್ರಿಯ, ಹೆಣ್ಣಿನ ಜೀವನದಲ್ಲಿ ಈ ಎರಡೂ ತೊಡಕುಗಳೇ ನೀನು ಇಬ್ಬರನ್ನೂ ತ್ಯಜಿಸು ಸ್ವತಂತ್ರಳಾಗಿ ಜೀವಿಸು ನಿನ್ನ ಆತ್ಮವನ್ನು ಅರಿತುಕೊಳ್ಳಲು ಅದೊಂದೇ ದಾರಿ ಸ್ಥಾನಭ್ರಷ್ಟಾ ನಶೋಭಂತೇ ಪಂಡಿತಾ ವನಿತಾ ಲತಾ- ಎಂದು ಹೇಳಿಲ್ಲವೆ? ಜೋಷಿಯ ಬಿಡಾರಕ್ಕೆ ಬಂದು ನೀನು ಬಲೆಯಲ್ಲಿ ಸಿಕ್ಕ ಹಕ್ಕಿಯಂತಾಗಿರುವೆ. ಬೃಂದಾವನದಲ್ಲೊಂದುಸಾರಿ ನೀನು ಬಲೆಯಲ್ಲಿ ಬಿದ್ದೆ. ವಿಶಾಲ ಹೃದಯನಾದ ಜೋಷಿ ಆಗ ನಿನ್ನನ್ನು ಬಿಟ್ಟುಕೊಟ್ಟನು. ನಿನ್ನ ಅದೃಷ್ಟ ! ಈಗಲೂ ಎರಡನೆಯ ಸಾರಿಯೂ ಬಿಟ್ಟುಕೊಡಲು ಸಿದ್ಧನಾಗಿದ್ದಾನೆ ಅವನ ಸದ್ಭಾವನೆ ಕಾಮದಲ್ಲಿ ಪರ್ಯಾವಸಾನವಾಗುವ ಮೊದಲು ಈ ಸ್ಥಳವನ್ನು ಬಿಡು."

ಈ ಮಾನಸಿಕ ಮಂತ್ರಾಲೋಚನೆಯಿಂದ ಲತಾಂಗಿಯೊಂದು ನಿರ್ಧಾರಕ್ಕೆ ಬಂದಳು. ತಾನು ಮನೆ ಬಿಟ್ಟು ಜೋಷಿಯ ಬಿಡಾರಕ್ಕೆ ಬಂದದ್ದು ತಪ್ಪು ಹೆಜ್ಜೆಯೆಂದು ಅವಳಿಗೆ ಅರಿವಾಯಿತು. ಅದರಿಂದ ತನಗೆ ಹೆಚ್ಚು ಅನರ್ಥವಾಗದಿರಬೇಕಾದರೆ ಕೂಡಲೆ ಈ ಸ್ಥಳವನ್ನು ಬಿಟ್ಟು ಮನೆಗೆ ಹೋಗುವುದು ಅಗತ್ಯ ಮನೆಯಲ್ಲಿದ್ದುಕೊಂಡು ಭವಿಷ್ಯ ನಿರ್ಧರಿಸಿಕೊಳ್ಳಬಹುದು– ಎಂದು ಅವಳು ಭಾವಿಸಿದಳು ಧಡಾರನೆ ಎದ್ದು ನಡುಮನೆಗೆ ಬಂದು ನಲುಗಿದ್ದ ಉಡುಗೆಯನ್ನು ಸರಿಪಡಿಸಿಕೊಂಡಳು ಮೇಜಿನ ಮುಂದೆ ಕುಳಿತು ಕೆದರಿದ ಮುಂಗುರುಳನ್ನು ಬೆರಳುಗಳಿಂದ ತಿದ್ದುತ್ತಿದ್ದಂತೆ ಅಚ್ಚುಕೂಟದಲ್ಲಿ 'ರೋಟರಿ' ಯಂತ್ರದ ಶಬ್ಧ ಕೇಳಿಬಂತು ಗಡಿಯಾರದಲ್ಲಿ ನಾಲ್ಕು ಗಂಟೆ ಹೊಡೆಯಿತು ತಾನು ಅಲ್ಲಿಗೆ ಬಂದಾಗ ಸುಮಾರು ೯ ಗಂಟೆ ತನಗೆ ಅರಿವಿಲ್ಲದೆ ಏಳುಗಂಟೆಕಾಲ ಕಳೆದುಹೋದದ್ದು ಅವಳಿಗೆ ಆಶ್ಚರ್ಯವನ್ನುಂಟು ಮಾಡಿತು ತನ್ನ ಮತ್ತು ಜೋಷಿ ಮಧ್ಯದಲ್ಲಿದ್ದ ಸೌಗಂಧ ಸೌಮನಸ್ಯಗಳಿಗೆ ಇದು ನಿದರ್ಶನವೆಂದು ತಿಳಿದು ಇಂತಹ ಆಶ್ರಯವನ್ನು ಬಿಟ್ಟು ಹೋಗಬೇಕಾದ ತನ್ನ ನಿರ್ಧಾರಕ್ಕಾಗಿ ಲಜ್ಜಿತೆಯಾದಳು

ಪತ್ರಿಕೆಯ ಮೊದಲ ಪ್ರತಿಯನ್ನು ತೆಗೆದುಕೊಂಡು ಜೋಷಿ ನಡುಮನೆಗೆ ಬಂದನು ಲತಾ ಹಾಸಿಗೆಯಿಂದೆದ್ದು ಹೊರಡಲು ಸಿದ್ಧಳಾಗಿ ಕುಳಿತಿರುವುದನ್ನು ಕಂಡು ಅವನಿಗೆ ಸಮಾಧಾನವಾಯಿತು. ಪತ್ರಿಕೆಯನ್ನು ಅವಳ ಮುಂದೆ ಎಸೆದು ಹೇಳಿದನು "ಕಾರಿಗೆ ಕಳುಹಿಸಿದ್ದೇನೆ. ಬಂದ ಕೂಡಲೆ ನಿನ್ನನ್ನು ಮನೆಗೆ ಬಿಟ್ಟು ಬರುತ್ತೇನೆ".

ಲತಾಂಗಿ ಉತ್ತರ ಕೊಡಲಿಲ್ಲ. ತನ್ನ ಅಸಹಾಯ ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಳ್ಳದೆ, ಒಲಿದು ಬಂದ ಹೆಣ್ಣನ್ನು ಹಿಂದಕ್ಕೆ ಕಳುಹಿಸುವ ಜೋಷಿಯ ಔದಾರ್ಯಕ್ಕಾಗಿ ಅವಳ ದೃಷ್ಟಿ ಕೃತಜ್ಞತೆ ಸೂಚಿಸುತ್ತಿತ್ತು.

"ನಾನು ನಿನ್ನನ್ನು ಉಪೇಕ್ಷಿಸಿದೆನೆಂದು ಭಾವಿಸಬೇಡ ಲತಾ!"

—ಅವನು ಅನುನಯದ ಮೃದು ಕಂಠದಿಂದ ಹೇಳಿದ. "ನಮ್ಮ ಸ್ನೇಹ ಕಾಮದ ಉದ್ರೇಕದಿಂದ ಕಲುಷಿತವಾಗದಿರಲೆಂಬುದು ನನ್ನ ಅಪೇಕ್ಷೆ ನಿನ್ನ ಪ್ರಣಯಿಯಾಗುವ ಅರ್ಹತೆಯನ್ನು ನಾನಿನ್ನೂ ಪಡೆದಿಲ್ಲ. ಆದ್ದರಿಂದಲೇ ಒಲಿದು ಬಂದ ನಾರಿಯನು ಹಿಂದಕ್ಕೆ ಕಳುಹಿಸುತ್ತಿದ್ದೇನೆ. ಈ ತ್ಯಾಗ

ನನಗೆ ಸಂತೋಷವನ್ನುಂಟುಮಾಡಿದೆ."

ಲತಾ ಆಗಲೂ ಸುಮ್ಮನಿದ್ದಳು ತನ್ನ ನಿರ್ಧಾರವನ್ನು ಕಾರ್ಯ ರೂಪಕ್ಕೆ ತರಲು ಮೌನ ಅಗತ್ಯವೆಂದೂ, ಉತ್ತರ ಪ್ರತ್ಯುತ್ತರಗಳಿಂದ ತನ್ನ ನಿಶ್ಚಯ ಚಲಿಸಬಹುದೆಂದೂ ಅವಳು ಭೀತೆಯಾಗಿದ್ದಳು ಅಷ್ಟುಹೊತ್ತಿಗೆ ಕಾರು ಬಂದ ಶಬ್ಧವಾಯಿತು ಜೋಷಿ ಲತಾಂಗಿಯ ಕೈಹಿಡಿದೆಬ್ಬಿಸಿ, ಕೆಳಗೆ ಕರೆದುಕೊಂಡುಬಂದು ಕಾರಲ್ಲಿ ಕುಳ್ಳಿರಿಸಿದ ತಾನೂ ಕುಳಿತುಕೊಂಡ. ಕಾರು ಮನೆಯ ಸಮೀಪಕ್ಕೆ ಬಂದಾಗ ಲತಾಂಗಿ ಉಕ್ಕಿಬರುತ್ತಿದ್ದ ಅಳು ವನ್ನು ತಡೆದು ಗದ್ಗದಕಂಠದಿಂದ "ನೀವು ಈ ವಿಚಾರ ಪದ್ಮಳಿಗೆ ತಿಳಿಸ ಬೇಡಿ" ಎಂದಳು

"ತಿಳಿಸುವುದಿಲ್ಲ, ಲತಾ ನೀನು ಅಳಬೇಡ" ಎಂದು ಜೋಷಿ ಅವಳ ಕೈ ಹಿಡಿದು ಸಂತೈಸಿದ.

ಭಾವೋದ್ರೇಕದಿಂದ ಪರವಶೆಯಾದ ಲತಾಂಗಿ ಜೋಷಿಯ ಎದೆಯಲ್ಲಿ ಒರಗಿದಳು ಕತ್ತಲಲ್ಲಿ ಅವಳ ತುಟಿಗಳು ಆತುರದಿಂದ ಅವನ ತುಟಿಗಳನ್ನು ಅರಸಿದವು ಆ ದೀರ್ಘಚುಂಬನದಿಂದ ಬಿಡಿಸಿ ಕೊಳ್ಳುತಿದ್ದಂತೆ ಕಾರು ನಿಂತಿತು

ಲತಾ ಕಾರಿಂದಿಳಿದು "ಇನ್ನು ಭಯವಿಲ್ಲ ನಾನು ಬಾಗಿಲು ತೆಗಿಸಿ ಕೊಂಡು ಒಳಗೆ ಹೋಗುತ್ತೇನೆ ನೀವು ಹೋಗಿ" ಎಂದಳು

ಜೋಷಿ ಹಾಗೆಯೇ ಮಾಡಿದ ಮನೆಯ ಹೊರ ಬಾಗಿಲಲ್ಲಿ ನಿಂತು ಚಲಿಸುವ ಕಾರನ್ನು ನೋಡುತ್ತಿದ್ದಂತೆ ಲತಾಂಗಿಯ ಮುಖದಲ್ಲಿ ಮಾಯದ ನಗುವೊಂದು ಮೂಡಿತು ಜೋಷಿ ಆ ನಗುವನ್ನು ಕಂಡಿದ್ದರೆ ಅದರ ಅರ್ಥ ವನ್ನು ತಿಳಿಯಲಾರದೆ ತೊಡಕಿನಲ್ಲಿ ಬೀಳುತ್ತಿದ್ದ ಸ್ತ್ರೀಯರ ವಿಚಾರದಲ್ಲಿ ಅವನಿಗಿದ್ದ ಅನುಭವ ಸಂಸ್ಕೃತಿಗಳೂ ಆ ತೊಡಕನ್ನು ಬಿಡಿಸಲು ಅಶಕ್ತ ವಾಗುತ್ತಿದ್ದವು ಬಲೆಯಿಂದ ಬಿಡಿಸಿಕೊಂಡ ಹಕ್ಕಿಯ ನೆಗೆತದಲ್ಲಿ, ವಿಟನನ್ನು ವಂಚಿಸುವ ವೇಶ್ಯೆಯ ಕಣ್ಣುಗಳಲ್ಲಿ, ಪತಿಯನ್ನು ಮರಳುಗೊಳಿಸುವ ಪತ್ನಿಯ ಕಂಠದಲ್ಲಿ, ಮಗುವನ್ನು ಲಾಲಿಸುವ ತಾಯಿಯ ತುಟಿಗಳಲ್ಲಿ ಆ ನಗುವಿನ ನೆರಳನ್ನು ಕಂಡ ಅನುಭಾವಿಗಳು ಹೆಣ್ಣು ಮಾಯೆಯೆಂದು ಹೇಳಿದ್ದಾರೆ.

ಹೆಣ್ಣಿನ ಪ್ರೇಮದಲ್ಲಿ ಪುರುಷರಿಗೆ ಅಗೋಚರವಾದ ಅನೇಕ ಅಂತಸ್ತು

ಗಳಿರುತ್ತವೆ ಸ್ತ್ರೀರೂಪದಲ್ಲಿ ಪುರುಷನ ಆಸಕ್ತಿ, ಅದನ್ನು ತನ್ನದಾಗಿ ಮಾಡಿಕೊಳ್ಳಬೇಕೆಂಬ ಉತ್ಕಟ ಆಕಾಂಕ್ಷೆ, ಅದರ ಅನುಭವದಲ್ಲಿ ತೋರುವ ಸಂತುಷ್ಟಿ, ಸ್ತ್ರೀಹೃದಯದ ನಿಗೂಢ ರಹಸ್ಯವನ್ನು ತಿಳಿಯಲು ಅಶಕ್ತನಾದಾಗ ತಲೆದೋರುವ ಅದ್ಭುತ ಆಶ್ಚರ್ಯ ಇವು ಪುರುಷನ ಅಂತರಂಗದಲ್ಲಿ ಆತ್ಮನಿಂದ ಪ್ರತ್ಯೇಕವಾದ ಭಾವನೆಗಳು ಆ ಭಾವನೆಗಳು ಬೇರೆಯೆಂದೂ, ಅವುಗಳ ಸುಖದುಃಖಗಳನ್ನು ಅನುಭವಿಸುವ ಆತ್ಮರೂಪಿಯಾದ ತಾನು ಬೇರೆಯೆಂದೂ ಪುರುಷನು ತಿಳಿಯುತ್ತಾನೆ ಕವಿಗಳು ಪ್ರೇಮಿಗಳು ಈ ಅನುಭವದಲ್ಲಿ ತಲ್ಲೀನರಾಗಿ ಕಾವ್ಯಗಳನ್ನು ಸೃಷ್ಟಿಸುತ್ತಾರೆ ಸೃಷ್ಟಿಯ ಅಭೌಮ ಆನಂದವನ್ನು ಕ್ಷಣಿಕವಾಗಿ ಅನುಭವಿಸುತ್ತಾರೆ

ಆದರೆ ಹೆಣ್ಣಿನ ಪ್ರೇಮ ಇದಕ್ಕೆ ಸಂಪೂರ್ಣ ವಿರುದ್ಧವಾದದ್ದು ಪ್ರೇಮ ಅವಳ ಜೀವನದ ಸರ್ವಸ್ವ, ಕ್ಷಣಿಕವಾದ ಆನಂದಾನುಭವವಲ್ಲ, ಆತ್ಮನಿಂದ ಪ್ರತ್ಯೇಕವಾಗಿ, ಆತ್ಮನು ಅನುಭವಿಸುವ ಭಾವನೆಯಲ್ಲ ಅವಳ ಪ್ರೇಮ ಆತ್ಮನಲ್ಲಿ, ಆತ್ಮ ಪ್ರೇಮದಲ್ಲಿ ತನ್ಮಯವಾಗಿ ಏಕರೂಪತೆ ಪಡೆಯುತ್ತದೆ. ಪ್ರಿಯನ ಸುಖಾನುಭವಕ್ಕಾಗಿ ತನ್ನ ಸೌಂದರ್ಯ ಸರ್ವಸ್ವವನ್ನು ಅವನ ವಶಪಡಿಸುವುದು ಪ್ರೇಮದ ಪರಾಕಾಷ್ಠೆಯೆಂದು ಹೆಣ್ಣು ತಿಳಿಯುತ್ತಾಳೆ. ಪ್ರಿಯನ ರೂಪ ಕುರೂಪ, ಸೌಷ್ಠವ-ವಿಕಲತೆ, ಮಾಂದ್ಯ-ತೀಕ್ಷ್ಣತೆ, ಯೌವನ ವಾರ್ಧಕ್ಯ, ಸಾಮ್ಯ–ಅಸಾಮ್ಯ, ನೀತಿ–ಅನೀತಿ, ಧರ್ಮ–ಅಧರ್ಮ ಮುಂತಾದ ಗುಣ ದೋಷಗಳನ್ನು ಮರೆತು ಅವನ ಪ್ರೇಯಶ್ರೇಯಗಳೇ ತನ್ನ ಪ್ರೇಯಶ್ರೇಯಗಳೆಂದು ತಿಳಿಯುತ್ತಾಳೆ. ಈ ಸ್ಥಿತಿಯಲ್ಲಿ ಹೆಣ್ಣು ಪುರುಷನ ಪ್ರೇಯಸಿಮಾತ್ರಳಲ್ಲ, ಶಕ್ತಿ ಮುಕ್ತಿ ಧಾತ್ರಿ, ಪ್ರತಿಭಾ ಸ್ವರೂಪಿಣಿ. ಜಗತ್ತಿನ ಮೇಧಾವಿಗಳು, ಕವಿಗಳು, ಕಲಾವಿದರು. ದಾರ್ಶನಿಕರು, ಮಹಾಪುರುಷರು ಹೆಣ್ಣಿನಿಂದ ಪ್ರೇರಣೆ ಪಡೆದು ಮಹಾ ಕಾರ್ಯಗಳನ್ನು ಸಾಧಿಸಿದ್ದಾರೆ, ಕಾವ್ಯಗಳನ್ನು ರಚಿಸಿದ್ದಾರೆ, ಚಿರಂತನ ಅದ್ಭುತ ಸೌಂದರ್ಯಗಳಿಂದ ಜನತೆಯನ್ನು ಆಶ್ಚರ್ಯಸಾಗರದಲ್ಲಿ ಮುಳುಗಿಸುವ ರಮ್ಯವಸ್ತುಗಳನ್ನು ಸೃಷ್ಟಿಸಿದ್ದಾರೆ ಕಾಳಿದಾಸನ ಮೇಘದೂತ, ಜಯದೇವನ ಗೀತಗೋವಿಂದ, ಷೇಕ್ಸ್ಪಿಯರನ ಚತುರ್ದಶಪದಿಗಳು, ಅಜ್ಞಾತ ಗ್ರೀಕ್ ರೂವಾರಿಯ ಪ್ರೇಮ ದೇವತೆ ವೀನಸಳ ಪ್ರತಿಮೆ, ಬೇಲೂರಿನ ಶಿಲಾಬಾಲಿಕೆಯರು ಈ ಪ್ರತಿಭೆಯ

ಸ್ಫುಟ ನಿದರ್ಶನೆಗಳು.

ಜೋಷಿಯಲ್ಲಿ ಲತಾಂಗಿಯ ಪ್ರೇಮ ಇಂದು ಈ ಪರಾಕಾಷ್ಠೆಯನ್ನೇರಿತ್ತು ಅವನಿಗಾಗಿ ತನ್ನ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧಳಾಗಿ ಅವಳು ಬಿಡಾರಕ್ಕೆ ಹೋದಳು ಜೋಷಿಯ ಶಯ್ಯೆಯಲ್ಲಿ ಸಂಕೋಚವಿಲ್ಲದೆ ಮಲಗಿದಳು ಅವನು ಬಂದಾಗ ಕೊಟ್ಟ ಸ್ವಾಗತದಲ್ಲಿ ಈ ತ್ಯಾಗ ಪರಿಸ್ಫುಟಗೊಂಡಿತು ಜೋಷಿಯು ಅನಪೇಕ್ಷೆ ಅಡಚಣೆಯಾಗದಿದ್ದರೆ ಆಗಲೆ ಅವರ ಪ್ರೇಮ ಪರಿಪಕ್ವವಾಗುತ್ತಿತ್ತು ಆದರೆ ಜೋಷಿ ಅದಕ್ಕೆ ಸಿದ್ಧವಾಗಿರಲಿಲ್ಲ ಲತಾಂಗಿಯ ತ್ಯಾಗ ದೌರ್ಬಲ್ಯದ ಸೂಚನೆಯೆಂದೂ ಪ್ರಕೃತ ಸಂದರ್ಭದಲ್ಲಿ ತಾನು ಅದರ ಪ್ರಯೋಜನ ಪಡೆಯುವುದು ಅನುಚಿತವೆಂದೂ ಭಾವಿಸಿದ. ಕಾರಲ್ಲಿ ಬಂದು ಕುಳಿತಾಗ ಅವನ ಉದಾತ್ತ ಭಾವನೆ ಅವಳನ್ನು ಪರವಶಳನ್ನಾಗಿ ಮಾಡಿತು ಅವನು ಆಗ ಕಾರನ್ನು ಪುನಃ ಬಿಡಾರಕ್ಕೆ ಹಿಂದಿರುಗಿಸಿದ್ದರೆ ಲತಾಂಗಿ ಬೇಡವೆನ್ನುತ್ತಿರಲಿಲ್ಲ ಬೇಡವೆನ್ನುವ ಇಚ್ಛೆಯೂ ಆಗ ಅವಳಿಗಿರಲಿಲ್ಲ

ಬಾಗಿಲ ಬಳಿ ನಿಂತು ಕಾರು ಚಲಿಸುವುದನ್ನು ಕಂಡಾಗ ಸೆಳೆಮಿಂಚು ಕಾರ್ಗತ್ತಲನ್ನು ಬೆಳಗುವಂತೆ ಜೋಷಿಯ ಶುದ್ಧ ಸ್ನೇಹ ಲತಾಂಗಿಗೆ ಗೋಚರವಾಯಿತು ಪ್ರಕೃತಿಯೊಡನೆ ತಲ್ಲೀನೆಯಾಗಿ ತನ್ನಿಂದ ಚಲಿಸುವ ಜಗತ್ತಿನ ಲೀಲೆಯನ್ನು ಕಂಡು ಜಗದ್ಧಾತ್ರಿ ನಗುವಂತೆ ಅನಿರ್ವಚನೀಯ ರಹಸ್ಯ ಭಾವ ಗರ್ಭಿತವಾದ ಮಾಯದ ಕಿರು ನಗೆ ಅವಳ ಮುಖದಲ್ಲಿ ಉದಿಸಿತು

—೨—

ಈಗ ಕೆಲವು ಗಂಟೆಗಳು ಹಿಂದೆ ಹೋಗಿ ಲತಾ ಮನೆ ಬಿಟ್ಟ ಮೇಲೆ ಏನು ನಡೆಯಿತೆಂಬುದನ್ನು ವಿವರಿಸುವುದು ಅಗತ್ಯ

ಮಗಳು ಹೊರಗೆ ಹೋದ ಕೂಡಲೆ ರತ್ನಮ್ಮ ಅಳಿಯನ ಕಡೆ ತಿರುಗಿ "ಎಲ್ಲಿ ಹೋದಳೋ ನೋಡು ಮಂಗೇಶ" ಎಂದಳು.

"ಮತ್ತೆಲ್ಲಿ ಹೋಗುತ್ತಾಳೆ? ಪದ್ಮಳ ಮನೆಗೆ" ಎಂದು ಮಂಗೇಶ

ಸುಮ್ಮನಾದ ಸ್ವಲ್ಪ ಹೊತ್ತು ಇಬ್ಬರೂ ಮಾತಾಡಲಿಲ್ಲ ಒಬ್ಬರ ಮುಖವ ನ್ನೊಬ್ಬರು ನೋಡುತ್ತ ಸುಮ್ಮನೆ ಕುಳಿತಿದ್ದರು ಆ ಮೇಲೆ ರತ್ನಮ್ಮ ಅಲ್ಲಿಂದೆದ್ದು "ಅವಳೆಲ್ಲಿಗಾದರೂ ಹೋಗಲಿ ಪುನಃ ಬಂದರೆ ಮನೆಗೆ ಸೇರಿಸಬೇಡ" ಎಂದು ಹೇಳಿ ಒಳಗೆ ಹೋದಳು

"ಫಲಾಹಾರಕ್ಕೆ ಏನಾದರೂ ಮಾಡು ಅತ್ತೆ ನಾನು ಊಟ ಮಾಡು ವುದಿಲ್ಲ. ತಿರುಗಾಡಿ ಅರ್ಧ ಗಂಟೆಯಲ್ಲಿ ಬರುತ್ತೇನೆ" ಎಂದು ಹೇಳಿ ಮಂಗೇಶ ಹೊರಗೆ ಹೋದ

ರತ್ನಮ್ಮ ಹಿಂದಿರುಗಿ ಬಂದು ಬೀದಿಬಾಗಿಲು ಚಿಲಕ ಹಾಕಿ ಅಡಿಗೆಯ ಮನೆಗೆ ಹೋಗದೆ ಮಗಳ ಕೊಠಡಿಗೆ ಬಂದು ಹಾಸಿಗೆಯ ಮೇಲೆ ಮಲಗಿ ದಳು ಸರ್ವಜ್ಞನ ಅನುಭವವಾಣಿ ಪುನಃ ಅವಳ ನೆನಪಿಗೆ ಬಂತು

ಕುದುರೆಯಾ ಚದುರೆಯಾ ಹದಿನೆರಡು ಒಂದಯ್ಯ
ಬದುರನೇರಿದರೆ ಕುಣಿಯುವುದು, ಬೆಳ್ಳಾಲ
ಬಿದರಿ ಹಾಕುವುದು ಸರ್ವಜ್ಞ

ಜಾತಿ ಕುದುರೆಯ ಹೊಟ್ಟೆಯಲ್ಲಿ ಕತ್ತೆ ಹುಟ್ಟುವುದೇ? ತನ್ನಂತೆ ಲತಾಂಗಿಯೂ ಜಾತ್ಯಶ್ವಿನಿ ಸವಾರನ ಬೆಳ್ತನವನ್ನು ಕಂಡು ಬಿದರಿಹಾಕಲು ಪ್ರಯತ್ನಿಸುತ್ತಿದ್ದಾಳೆ ಬಾಳಿನಲ್ಲಿ ಅದೊಂದು ಸಹಜ ಘಟನೆ ಅದನ್ನು ತಪ್ಪಿಸುವ ಉಪಾಯವೊಂದೇ, ಸವಾರನಿಗೆ ಅಶ್ವಹೃದಯವನ್ನು ಕಲಿಸು ವುದು ರತ್ನಮ್ಮ ಏಕಾಂತದಲ್ಲಿ ಕಿಲ ಕಿಲ ನಕ್ಕಳು ತಾನು ಇಂತಹ ಪ್ರಸಂಗದಲ್ಲಿ ಬೀಳಬಹುದಾಗಿ ಅವಳು ಯಾವಾಗಲೂ ಭಾವಿಸಿರಲಿಲ್ಲ ಸನ್ನಿವೇಶದ ಅಶ್ಲೀಲ ಅಸಂಗತಗಳನ್ನು ಕಂಡು ಅವಳಿಗೆ ನಗೆ ಬಂತು ನೀರವವಾಗಿ ಸ್ವಲ್ಪ ಹೊತ್ತು ಯೋಚಿಸಿದಳು ಅನಂತರ ಎದ್ದು ಅಡಿಗೆ ಮನೆಗೆ ಹೋಗಿ ಫಲಾಹಾರಕ್ಕೆ ಸಿದ್ಧಪಡಿಸಿದಳು

ಮಂಗೇಶ ಹತ್ತು ಗಂಟೆ ಸುಮಾರಿಗೆ ಮನೆಗೆ ಬಂದ ರತ್ನಮ್ಮ ಬಾಗಿ ಲಲ್ಲಿ ಕಾದು ಕುಳಿತಿದ್ದಳು ಬಂದವನೇ "ಲತಾ ಹಿಂದಿರುಗಿದಳೇ?" ಎಂದು ಕೇಳಿದ

"ಅವಳೆಲ್ಲಿ ಬರುತ್ತಾಳೆ? ಪದ್ಮಳ ಮನೆಯಲ್ಲಿಯೇ ಊಟ ಮಾಡಿ ಮಲಗಿರಬೇಕೆಂದು ಕಾಣುತ್ತದೆ" ಎಂದು ರತ್ನಮ್ಮ ಪದ್ಮಳ ಸಹಸ್ರ

ನಾಮ ಪಠನೆಗೆ ಪ್ರಾರಂಭಿಸಿದಳು

ಮಂಗೇಶ ಉಡುಪು ತೆಗೆದು ಕೈ ಕಾಲು ತೊಳೆದುಕೊಂಡು ನಡುಮನೆಯಲ್ಲಿ ಮೇಜಿನ ಮುಂದೆ ಕುಳಿತ ರತ್ನಮ್ಮ ಗೊಣಗುಟ್ಟುತ್ತಲೆ ಅಡಿಗೆಯ ಮನೆಯಿಂದ ಬೆಳ್ಳಿಯ ತಟ್ಟೆಯಲ್ಲಿ ಉಪ್ಪಿಟ್ಟು ಒಂದು ಲೋಟಾದಲ್ಲಿ ನೀರು ತಂದುಕೊಟ್ಟಳು ಮಂಗೇಶನಿಗೆ ಉಪ್ಪಿಟ್ಟು ಬಹಳ ರುಚಿಯಾಗಿ ಕಂಡಿತು. ತಿನ್ನುತ್ತಾ ಹೇಳಿದ "ಅವಳಿಗೂ ಅಷ್ಟು ತೆಗೆದಿಟ್ಟಿರು ಅತ್ತೆ ನಾನು ಹೋಗಿ ಕರೆತರುತ್ತೇನೆ"

"ನೀನು ಹೀಗೆ ಮಾಡಿಯೇ ಅವಳನ್ನು ತಲೆಯ ಮೇಲೇರಿಸಿಕೊಂಡೆ. ಹದ್ದಿನಲ್ಲಿದ್ದರೆ ಹೆಂಗಸು ಮೀರಿದರೆ ಅಗಡು ಕುದುರೆಯಂತೆ ಸವಾರನನ್ನು ತಳ್ಳಿಹಾಕುತ್ತಾಳೆ"

ಎಂದು ಹೇಳಿ ರತ್ನಮ್ಮ ನಕ್ಕಳು ಮಂಗೇಶ ಉತ್ತರ ಕೊಡದಿದ್ದುದನ್ನು ಕಂಡು ಅವಳು ಮಾತು ಮುಂದುವರೆಸಿ "ಕುದುರೆ ಸಗ್ಗಬೇಕಾದರೆ ಸವಾರ ಚತುರನಾಗಿರಬೇಕು ನೀನು ಈಗಿನ ಕಾಲದ ಹುಡುಗ ಲತಾನ ಆಳಬಲ್ಲೆಯೆಂದು ಭಾವಿಸಿದ್ದೆ ಪ್ರಾರಂಭದಲ್ಲಿಯೇ ತಪ್ಪು ಮಾಡಿದೆ ಮೊದಲನೆಯದಾಗಿ ಅವಳು ಕೆಲಸಕ್ಕೆ ಸೇರಲು ಒಪ್ಪಬಾರದಾಗಿತ್ತು" ಎಂದಳು

ಮಂಗೇಶ ಆಗಲೂ ಉತ್ತರ ಕೊಡಲಿಲ್ಲ

"ಷರೀಫನ ಪ್ರಸಂಗ ನಿನ್ನ ಎರಡನೆಯ ತಪ್ಪು"—ರತ್ನಮ್ಮ ಪುನಃ ಹೇಳಿದಳು "ಅಂತಹ ಕುಡುಕ ಮನುಷ್ಯನನ್ನು ಮನೆಗೆ ಕರೆತಂದರೆ ಯಾವ ಹೆಂಗಸು ತಾನೆ ಸುಮ್ಮನಿರುತ್ತಾಳೆ ನೀನು ಅವನಿಂದ ಹಣ ತೆಗೆದುಕೊಳ್ಳುವ ಮೊದಲು ಲತಾನ ಕೇಳಿ ಅವಳ ಸಮ್ಮತಿ ಪಡೆಯ ಬೇಕಾಗಿತ್ತು. ಮೊದಲೇ ಅವಳ ಕೈಗೆ ಹಣ ಕೊಟ್ಟಿದ್ದರೆ ತಾನಾಗಿ ಒಪ್ಪುತ್ತಿದ್ದಳು"

ಷರೀಫ್ ಪ್ರಸಂಗ ಹುಳಿತ ಹಲ್ಲಿನಂತೆ ಮಂಗೇಶನಿಗೆ ಮೇಲಿಂದ ಮೇಲೆ ನೋವುಂಟುಮಾಡುತ್ತಿತ್ತು ರತ್ನಮ್ಮ ಆ ವಿಚಾರ ಎತ್ತಿದಾಗ ಅವನ ಮನಸ್ಸು ಚುಚ್ಚುವುದು ತನ್ನ ಅವಿವೇಕ ಅಚಾತುರ್ಯಗಳಿಗೆ ನಾಚುವನು ಇನ್ನು ತಡೆಯಲಾರದೆ "ನಿನಗೆ ಬೇರೆ ಮಾತೇ ಇಲ್ಲವೆ ಅತ್ತೆ! ಆ ದಿನದ ಕತೆ ತಿಳಿಯದೆ ನಡೆದ ಭ್ರಾಂತಿವಿಲಾಸ ಆ ವಿಚಾರ ಇತರರು ಹೇಳುವುದನ್ನು ನೀನು ನಂಬಬೇಡ" ಎಂದು ಬೇಸರದಿಂದ ನುಡಿದ.

" ಹೋಗಲಿ ಬಿಡಪ್ಪ ! ನಿನಗೆ ಬೇಡವಾದರೆ ನಾನೇನೂ ಹೇಳುವುದಿಲ್ಲ " ಎಂದು ರತ್ನಮ್ಮ ಒಳಗೆ ಹೋಗಿ ಬಟ್ಟಲು ತುಂಬ ಬಾದಾಮಿ ಹಾಲು ತಂದು ಕೊಟ್ಟಳು ಅತ್ತೆಯ ಆದರ ಸೌಜನ್ಯಗಳನ್ನು ಕಂಡು ಮಂಗೇಶನ ಮನಸ್ಸು ಕರಗಿತು ತನ್ನ ಹಿತಕ್ಕಾಗಿಯೇ ಅವಳು ಇಷ್ಟೆಲ್ಲ ಹೇಳುತ್ತಿರುವಳೆಂದು ತಿಳಿದು ಅವನು " ಲತಾ ಮನಸ್ಸು ತಿರುಗಿಸಲು ಏನು ಮಾಡಬೇಕು ಅತ್ತೆ ?" ಎಂದು ಕೇಳಿದ

" ಪ್ರಶ್ನೆ ಕೇಳಬಹುದು ಉತ್ತರ ಹೇಳುವುದು ಸುಲಭವಲ್ಲ " ಎಂದು ಹೇಳಿ ರತ್ನಮ್ಮ ಒಳಗೆ ಹೋದಳು ಅವಳು ಹಿಂದಿರುಗಲು ಸ್ವಲ್ಪ ಹೊತ್ತಾಯಿತು ಫಲಾಹಾರ ಮುಗಿಸಿಕೊಂಡು ಕೈಯಲ್ಲಿ ಎಲೆ ಅಡಿಕೆ ತಟ್ಟೆ ಹಿಡಿದುಕೊಂಡು ಬಂದಳು ತಾಬೂಲರಾಗದಿಂದ ಅವಳ ತುಟಿಗಳು ಕೆಂಪಾಗಿದ್ದವು. ತಟ್ಟೆ ಮೇಜಿನ ಮೇಲಿಟ್ಟು ಹೇಳಿದಳು

" ನೀನು ಲತಾನ ಪ್ರೀತಿಸುವುದಿಲ್ಲವೇ ?"

" ಪ್ರೀತಿಸದೆ ಉಂಟೆ ? ಅವಳು ನನ್ನ ಹೆಂಡತಿ "

" ಹಾಗಿದ್ದರೆ ಅವಳೇನಾದಳು, ಎಲ್ಲಿಗೆ ಹೋದಳು ಎಂದು ನಿನ್ನ ಮನಸ್ಸು ಸ್ವಲ್ಪ ಕೂಡ ಕಾತುರಗೊಳ್ಳಬೇಡವೇ ?"

" ಎಲ್ಲಿ ಹೋಗುತ್ತಾಳೆ ? ಪದ್ಮಳ ಮನೆಯಲ್ಲಿ ಮಲಗಿರಬಹುದು "

" ಅಥವಾ ಜೋಷಿಯ ಸಂಗಡಿರಬಹುದು ನಿನ್ನ ಭಾಗಕ್ಕೆ ಎರಡೂ ಒಂದೇ ಎಂದು ಕಾಣುತ್ತದೆ "

" ನನಗೆ ಜೋಷಿಯ ವಿಚಾರದಲ್ಲಿ ಸಂದೇಹವಿದ್ದಿದ್ದರೆ ಅಲ್ಲಿಗೆ ಕೆಲಸಕ್ಕೆ ಹೋಗುವುದನ್ನು ನಿಲ್ಲಿಸುತ್ತಿದ್ದೆ "

"ನಿನಗೆ ಪ್ರಪಂಚದ ಅನುಭವವಿದ್ದಿದ್ದರೆ ಹಾಗೆ ಹೇಳುತ್ತಿರಲಿಲ್ಲ. ಜೋಷಿ ಸಂನ್ಯಾಸಿಯೇ ಆಗಿದ್ದರೂ ಲತಾಂಗಿಯಂತಹ ಸುಂದರ ಯುವತಿಯನ್ನು ಕಂಡು ಮನಸ್ಸು ಚಲಿಸದಿರುವುದು ಸಾಧ್ಯವಲ್ಲ ಹೆಣ್ಣು ಉರಿಯುವ ಬೆಂಕಿ, ಪುರುಷನು ಘೃತಭಾಂಡ. ಬೆಂಕಿತಾಕಿದಾಗ ತುಪ್ಪ ಕರಗುವುದು ಸಹಜ."

" ನೀನು ನನ್ನ ಮನಸ್ಸಿನಲ್ಲಿ ಸಂದೇಹದ ಬೀಜ ನಡೆತ್ತಿರುವೆ ಅತ್ತೆ "

" ಲತಾಂಗಿಯನ್ನು ನೀನು ಪ್ರೀತಿಸುವೆಯೋ ಇಲ್ಲವೋ ಎಂಬುದನ್ನು

ತಿಳಿಯುವುದು ಅದರ ಉದ್ದೇಶ ಬೆಂಗಳೂರಿಗೆ ಬಂದಾಗಿನಿಂದ ನೋಡುತ್ತಿದ್ದೇನೆ ನಿನ್ನ ಮುಖ ಉತ್ತರಕ್ಕಾದರೆ ಅವಳ ಮುಖ ದಕ್ಷಿಣಕ್ಕೆ ಪರಸ್ಪರ ಅಪರಿಚಿತರಂತೆ ನಡೆದು ಕೊಳ್ಳುತ್ತಿದ್ದೀರಿ ನನಗಿದು ಸರಿ ತೋರುವುದಿಲ್ಲ."

"ಅದಕ್ಕೆ ನಾನೇನು ಮಾಡಲಿ? ಮಗಳಿಗೆ ನೀನೇ ಬುದ್ಧಿ ಹೇಳು"

"ಹೇಳಿದ್ದಾಯಿತು ಅವಳ ಉತ್ತರವೇನು ಗೊತ್ತೇ?"

ಮಂಗೇಶ ಕುತೂಹಲದಿಂದ ಅತ್ತೆಯ ಮುಖ ನೋಡಿದ

"ಮದುವೆಯಾದ ಮಾತ್ರಕ್ಕೆ ನಾನು ಅವರಿಗೆ ದೇಹ ಮಾರಿಕೊಂಡಿಲ್ಲ ಎನ್ನುತ್ತಾಳೆ ಗಯ್ಯಾಳಿ ಕಾಮದ ಯಂತ್ರವಲ್ಲವಂತೆ ಅವಳು ಹಾಗಾದರೆ ಮದುವೆಯಾದದ್ದು ಕಾಡು ಬೆಕ್ಕುಗಳಂತೆ ಮೂರು ಹೊತ್ತೂ ಕಚ್ಚಾಡುವುದಕ್ಕೇ? ಎಂದು ನಾನು ಕೇಳಿದೆ"

ಮಂಗೇಶ ಅತ್ತೆಯ ಮಾತುಗಳನ್ನು ನೀರವವಾಗಿ ಕೇಳುತ್ತಿದ್ದ ಆ ಸಂದರ್ಭದಲ್ಲಿ ಏನು ಹೇಳಬೇಕೆಂಬುದು ಅವನಿಗೆ ಹೊಳೆಯಲಿಲ್ಲ.

"ವೇಶ್ಯೆಯಾಗಲಿ, ಗೃಹಿಣಿಯಾಗಲಿ, ಹೆಣ್ಣು ಜನ್ಮದ ಸಾರ್ಥಕತೆ ಪುರುಷನ ಸಮಾರಾಧನೆಯಲ್ಲಿ. ಅವನ ಸುಖಕ್ಕೆ ನೆರವಾಗುವುದು ಅವಳ ಕೆಲಸ. ವಿದ್ಯೆಯ ದರ್ಪದಲ್ಲಿ ಲತಾಂಗಿ ಅದನ್ನು ಮರೆತಿದ್ದಾಳೆ. ನೀನು ಬಲಾತ್ಕಾರದಿಂದಾದರೂ ಈ ಪಾಠವನ್ನು ಅವಳಿಗೆ ಕಲಿಸಬೇಕಾಗಿತ್ತು"

ಮಂಗೇಶ ಹಿಂದೆಯೇ ಆ ಪ್ರಯತ್ನ ಮಾಡಿ ವಿಫಲನಾಗಿದ್ದ ಮಗಳಿಂದ ತನಗಾದ ಸೋಲನ್ನು ತಾಯಿಯ ಮುಂದೆ ಒಪ್ಪಿಕೊಳ್ಳಲು ಅವನು ಸಿದ್ಧನಾಗಿರಲಿಲ್ಲ ಹಲ್ಲು ಕಿರಿದು ಹೇಳಿದ—"ನಾನು ಹಾಗೆ ಮಾಡಿದ್ದರೆ ನೀನೇ ನನ್ನನ್ನು ದೂರುತ್ತಿದ್ದೆ"

"ಕುದುರೆಯ ಅಗಡುತನಕ್ಕೆ ಸವಾರನನ್ನು ಯಾರಾದರೂ ದೂರುತ್ತಾರೆಯೇ! ಕಾರ್ಯವಾಸಿ ಎಲ್ಲಾ ಉಪಾಯಗಳನ್ನೂ ಅನುಸರಿಸಬೇಕು. ಹೆಣ್ಣನ್ನೊಲಿಸುವ ವಿದ್ಯೆಯನ್ನು ನೀನು ಕಲಿತಂತೆಯೇ ಕಾಣುವುದಿಲ್ಲ"

"ಅದರಲ್ಲಿ ಕಲಿಯತಕ್ಕದ್ದೇನಿದೆ?"

ಮನಸ್ಸಿನ ಲಜ್ಜೆಯನ್ನು ಮರೆ ಮಾಜಲು ಮಂಗೇಶ ಈ ಪ್ರಶ್ನೆ ಕೇಳಿದ. ಈ ಅಸಹಜ ಸಂಭಾಷಣೆಯನ್ನು ಸಹಜವಾಗಿ ಹೇಗೆ ಮುಗಿಸುವುದು ಎಂಬುದು ಅವನ ಯೋಚನೆಯಾಗಿತ್ತು.

ರತ್ನಮ್ಮ ಅಳಿಯನ ಸಮೀಪಕ್ಕೆ ಬಂದು ತೀಕ್ಷ್ಣ ದೃಷ್ಟಿಯಿಂದ ಅವನ ಮುಖ ನೋಡುತ್ತಾ ತಲೆಯ ಮೇಲೆ ಕೈಯಿಟ್ಟು ಹೇಳಿದಳು "ಕಲಿಯಬೇಕಾದ್ದು ಬೆಟ್ಟದಷ್ಟಿದೆ, ಮಂಗೇಶ ಸ್ತ್ರೀ ಪುರುಷಸಂಬಂಧ ಕೇವಲ ಪಶು ಕ್ರಿಯೆಯಲ್ಲ ಕಲೆಯ ಉಗಮ, ಪ್ರೇಮದ ಪರಾಕಾಷ್ಠೆ, ಸೃಷ್ಟಿಯ ಆಶ್ರಯ ಎಲ್ಲ ವಿದ್ಯೆಗಳಿಗೆ ಮಿಗಿಲಾದದ್ದು ಆ ವಿದ್ಯೆ ವಿದ್ಯೆ ಅವಿದ್ಯೆಗಳ ಮೂಲವೇ ಅದು, ಅದರ ಅಭಾವದಿಂದ ನಿನ್ನ ಬಾಳು ನೀರಸವಾಗಿದೆ ಲತಾಂಗಿ ನಿನ್ನ ಕೈಬಿಟ್ಟು ಹೋಗುತ್ತಿದ್ದಾಳೆ ''

"ಅದಕ್ಕೆ ನಾನೇನು ಮಾಡಬೇಕು ?"

ಮಂಗೇಶ ದುರ್ಬಲ ಕಂಠದಿಂದ ಪ್ರಶ್ನಿಸಿದ

''ಆ ಪ್ರೇಮಪಾಠ ನಾನು ನಿನಗೆ ಕಲಿಸ ಬೇಕೇ ?" ಎಂದು ರತ್ನಮ್ಮ ನಕ್ಕಳು

ಬೆರಳುಗಳು ಭಾವನೆಗಳಿಗೆ ವಿದ್ಯುತ್‌ವಾಹಕ ತಂತಿಗಳಂತೆ ಮಾನವನ ಅಂತರಂಗದ ಭಾವನೆ ಬೆರಳುಗಳ ಮುಖಾಂತರ ಪ್ರವಾಹ ರೂಪವಾಗಿ ಹೊರಗೆ ಹರಿಯುವುವು ಉಪದೇಶಕೊಡುವ ಗುರು, ಜನತೆಯನ್ನು ಹರಸುವ ಪ್ರವಾದಿ ಮರುಳುಗೊಳಿಸುವ ಮಾಂತ್ರಿಕ, ಆಜ್ಞೆಯೀಯುವ ಅಧಿಕಾರಿ, ಪ್ರಿಯನನ್ನು ಒಲಿಸುವ ಪ್ರಣಯಿನಿ ಇವರಲ್ಲ ಬರಳುಗಳ ಈ ವಿದ್ಯುವಾಹಕ ಶಕ್ತಿಯನ್ನು ತಮ್ಮ ಉದ್ದೇಶ ಸಾಧನೆಗಾಗಿ ಉಪಯೋಗಿಸಿಕೊಳ್ಳುವರು. ತಾಂತ್ರಿಕ ಸಾಧನೆಯಲ್ಲಿ ಮುದ್ರೆಗೆ ಕೊಡಲ್ಪಟ್ಟಿರುವ ಪ್ರಾಮುಖ್ಯತೆಗೆ ಬೆರಳುಗಳ ಈ ಶಕ್ತಿಯೇ ಕಾರಣ

ರತ್ನಮ್ಮ ಮಂಗೇಶನ ತಲೆಯ ಮೇಲೆ ಕೈಯಿಟ್ಟಾಗ ಬೆರಳುಗಳ ಮುಖಾಂತರ ಅವಳ ಅಂತರಂಗದ ಅಸಹಜ ಕಾಮನೆ ತೀಕ್ಷ್ಣವಾದ ವಿದ್ಯುತ್ಪ್ರವಾಹದಂತೆ ಅವನ ದೇಹವನ್ನು ಪ್ರವೇಶಿಸಿ ಅನುಭವದ ಉತ್ಪಾದನ ಕೇಂದ್ರಗಳನ್ನು ಕೆಣಕಿ, ಅನುರೂಪ ಪ್ರತಿಸ್ಪಂದನೆ ಪಡೆಯಲಾರದೆ ಪುನಃ ಅವಳ ದೇಹಕ್ಕೇ ಹಿಂದಿರುಗಿತು ಕ್ಷಣಿಕವಾದ ಅದರ ಆಘಾತದಿಂದ ಮಂಗೇಶನ ಮಾನಸಿಕ ಶಕ್ತಿ ಲುಪ್ತವಾಗಿ ದೇಹ ಜಡವಾಯಿತು ಚಲಿಸಲು ಅಶಕ್ತನಂತೆ ಭಾವಿಸಿದ ಕ್ಷಣಕಾಲ ಉಸಿರಾಡಲೂ ಮರೆತ

"ಜಡದಲ್ಲಿ ಶಕ್ತಿ ತುಂಬುವುದು ಸಾಮಾನ್ಯವೇ ? ನಿನ್ನಂತಹವನ ಪತ್ನಿ

ಯಾದ ಮೇಲೆ ಲತಾ ಮತ್ತೇನು ಮಾಡುವಳು ? ರಾತ್ರಿ ಹೊತ್ತಾಗಿದೆ. ನೀನು ಹೋಗಿ ಮಲಗು "

ಎಂದು ರತ್ನಮ್ಮ ಒಳಗೆ ಹೋದಳು ಮಂಗೇಶ ಬಹಳ ಹೊತ್ತು ಅಲ್ಲಿಯೇ ಕುಳಿತಿದ್ದ ಕ್ರಮೇಣ ದೇಹದಲ್ಲಿ ಶಕ್ತಿ ಮೂಡಿತು

ರತ್ನಮ್ಮ ಹಿಂದಿರುಗಿ ಬಂದಾಗ '' ಪದ್ಮಳ ಮನೆಗೆ ಹೋಗಿ ಲತಾನ ಕರೆತರುತ್ತೇನೆ ಅತ್ತೆ " ಎಂದ ಅವನು.

" ಇಷ್ಟು ಹೊತ್ತಲ್ಲಿ ಒಬ್ಬನೇ ಹೋಗಲು ಭಯವಾಗುವುದಿಲ್ಲವೇ ? ಸುಮ್ಮನೆ ಹೋಗಿ ಮಲಗು ಬೀದಿ ಬಸವಿ ಒಂದು ರಾತ್ರಿ ಹೊರಗಿದ್ದರೇ ನಾಯಿತು ? ಬೆಳಿಗ್ಗೆ ತಾನಾಗಿ ಬರುತ್ತಾಳೆ "

ಮಂಗೇಶ ಮಾರುತ್ತರ ಕೊಡಲು ಶಕ್ತನಾಗಲಿಲ್ಲ ಎದ್ದು ಕೊಟಡಿಗೆ ಹೋಗಿ ಮಲಗಿದ ಪಾರ್ಶ್ವದ ಮಂಚದಲ್ಲಿ ಪತ್ನಿ ಇಲ್ಲದಿದ್ದುದು ಅವನಿಗೆ ಭೀತಿ ದುಃಖಗಳನ್ನುಂಟುಮಾಡಿತು ಮದುವೆಯಾದ ಮೇಲೆ ಲತಾಂಗಿ ಸ್ವೇಚ್ಛೆಯಿಂದ ಮನೆಯ ಹೊರಗೆ ರಾತ್ರಿ ಕಳೆಯುತ್ತಿರುವುದು ಇದೇ ಮೊದಲ ಸಾರಿ ಅವಳೇನಾದಳು ? ಎಲ್ಲಿರುವಳು ? ಎಂಬುದನ್ನು ತಿಳಿಯಲೂ ತಾನು ಪ್ರಯತ್ನಿಸಲಿಲ್ಲ ಹುಡುಕಿ ಮನೆಗೆ ಕರೆತರಲಿಲ್ಲ ಮಗಳ ವಿಚಾರದಲ್ಲಿ ರತ್ನಮ್ಮನ ಉಪೇಕ್ಷೆ, ಕಟುವಾದ ಮಾತುಗಳು ಅವನ ಮನಸ್ಸನ್ನು ಚುಚ್ಚಿದವು. ಮಗಳು ಹಿಂದಿರುಗಬೇಕೆಂಬ ಕಾತರ ಅವಳಗಿದ್ದಂತೆ ಕಾಣಲಿಲ್ಲ ನಡು ಮನೆಯಲ್ಲಿ ಹಾಸಿಗೆ ಹಾಸಿಕೊಂಡು ಮಲಗಿ ಆಗಲೇ ನಿದ್ರಾಮಗ್ನೆಯಾಗಿ ದ್ದಳು.

ಮಂಗೇಶನಿಗೆ ನಿದ್ರೆ ಬರಲಿಲ್ಲ ಬಹಳ ಹೊತ್ತು ಹಾಸಿಗೆಯ ಮೇಲೆ ಹೊರಳಾಡುತ್ತಿದ್ದ ಒಂದೆರಡು ಸಾರಿ ಜೊಂಪು ಹತ್ತಿ, ನಡುಮನೆಯಲ್ಲಿ ಕೇಳಿಬರುತ್ತಿದ್ದ ಗೊರಕೆಯ ಶಬ್ದದಿಂದ ಬೆಚ್ಚಿ ಎಚ್ಚರಗೊಂಡ ತನ್ನನ್ನು ಅದುಮಿ ಹಿಡಿದು ಹೆಡೆಮುಡಿ ಕಟ್ಟಬಲ್ಲ ಶಕ್ತಿಯೊಂದು ಆ ಮನೆಯಲ್ಲಿ ಚಲಿಸು ತ್ತಿದ್ದಂತೆ ಅವನಿಗೆ ಭಾಸವಾಯಿತು. ಆ ಶಕ್ತಿಯ ಒತ್ತಡದಿಂದ ಕ್ರಮೇಣ ತನಗೆ ನಿದ್ರೆ ಬರುತ್ತಿದೆಯೆಂದು ನೆನೆಸಿದ. ಅದರಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿ ವಿಫಲವಾಗಿ ನಿದ್ರೆ ಮಾಡಿದ.

ನಿಶ್ಶಬ್ಧ ನಿಶೀಥ ! ಎಲ್ಲಾ ಕಡೆ ಶಾಂತಿ ನೆಲೆಸಿತ್ತು. ನಿದ್ರಾಜಡನಾದ

ಮಂಗೇಶನ ಪ್ರಸುಪ್ತ ಭಾವನೆಗಳು ಮಾತ್ರ ಜಾಗ್ರತವಾಗಿ ಕಳೆದ ದಿನಗಳ ಕನಸೊಂದನ್ನು ಹೆಣೆಯುತ್ತಿದ್ದವು

— ೩ —

ಪರೀಕ್ಷನ ಹಣದಲ್ಲಿ ಮಂಗೇಶ ಕೊಂಡ ಗೃಹೋಪಕರಣ ವಸ್ತುಗಳಲ್ಲಿ ಜೋಡಿ ಮಂಚವೂ ಸೇರಿತ್ತು ಇಬ್ಬರಿಗಾಗುವ ಒಂದೇ ದೊಡ್ಡ ಮಂಚ ತೆಗೆದು ಕೊಳ್ಳುವುದು ಮಂಗೇಶನ ಉದ್ದೇಶ ಆದರೆ ಪದ್ಮಾ ಒಪ್ಪಲಿಲ್ಲ "ಜೋಡಿ ಮಂಚ ಈಗಿನ ಪ್ಯಾಷನ್ ಬೇಕಾದರೆ ಒಂದು ಗೂಡಿಸಬಹುದು, ಇಲ್ಲವೇ ಪ್ರತ್ಯೇಕವಾಗಿ ಉಪಯೋಗಿಸ ಬಹುದು" ಎಂದು ಹೇಳಿದ್ದಳು ಜೋಡಿ ಮಂಚಕ್ಕೆ ತಕ್ಕಂತೆ ಪ್ರತ್ಯೇಕ ಹಾಸಿಗೆ ದಿಂಬುಗಳೂ ಸಿದ್ಧವಾಗಿದ್ದವು

ಹೊಸ ಮನೆಗೆ ಬಂದ ಮೇಲೆ ಒಂದು ದಿನ ಮಾತ್ರ ಎರಡು ಮಂಚಗಳು ಒಟ್ಟಿಗಿದ್ದವು ಮರುದಿನ ಲತಾಂಗಿ ಅವುಗಳನ್ನು ಪ್ರತ್ಯೇಕಿಸಿ ಮಧ್ಯೆ ಟೇಬಲ್ ಹಾಕಿದ್ದಳು. ಮಂಗೇಶ ಅದನ್ನು ನೋಡಿ ಸಿಟ್ಟಿನ ದನಿಯಿಂದ "ಏಕೆ ಲತಾ, ಹೀಗೆ ಮಾಡಿಟ್ಟೆ ?" ಎಂದು ಕೇಳಿದ

"ನನಗೆ ಸಮೀಪದಲ್ಲಿ ಯಾರಾದರೂ ಇದ್ದರೆ ನಿದ್ರೆ ಬರುವುದಿಲ್ಲ"— ಎಂದು ಲತಾ ಸಹಜವಾಗಿ ಉತ್ತರ ಕೊಟ್ಟಿದ್ದಳು.

ತರುವಾಯ ಆ ಕೊಟಡಿಯಲ್ಲಿ ಮಂಗೇಶನ ಪುರುಷ ದರ್ಪಕ್ಕೆ ಕ್ಲೇಶ ದಾಯಕವಾದ ಅನೇಕ ಘಟನೆಗಳು ನಡೆದಿದ್ದವು ಲತಾ ಮಲಗಿ ಏನಾದ ರೊಂದು ಪುಸ್ತಕ ಹಿಡಿದು ಬಿಟ್ಟರೆ ಅವಳ ಏಕಾಂತವನ್ನು ಭೇದಿಸುವುದು ಮಂಗೇಶನಿಗೆ ಸಾಧ್ಯವಾಗುತ್ತಿರಲಿಲ್ಲ. ಮಾತಾಡಿದರೆ ಹತ್ತು ಮಾತಿಗೊಂದು ಸಾರಿ ಉತ್ತರ ಕೊಡುವಳು. ಧೈರ್ಯಮಾಡಿ ಮಂಚದ ಹತ್ತಿರ ಹೋದರೆ ನಡುಮನೆಗೆ ಹೋಗಿ ಚಾಪೆಯ ಮೇಲೆ ಮಲಗಿ ಬಿಡುವಳು. ಪತಿ ಪತ್ನಿಯರ ಮಧ್ಯೆ ನಡೆಯುತ್ತಿದ್ದ ಈ ಮನೋಬಲದ ಹೋರಾಟದಲ್ಲಿ ಎಂದಾದ ರೊಂದು ದಿನ ಲತಾಂಗಿಯ ಅನುಕಂಪ, ಉಪೇಕ್ಷೆಯ ಫಲವಾಗಿ ಮಂಗೇಶನಿಗೆ ವಿಜಯದೊರಕುವುದು. ಅಂತಹ ಸಂದರ್ಭಗಳಲ್ಲಿ ಲತಾಂಗಿ ಅನಿಚ್ಛೆ

ಯಿಂದ ದೇಹವನ್ನು ಸ್ತಂಭಿಸಿ ಅದೊಂದು ನಿರ್ಜೀವ ಜಡವಸ್ತುವೆಂದು ಭಾವಿಸುವಳು ಪುರುಷರು ಬಯಸುವ ಸಹಾನುಭೂತಿಯನ್ನು ನಿರಾಕರಿಸುವಳು. ಈ ಹಿಮದ ಕೋಟೆಯನ್ನು ಭೇದಿಸಿ ಲತಾಂಗಿಯ ಸುಪ್ತ ಪ್ರೇಮ ಕಾಮಗಳನ್ನು ಎಚ್ಚರಿಸ ಬಲ್ಲ ಅನುನಯ ಚಾತುರ್ಯಗಳು ಮಂಗೇಶನಿಗಿರಲಿಲ್ಲ. ಅವನ ಆಸೆ ಉದ್ಯಮಗಳು ಪಶುಕ್ರಿಯೆಯಲ್ಲಿ ಪರ್ಯವಸಾನವಾಗುತ್ತಿತ್ತು ಪತ್ನಿಯ ಆತ್ಮವನ್ನಿರಲಿ, ದೇಹವನ್ನು ಕೂಡಾ ಅವನು ಪೂರ್ಣ ರೀತಿಯಿಂದ ಪಡೆಯಲು ಅಶಕ್ತನಾಗಿದ್ದನು.

ತನ್ನ ಈ ದೌರ್ಬಲ್ಯದ ಚಿಂತೆ ಮಂಗೇಶನ ಹೃದಯವನ್ನು ತಿರಣಿಯ ಹುಳದಂತೆ ಕೊರೆಯುತ್ತಿತ್ತು ರತ್ನಮ್ಮನ ಚುಚ್ಚು ಮಾತುಗಳು ಆ ಚಿಂತೆಯನ್ನು ಮತ್ತಷ್ಟು ಹೆಚ್ಚಿಸಿದ್ದವು ಅತ್ತೆಯ ಸಲಹೆಯ ವಿರುದ್ಧ ಪದ್ಮಳ ಮನೆಗೆ ಹೋಗಿ ಹೆಂಡತಿಯನ್ನು ಕೈಹಿಡಿದು ಎಳೆತರುವ ಧೈರ್ಯ ಅವನಿಗಿರಲಿಲ್ಲ. ಬಹಳ ಹೊತ್ತು ಚಿಂತಿಸುತ್ತ ಮಲಗಿದ್ದು ಕೊನೆಗೆ ನಿದ್ರೆ ಹತ್ತಿ ಒಂದು ಕನಸು ಕಂಡ

ಹದಿನೆಂಟು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಆಗ ಮಂಗೇಶನಿಗೆ ಎಂಟು ವರ್ಷ ಅವರ ತಂದೆ ಶಿವಮೊಗ್ಗೆಯಲ್ಲಿ ಸಾಗುವಾನಿ ವ್ಯಾಪಾರ ಮಾಡುತ್ತಿದ್ದರು ಒಂದೊಂದು ಸಾರಿ ಕಾಡಿಗೆ ಹೋದರೆ ವಾರಗಟ್ಟಲೆ ಹಿಂದಿರುಗುತ್ತಿರಲಿಲ್ಲ. ಷರೀಫನಿಗೂ ಅವನ ತಂದೆಗೂ ಆಗಿನಿಂದ ಸ್ನೇಹ ವ್ಯಾಪಾರಕ್ಕೆ ಬೇಕಾದ ಬಂಡವಳವನ್ನೂ ಷರೀಫನೇ ಕೊಟ್ಟಿದ್ದ ಅವನ ತಂಗಿ ಲಕ್ಷ್ಮೀ ಆಗ ಇನ್ನೂ ಹುಟ್ಟಿರಲಿಲ್ಲ.

ಒಂದು ದಿನ ಮಧ್ಯಾಹ್ನ ಸ್ಕೂಲು ಮುಗಿಯುವ ಮೊದಲೆ ಮನೆಗೆ ಬಂದ. ಬಾಗಿಲು ಹಾಕಿತ್ತು ಒಂದು ಸಾರಿ ಮೆಲ್ಲನೆ ತಟ್ಟಿದ ಚಿಲಕ ಹಾಕಲು ಮರೆತಿದ್ದುದರಿಂದ ಬಾಗಿಲು ತಾನಾಗಿ ತೆರೆದುಕೊಂಡಿತು ನಿಶ್ಶಬ್ದವಾಗಿ ಒಳಗೆ ಹೋದ. ನಡುಮನೆಯಲ್ಲಿ ಯಾರೂ ಇರಲಿಲ್ಲ. ಮಲಗುವ ಮನೆಯ ಬಾಗಿಲು ಮುಚ್ಚಿತ್ತು. ಒಳಗೆ ಯಾರೋ ಮಾತಾಡುತ್ತಿದ್ದರು. ಮಧ್ಯೆ ಮಧ್ಯೆ ನಿಟ್ಟುಸಿರಿನ ಶಬ್ದ, ಮುಲುಗುವ ದನಿ ಮಂಗೇಶ ಮುಂದೆ ಹೋಗಿ ಬಾಗಿಲು ತಳ್ಳಿದ. ಒಳಗೆ ಕಂಡ ದೃಶ್ಯ ಅವನನ್ನು ಸ್ತಂಭಿತನಾಗಿ ಮಾಡಿತು. ಬಲಿಪೀಠದ ಮೇಲಿಡಲ್ಪಟ್ಟ ಯಜ್ಞಪಶುವಿನಂತೆ ತಾಯಿ

ನಿಶ್ಚೇಷ್ಟಿತೆಯಾಗಿ ಬಿದ್ದಿದ್ದಾಳೆ ಬಾಯಲ್ಲಿ ನಿಟ್ಟುಸಿರು, ಮುಖದಲ್ಲಿ ನಗು, ಪಾರ್ಶ್ವದಲ್ಲಿ ಷರೀಫ್.

ಮಂಗೇಶನ ಬಾಯಿಂದ ಮಾತು ಹೊರಡಲಿಲ್ಲ ಕಿಟ್ಟನೆ ಕಿರಚಿ ಕೊಂಡು ಹೊಸಿಲಮೇಲೆ ಬಿದ್ದು ಬಿಟ್ಟ

ಕನಸಿನಲ್ಲಿ ಅಳಿಯ ಕಿರಿಚಿದ್ದನ್ನು ಕೇಳಿ ರತ್ನಮ್ಮ ಎದ್ದು ಬಂದಳು. ಮೈ ಮುಟ್ಟಿ ಎಚ್ಚರಗೊಳಿಸಿ "ಏಕಪ್ಪ ? ಏನಾಯಿತು ?" ಎಂದಳು.

"ಏನೋ ಕೆಟ್ಟ ಕನಸು ಕಂಡೆ ಅತ್ತೆ, ಭಯವಾಯಿತು, ಕಿರಿಚಿಕೊಂಡೆ"

"ಹೋಗಲಿ ಈ ಸಾರಿ ನಿದ್ರೆಮಾಡು ನಿನಗೆ ಭಯವಾದರೆ ನಾನೂ ಇಲ್ಲಿಯೇ ಮಲಗುತ್ತೇನೆ"

ಎಂದು ಹೇಳಿ ರತ್ನಮ್ಮ ಕೊಟಡಿಯಲ್ಲಿ ಲತಾಂಗಿಯ ಮಂಚದ ಮೇಲೆ ಮಲಗಿದಳು. ಬೇಡವೆನ್ನಲು ಮಂಗೇಶನಿಗೆ ಧೈರ್ಯವಾಗಲಿ ಲ್ಲ

ಪುನಃ ನಿದ್ರೆ ಬಂದಾಗ ಕನಸು ಮುಂದುವರಿಯಿತು. ಮಂಗೇಶ ಹೊಸಿಲ ಹತ್ತಿರ ನಿಂತಿದ್ದಾನೆ ಎದುರಿಗೆ ಷರೀಫ್ ಜೇಬಿನಿಂದ ಹತ್ತು ರೂಪಾಯಿನ ನೋಟು ತೆಗೆದು "ಇದನ್ನು ಇಟ್ಟುಕೋ ಮಗು, ನಾನು ಇಲ್ಲಿಗೆ ಬಂದಿದ್ದೆನೆಂದು ಯಾರಿಗೂ ಹೇಳಬೇಡ" ಎನ್ನುತ್ತಿದ್ದಾನೆ ಮಂಗೇಶ ಹಣ ತೆಗೆದುಕೊಳ್ಳದೆ ಷರೀಫನನ್ನು ದುರುಗುಟ್ಟಿ ನೋಡುತ್ತಾನೆ ತಾಯಿ ಮನೆಯೊಳಗೆ ನಿಂತು ನೋಟು ತೆಗೆದುಕೊಳ್ಳುವಂತೆ ಮಗನಿಗೆ ಸನ್ನೆ ಮಾಡುತ್ತಿದ್ದಾಳೆ ಮಂಗೇಶ ತಲೆಯಾಡಿಸಿ "ಅಪ್ಪಬರಲಿ ಹೇಳುತ್ತೇನೆ" ಎನ್ನುತ್ತಾನೆ ಷರೀಫನ ಕಂಕುಳಲ್ಲಿ ತಾಮ್ರದ ಹಿಡಿಹಾಕಿದ ಒಂದು ಸಣ್ಣ ದೊಣ್ಣೆ ಅದರಿಂದ ಅವನು ಮಂಗೇಶನ ತಲೆಗೆ ಹೊಡೆಯುತ್ತಾನೆ ತಲೆ ಎರಡು ಹೋಳಾಗುತ್ತದೆ ಮಂಗೇಶ ಕನಸಲ್ಲಿ ಚೀರುತ್ತಾನೆ ಬಾಯಿಂದ ಶಬ್ದ ಹೊರಡುವುದಿಲ್ಲ ತಾಯಿ ಹತ್ತಿರ ಬಂದು ಕೈಯಿಂದ ಎರಡು ಹೋಳುಗಳು ಸೇರುವಂತೆ ಅದುಮಿ ಹಿಡಿಯುತ್ತಾಳೆ ಎಚ್ಚರ ತಪ್ಪುತ್ತದೆ ಬಹಳ ಹೊತ್ತು ಹಾಗೆಯೇ ಮಲಗಿರುತ್ತಾನೆ. ಆ ಮೇಲೆ ಎಚ್ಚರವಾದಾಗ ತಾಯಿಯ ತೊಡೆಯ ಮೇಲೆ ತಲೆಯಿಟ್ಟು ಮಲಗಿದ್ದಾನೆ ತಾಯಿ ತಲೆ ಸವರುತ್ತಾ ಸಂತೈಸುತ್ತಿದ್ದಾಳೆ

ಮಂಗೇಶನಿಗೆ ನಿಜವಾಗಿ ಎಚ್ಚರವಾದಾಗ ನೆಲದಲ್ಲಿ ಅತ್ತೆಯ ತೊಡೆಯ

ಮೇಲೆ ಮಲಗಿದ್ದ. ರತ್ನಮ್ಮ ತಲೆ ಸವರುತ್ತಾ "ಪೆಟ್ಟಾಯಿತೆ ಮಂಗೇಶ?" ಎಂದು ಕೇಳಿದಳು.

"ಏನಾಯಿತು. ಅತ್ತೆ ?"

"ದೊಪ್ಪನೆ ಕೆಳಗೆ ಬಿದ್ದ ಸದ್ದಾಯಿತು ಎದ್ದು ದೀಪ ಹಚ್ಚಿ ನೋಡಿದಾಗ ನೀನಿಲ್ಲಿ ಬಿದ್ದಿದ್ದೆ ತಲೆ ಗಾಯವಾಗಿ ರಕ್ತ ಸುರಿಯುತ್ತಿತ್ತು."

ಮಂಗೇಶ ಮುಟ್ಟಿ ನೋಡಿಕೊಂಡ ಹಣೆಯ ಮೇಲೆ ಚಿಕ್ಕದಾಗಿ ಗಾಯವಾಗಿತ್ತು ರತ್ನಮ್ಮ ಅಳಿಯನನ್ನೆಬ್ಬಿಸಿ ಕುರ್ಚಿಯ ಮೇಲೆ ಕುಳ್ಳಿರಿಸಿ ನೀರಿಂದ ಗಾಯ ತೊಳೆದು ತಲೆಗೆ ಬ್ಯಾಂಡೇಜ್ ಕಟ್ಟಿದಳು

"ಪುನಃ ಅದೇ ಕನಸು, ಹೊರಗೆ ಹೋಗಲು ಎದ್ದವನು ಎಡವಿದೆ ಎಂತ ಕಾಣುತ್ತದೆ"

ಎಂದು ಮಂಗೇಶ ಸಮಾಧಾನ ಹೇಳಿದ

ರತ್ನಮ್ಮ ನೀರು ತಂದು ಕೊಟ್ಟು ಹೇಳಿದಳು "ಲತಾ ವಿಚಾರವಾಗಿ ನೀನು ಬಹಳ ಯೋಚಿಸಿದಂತೆ ಕಾಣುತ್ತದೆ ಅವಳು ಬೆಳಿಗ್ಗೆ ಖಂಡಿತ ಬರುತ್ತಾಳೆ. ಅಲ್ಲಿಯವರೆಗೆ ಸಮಾಧಾನದಿಂದ ನಿದ್ರೆ ಮಾಡು. ಕತ್ತಲಲ್ಲಿ ನಿನಗೆ ಭಯವಾಗುವುದಾದರೆ ದೀಪ ಉರಿಯುತ್ತಿರಲಿ"

ಮಂಗೇಶ ಸ್ವಲ್ಪ ನೀರು ಕುಡಿದು ಪುನಃ ಮಲಗಿದ ರತ್ನಮ್ಮನೂ ಮಲಗಿದಳು ಎಲ್ಲೋ ಗಡಿಯಾರದಲ್ಲಿ ಮೂರು ಗಂಟೆ ಹೊಡೆಯಿತು. ನಿದ್ರೆ ಬರುತ್ತಲೆ ಮಂಗೇಶ ಮೂರನೆಯ ಸಾರಿ ಕನಸು ಕಂಡ

ದಟ್ಟವಾದ ಅರಣ್ಯ ಲತಾಂಗಿ ಅದರಲ್ಲೆಲ್ಲೋ ಅಡಗಿರುವಳೆಂದು ಅವನ ಭಾವನೆ. ಮರ ಗಿಡಗಳ ಮರೆಯಲ್ಲಿ, ಪೊದರುಗಳ ಅಡಿಯಲ್ಲಿ, ಹಳ್ಳ ತಿಟ್ಟುಗಳಲ್ಲಿ ಎಲ್ಲೆಲ್ಲಿಯೂ ಹುಡುಕುತ್ತಿದ್ದಾನೆ ಬಹಳ ಹೊತ್ತು ಸುತ್ತಿದ ಮೇಲೆ ಕಾಡಿನ ಮಧ್ಯದಲ್ಲಿದ್ದ ಹಳೆಯಕಾಲದ ಮನೆಯೊಂದಕ್ಕೆ ಬಂದಿದ್ದಾನೆ ಅಲ್ಲಿ ಹಿಂದೆ ರಾಜಮಂದಿರವೋ ನಗರವೋ ಇದ್ದಿರಬೇಕು. ಎಲ್ಲಕಡೆ ಪಾಳು ಗೋಡೆಗಳು, ಕಲ್ಲುಗಳ ರಾಶಿ. ಒಂದುಕಡೆ ಮಾತ್ರ ಗೋಡೆ ಛಾವಣಿಗಳು ಭದ್ರವಾಗಿವೆ. ಮಂಗೇಶ ಬಾಗಿಲ ಕಂಡಿಯಿಂದ ಒಳಗೆ ನೋಡುತ್ತಾನೆ ಲತಾಂಗಿ ದೀಪಸ್ತಂಭದ ಮುಂದೆ ಕುಳಿತು ತದೇಕ ಚಿತ್ತದಿಂದ ಏನನ್ನೋ ಓದುತ್ತಿದ್ದಾಳೆ ಮನೆಯೊಳಗಿದ್ದ ಸಾಮಾನು ಸರಂಜಾಮುಗಳು

ಚಲನ ಚಿತ್ರದ ದೃಶ್ಯಕ್ಕಾಗಿ ಅಳವಡಿಸಲ್ಪಟ್ಟಂತಿವೆ. ಲತಾಂಗಿಯ ಹೊರತಾಗಿ ಮನೆಯಲ್ಲಿ ಯಾರೂ ಇದ್ದಂತೆ ಕಾಣಲಿಲ್ಲ

ಮಂಗೇಶ ಪತ್ನಿಯನ್ನು ಕೂಗಿ ಬಾಗಿಲು ತೆರೆಯುವಂತೆ ಹೇಳುತ್ತಾನೆ. ದನಿಯಲ್ಲಿ ಮನಸ್ಸಿನ ಹಂಬಲ ಮೂರ್ತೀಭವಿಸಿದೆ ಬಹಳ ಹೊತ್ತು ಕೂಗಿದರೂ ಲತಾ ಉತ್ತರ ಕೊಡಲಿಲ್ಲ ಪುತ್ತಲಿಯಂತೆ ಸ್ತಂಭಿತೆಯಾಗಿ ಕುಳಿತಿದ್ದಾಳೆ ಕೊನೆಗೆ ಮಂಗೇಶ ನಿರಾಶನಾಗಿ ಕೈಯಿಂದ ಬಾಗಿಲು ಹೊಡೆಯಲು ಪ್ರಾರಂಭಿಸುತ್ತಾನೆ

ಬೀದಿಯ ಬಾಗಿಲು ದಡದಡ ತಟ್ಟಿದ ಶಬ್ಧವಾಗಿ ಮಂಗೇಶನಿಗೆ ಎಚ್ಚರವಾಯಿತು ಹೊರಗೆ ಲತಾಂಗಿ ಬಾಗಿಲು ತಟ್ಟುತ್ತಿದ್ದಳು

ಮಂಗೇಶ ಎದ್ದು ಹೋಗಿ ಬಾಗಿಲು ತೆರೆದ. ಪತ್ನಿಯ ಮುಖ ನೋಡಿ ಅವನಿಗೆ ಹಿಡಿಸಲಾರದಷ್ಟು ಆನಂದವಾಯಿತು

ಲತಾಂಗಿ ಮಲಗುವ ಮನೆಗೆ ಬಂದಳು. ಹಾಸಿಗೆಯ ಮೇಲೆ ಕಣ್ಣೊರೆಸಿ ಕೊಳ್ಳುತ್ತ ಕುಳಿತಿದ್ದ ರತ್ನಮ್ಮ "ಚನ್ನಾಗಿ ಬೆಳಕಾದ ಮೇಲೆ ಬರಬಹುದಾಗಿತ್ತು ಈ ಕತ್ತಲಲ್ಲೇಕೆ ಬಂದೆ? ನೆರೆ ಹೊರೆಯುವರು ಕಾಣುವರೆಂದು ಭಯವಾಯಿತೇನೋ?" ಎಂದು ಮೂದಲಿಸಿದಳು.

"ನೀನೇನೂ ಮಾತಾಡಬೇಡ ಅತ್ತೆ ಸದ್ಯ ಬಂದಳಲ್ಲ." ಎಂದು ಮಂಗೇಶ ಬಿರುದನಿಯಿಂದ ಹೇಳಿದ

"ಹೆಂಡತೀನ ನೋಡಿ ಧೈರ್ಯ ಬಂತೇ ನಿನಗೆ!" ಎಂದು ಹೇಳುತ್ತಾ ರತ್ನಮ್ಮ ಮಂಚದಿಂದಿಳಿದು ನಡುಮನೆಗೆ ಬಂದಳು. ಲತಾ ಮಾತಾಡದೆ ಸುಮ್ಮನೆ ಮಲಗಿಬಿಟ್ಟಳು ಮಂಗೇಶನೂ ಮಾತಾಡಿಸುವ ಪ್ರಯತ್ನ ಮಾಡಲಿಲ್ಲ

ತಾಯಿ ಮತ್ತು ಗಂಡ ಯಾವ ಸಂಪ್ರದಾಯದಲ್ಲಿ ಬೆಳೆದಿದ್ದರೋ ಅದರ ಪರಿಣಾಮವಾಗಿ, ಅಥವಾ ಲತಾಂಗಿಯ ಸ್ವಾತಂತ್ರ ವ್ಯಕ್ತಿತ್ವದ ಫಲವಾಗಿ ಅವಳ ಈ ಒಂದು ದಿನದ ಸಾಹಸವನ್ನು ಕುರಿತು ತಾಯಿಯಾಗಲಿ ಪತಿಯಾಗಲಿ ಅವಳನ್ನು ಪ್ರಶ್ನಿಸಲು ಧೈರ್ಯ ಮಾಡಲಿಲ್ಲ. ಮರುದಿನ ಪ್ರಾತಃಕಾಲ ಎಂದಿನಂತೆ ಎಲ್ಲವೂ ಸಹಜವಾಗಿ ನಡೆದವು

## ಹತ್ತನೆಯ ತರಂಗ

— ೧ —

ಮರುದಿನ ಎಂದಿನಂತೆ ಲತಾಂಗಿ ಕಛೇರಿಗೆ ಹೋಗಿ ತನ್ನ ಕೆಲಸದಲ್ಲಿ ಮಗ್ನಳಾದಳು ಹಿಂದಿನ ರಾತ್ರಿ ಎಂಟು ಗಂಟೆ ಸುಮಾರಲ್ಲಿ ಅವಳು ಕಛೇರಿಗೆ ಬಂದಿದ್ದದ್ದು ಸಂಪಾದಕನಿಗೆ ವರದಿಯಾಗಿತ್ತು ಕಛೇರಿಯಿಂದ ಅವಳು ಸಂಪಾದಕ ಬಿಡಾರಕ್ಕೆ ಹೋದದ್ದನ್ನಾಗಲಿ, ಅಲ್ಲಿಂದ ಕಾರಿಂದ ಹಿಂದಿರುಗಿ ದನ್ನಾಗಲಿ ಯಾರೂ ನೋಡಿರಲಿಲ್ಲ ಕೆಲಸ ಮಾಡುತ್ತಿದ್ದಾಗ ಕ್ಷಣಕಾಲ ಜೋಷಿ ಮತ್ತು ಲತಾಂಗಿಯ ಕಣ್ಣುಗಳು ಬೆರೆತು ಪರಸ್ಪರ ಕ್ಷೇಮ ಸಮಾಚಾರ ವಿನಿಮಯ ಮಾಡಿಕೊಂಡವು ಸಂಪಾದಕೀಯ ಮತ್ತು ಆಡಳಿತ ಕಾರ್ಯಗಳ ಒತ್ತಡ ಬಹಳವಾಗಿದ್ದುದರಿಂದ ಆ ಮೇಲೆ ಎರಡು ಮೂರು ದಿನಗಳು ಅವರು ಏಕಾಂತದಲ್ಲಿ ಒಬ್ಬರನೊಬ್ಬರು ಭೇಟಿಯಾಗಲಿಲ್ಲ ಜೋಷಿ ಒಂದೆರಡುಸಾರಿ ಪದ್ಮಳನ್ನು ಅವಳ ಮನೆಯಲ್ಲಿ ಕಂಡಿದ್ದರೂ ಲತಾಂಗಿಗೆ ಕೊಟ್ಟ ಮಾತಿನಂತೆ ಬಿಡಾರಕ್ಕೆ ಬಂದಿದ್ದ ವಿಚಾರ ತಿಳಿಸಲಿಲ್ಲ

ನಾಲ್ಕನೆಯ ದಿನ ಸಂಜೆ ಕಛೇರಿಯಿಂದ ಜಾಗ್ರತೆ ಮನೆಗೆ ಬಂದ ಲತಾಂಗಿ ಕೈಕಾಲು ತೊಳೆದುಕೊಂಡು ಉಡುಪು ಬದಲಾಯಿಸಿ ಪದ್ಮಳ ಮನೆಗೆ ಹೋದಳು ಪದ್ಮಾ ಆದರದಿಂದ ಗೆಳತಿಯನ್ನು ಸ್ವಾಗತಿಸಿ 'ಇದೇನು ಲತಾ ಒಂದುವಾರ ಕಾಣೆಯಾಗಿಬಿಟ್ಟಿದ್ದೆ ? ಊರಲ್ಲಿರಲಿಲ್ಲವೇ ?"—ಎಂದಳು.

" ಊರು ಬಿಟ್ಟು ಎಲ್ಲಿ ಹಾಳಾಗಿ ಹೋಗಲಿ ? ಮನಸ್ಸಿಗೆ ಬೇಸರವಾಗಿದ್ದರಿಂದ ಎಲ್ಲಿಗೂ ಬರಲಿಲ್ಲ ಯಾರನ್ನೂ ನೋಡಲಿಲ್ಲ."

" ಮನೆಯಲ್ಲಿ ಜಗಳವಾಯಿತೇ ಲತಾ ? ಕಛೇರಿಯಲ್ಲಿ ನಿನ್ನ ಗಂಡ ಅಟ್ಲಾಂಟಿಕ್ ಮಹಾಸಾಗರದಂತೆ ಗಂಭೀರವಾಗಿ ಬಿಟ್ಟಿದ್ದಾನೆ. ಜನರ ಸಂಗಡ ಮಾತಾಡುವುದೂ ಇಲ್ಲ."

ಏನೋ ನಡೆದಿರಬೇಕೆಂದು ಊಹಿಸಿ ಪದ್ಮಾ ಕೇಳಿದಳು.

" ಇದೆಯಲ್ಲಾ ಯಾವಾಗಲೂ ನನ್ನ ಗೋಳು ! ಅಮ್ಮ ಬಂದ ಮೇಲೆ ಪ್ರತಿ ದಿನ ಮನೆಯಲ್ಲಿ ಜಗಳ ತಪ್ಪಿದ್ದಲ್ಲ ಇಬ್ಬರೂ ಒಂದಾಗಿ ನನಗೆ ಕಿರುಕುಳ ಕೊಡುತ್ತಿದ್ದಾರೆ"—ಎಂದು ಪ್ರಾರಂಭ ಮಾಡಿ ಲತಾ ಎಲ್ಲವನ್ನೂ ಹೇಳಿದಳು. ಜೋಷಿಯ ಬಿಡಾರದಲ್ಲಿ ರಾತ್ರಿ ಕಳೆದುದನ್ನೂ ಅಲ್ಲಿ ನಡೆದ ಮಾತುಕತೆಗಳನ್ನೂ ನಿಸ್ಸಂಕೋಚವಾಗಿ ವಿವರಿಸಿ, " ಅವರದು ಬಹಳ ದೊಡ್ಡ ಮನಸ್ಸು, ಪದ್ಮಾ ನನ್ನಲ್ಲಿ ಅವರ ಸ್ನೇಹ ಎಷ್ಟೊಂದು ಶುದ್ಧವಾದ್ದೆಂಬುದನ್ನು ಆ ದಿನ ನಾನು ತಿಳಿದೆ " ಎಂದು ಮುಗಿಸಿದಳು

ಇಬ್ಬರೂ ಕೊಟಡಿಯಲ್ಲಿ ಕುಳಿತು ಮಾತಾಡುತ್ತಿದ್ದರು ಪದ್ಮ ಎಲ್ಲವನ್ನೂ ಕೇಳಿ ಸುಮ್ಮನಿದ್ದಳು ಅವಳ ಮನಸ್ಸು ಅಸೂಯೆ ಮತ್ಸರಗಳ ತುಯ್ದಾಟದಿಂದ ಉದ್ವೇಲಿತವಾಗಿತ್ತು ಒಂದುಕಡೆ ಗೆಳತಿಯ ಮೇಲೆ ತಡೆಯಲಾರದಷ್ಟು ಕೋಪ, ಮತ್ತೊಂದು ಕಡೆ ಮರೆಮಾಜದೆ ಎಲ್ಲವನ್ನೂ ತನ್ನಲ್ಲಿ ಹೇಳಿದ ಅವಳ ಸರಳ ಹೃದಯಕ್ಕಾಗಿ ಮೆಚ್ಚಿಗೆ ಕೇಳುತ್ತ ಒಂದೆರಡು ಸಿಗರೆಟ್ ಮುಗಿಸಿದ್ದರಿಂದ ಉದ್ರಿಕ್ತವಾದ ನರಗಳು ಶಾಂತವಾದವು

ಪದ್ಮಾ ಹೇಳಿದಳು

" ನಿನ್ನ ಕತೆ ಕೇಳಿದ ಮೇಲೆ ನನಗೊಂದು ಸ್ಥಿರವಾಗಿದೆ ಲತಾ ಗಂಡಸರನ್ನು ಯಾವ ಸಂದರ್ಭದಲ್ಲಿಯೂ ನಂಬಬಾರದು ಎಂದು "

" ಜೋಷಿ ತಾವಾಗಿ ನಿನಗೆ ಈ ವಿಚಾರ ತಿಳಿಸಲಿಲ್ಲವೆಂದು ಕೋಪವೇ? ತಿಳಿಸಲಾಗದೆಂದೂ, ಸಮಯ ಬಂದಾಗ ನಾನೇ ನಿನಗೆ ಹೇಳುವೆನೆಂದೂ ಅವರನ್ನು ಬೇಡಿಕೊಂಡಿದ್ದೆ ಆದ್ದರಿಂದ ಅವರು ಸುಮ್ಮನಿದ್ದಿರಬೇಕು "

" ನನ್ನಲ್ಲಿ ಈ ವಿಚಾರ ಹೇಳದಿರಲು ಅದೊಂದು ಕಾರಣ ಸಾಲದು. ರಾತ್ರಿಯೆಲ್ಲಾ ಬಿಡಾರದಲ್ಲಿದ್ದು ನೀನು ಬಂದಂತೆ ಮನೆಗೆ ಹಿಂದಿರುಗಿದೆ ಎಂಬುದನ್ನು ನಿಮ್ಮ ತಾಯಿ ನಂಬಬಹುದು, ಗಂಡ ನಂಬಬಹುದು. ನಾನು ಮಾತ್ರ ನಂಬಲಾರೆ."

ನುಡಿಯ ಬಿರುಸನ್ನು ಕಡಿಮೆ ಮಾಡುವ ಉದ್ದೇಶದಿಂದ ಪದ್ಮಾ ಮೃದು ಕಂಠದಿಂದಲೆ ಈ ಮಾತುಗಳನ್ನು ಹೇಳಿದಳು ಆದರೂ ಲತಾಂಗಿಯ ಮನ ನೊಂದಿತು ಕಣ್ಣುಗಳಲ್ಲಿ ನೀರು ತುಂಬಿತು. ಮಲ್ಲಿಗೆಯ ಮೇಲೆ ಬಿಸಿ ನೀರು ಚೆಲ್ಲಿದಂತೆ ಅವಳು ಬಾಡಿದಳು. ತಾನು ನಿರೀಕ್ಷಿಸುತ್ತಿದ್ದ ಸಹಾನು

ಭೂತಿ ಗೆಳತಿಯಿಂದ ದೊರಕಲಿಲ್ಲವೆಂದು ನಿರಾಶೆಗೊಂಡಳು. ನೀರವವಾಗಿ ಅತ್ತಳು

ಲತಾಂಗಿಯ ಸ್ಥಿತಿಯನ್ನು ಕಂಡು ಪದ್ಮಳಿಗೆ ಅನುಕಂಪ ಹುಟ್ಟಿತು. ಕುರ್ಚಿಯಿಂದೆದ್ದು ಬಂದು ಗೆಳತಿಯನ್ನು ಆಲಿಂಗಿಸಿ "ಏಕೆ ಅಳುತ್ತೀಯೆ ಹುಚ್ಚು ಹುಡುಗಿ ನಿನ್ನ ಮಾತಿನ ಸತ್ಯವನ್ನು ಪರೀಕ್ಷಿಸಲು ಹಾಗೆ ಹೇಳಿದೆ. ಈಗ ಖಂಡಿತವಾಯಿತು ನೀನು ನಿಜ ಹೇಳುತ್ತಿರುವೆಯೆಂದು" ಎಂದು ನುಡಿದು ಸಮಾಧಾನ ಪಡಿಸಿದಳು

"ದೃಷ್ಟಿ ಪರೀಕ್ಷಿಸಲು ಕಣ್ಣು ಚುಚ್ಚಿದಂತೆ ನಿನ್ನ ಮಾತು ಪದ್ಮಾ" ಎಂದು ಲತಾ ಕಿರುನಗೆಯಿಂದ ಹೇಳಿದಳು ಕಂಠ ಗದ್ಗದಿತವಾಗಿ ಕಣ್ಣುಗಳಿಂದ ಎರಡು ತೊಟ್ಟು ನೀರು ಕೆಳಗುರುಳಿತು

ಸ್ವಲ್ಪಹೊತ್ತು ಸುಮ್ಮನಿದ್ದು ಬಳಿಕ ಪದ್ಮ ಹೇಳಿದಳು

"ನಿನಗಿನ್ನೂ ಬಾಳಿನ ಏರು ತಗ್ಗುಗಳ ಅನುಭವವಿಲ್ಲ ಲತಾ ಒಲಿದು ಬಂದ ನಿನ್ನನ್ನು ಜೋಷಿ ಹಿಂದಕ್ಕೆ ಕಳುಹಿಸಿದ್ದರ ಕಾರಣ ನಿನ್ನಲ್ಲಿ ಸೌಹಾರ್ದ ಅಥವಾ ಅನುಕಂಪವಲ್ಲ ಸಮಾಜದ ಭೀತಿ, ನಿನ್ನ ಭವಿಷ್ಯದ ಹೊಣೆಯನ್ನು ಹೊರಲು ಅನಿಚ್ಛೆ ಜೋಷಿ ನಿನ್ನನ್ನು ಅಪೇಕ್ಷಿಸುವನೆಂದು ನನಗೆ ಚನ್ನಾಗಿ ತಿಳಿದಿದೆ ಆದರದು ಒಂದು ದಿನದ ಕ್ಷಣಿಕ ಅಪೇಕ್ಷೆ ನಿನ್ನ ಭಾರ ಮುಂದೆ ಪೂರ್ಣವಾಗಿ ತನ್ನ ಮೇಲೆ ಬೀಳುವುದೆಂದು ತಿಳಿದಾಗ ಎಚ್ಚೆತ್ತು ಹಿಂದೆ ಸರಿದ. ಪುರುಷರೇ ಹೀಗೆ ಜವಾಬ್ದಾರಿ ಇಲ್ಲದಿರುವವರೆಗೆ ತಮ್ಮ ಸುಖಕ್ಕಾಗಿ ಹೆಣ್ಣನ್ನು ಉಪಯೋಗಿಸಿಕೊಳ್ಳುವರು. ಜವಾಬ್ದಾರಿಯ ಮಾತು ಬಂದರೆ ಜಾರುವರು."

"ನಾನು ಜೋಷಿ ವಿಚಾರದಲ್ಲಿ ಆ ರೀತಿ ಭಾವಿಸುವುದಿಲ್ಲ ಪದ್ಮಾ. ಅವರು ಮೊದಲಿಂದ ನನ್ನಲ್ಲಿ ಗೌರವ ತ್ಯಾಗಗಳಿಂದ ನಡೆದುಕೊಂಡಿದ್ದಾರೆ. ಅಂದಿನ ಅವರ ವರ್ತನೆ ನನ್ನ ಮನಸ್ಸನ್ನು ಅಪಹರಿಸಿದೆ. ಪ್ರತಿಫಲಾಪೇಕ್ಷೆಯಿಲ್ಲದ ನಿಷ್ಕಾಮದಿಂದ ನಾನು ಅವರನ್ನು ಪ್ರೀತಿಸುತ್ತೇನೆ"

ಪ್ರಥಮ ಪ್ರೇಮದ ಆವೇಶದಿಂದ ಲತಾಂಗಿ ಈ ಮಾತುಗಳನ್ನು ಹೇಳಿದಳು. ಉಪಹಾಸದ ನಗುವೊಂದನ್ನು ಬೀರಿ ಪದ್ಮಾ ಉತ್ತರ ಕೊಟ್ಟಳು.

"ನಾಟಕದ ನಾಯಕಿಯಂತೆ ಮಾತನಾಡುತ್ತಿರುವೆ, ಲತಾ. ನಿನಗೆ

ಪ್ರೇಮದ ಭೂತ ಹಿಡಿದಿದೆ ನಿನ್ನ ಮನಃಶ್ಶಾಂತಿಗೆ ಪ್ರೇಮ ಅಗತ್ಯವಾದರೆ ನಿನ್ನ ವಯಸ್ಸಿಗೆ ತಕ್ಕ ಯುವಕನೊಬ್ಬನನ್ನು ಪ್ರೀತಿಸು. ನಿನಗಿಂತ ಎಷ್ಟೋ ಹಿರಿಯನಾದ ಜೋಷಿಯಲ್ಲಿ ನಿನ್ನ ಈ ಚಪಲ ಸರಿಯಲ್ಲ"

"ಪ್ರೇಮಕ್ಕೆ ವಯಸ್ಸು ಅಡ್ಡಿ ಬರುವುದಿಲ್ಲವೆಂದು ನೀನೇ ಹೇಳುತ್ತಿದ್ದೆ!"

"ನಿನ್ನ ಮನಸ್ಸನ್ನು ತಿಳಿಯಲು ಹೇಳಿದ್ದನ್ನು ನೀನು ಪರಮಾರ್ಥವೆಂದು ತಿಳಿದರೆ ನನ್ನ ತಪ್ಪೇ"

"ನಾವು ಸಮ ವಯಸ್ಕರು ಅಥವಾ ನನಗಿಂತ ನೀನು ಮೂರು-ನಾಲ್ಕು ವರ್ಷ ದೊಡ್ಡವಳಿರಬಹುದು. ನಿನಗೆ ಜೋಷಿ ಹಿರಿಯನಲ್ಲವೊ ?" ಎಂದು ಲತಾ ಕೇಳಬಹುದಾಗಿತ್ತು ಆದರೆ ಅವಳು ತನ್ನ ಸ್ವಭಾವಕ್ಕೆ ತಕ್ಕಂತೆ ಗೆಳತಿಯನ್ನು ಕೆರಳಿಸಬಹುದಾದ ಆ ಪ್ರಶ್ನೆ ಹಾಕಲಿಲ್ಲ

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನೆ ಕುಳಿತಿದ್ದರು ಅನಂತರ ಪದ್ಮಾ ಮೊದಲಿಗಿಂತ ಗಂಭೀರವಾದ ದನಿಯಿಂದ ಹೇಳಿದಳು.

"ವಯಸ್ಸಿನಲ್ಲಿ ನಿನಗಿಂತ ನಾನು ನಾಲ್ಕಾರು ವರ್ಷ ಮಾತ್ರ ಹಿರಿಯಳಾದರೂ ಅನುಭವದಲ್ಲಿ ಅಜ್ಜಿಯಾಗಿದ್ದೇನೆ, ಲತಾ ನಾನು ಹೇಳುವುದನ್ನು ಗಮನಕೊಟ್ಟು ಕೇಳು ಪುರುಷರಲ್ಲಿ ಪ್ರೇಮವನ್ನು ಹುಡುಕುವುದು ಮರುಭೂಮಿಯಲ್ಲಿ ನೀರಿಗಾಗಿ ಹಂಬಲಿಸಿದಂತೆ ಪ್ರೇಮ ತ್ಯಾಗಗಳಿಗೆ ಪುರುಷರು ಅನರ್ಹರು ಆ ಶಬ್ದಗಳ ಅರ್ಥವನ್ನು ಅವರು ತಿಳಿಯಲಾರರು, ದೈಹಿಕ ಸುಖವನ್ನಪೇಕ್ಷಿಸಿ ಅವರು ನಮ್ಮಬಳಿಗೆ ಬರುವರು. ಆಸೆ ಮುಗಿದಾಗ ದೂರ ಸರಿಯುವರು ಪುರುಷರ ದೃಷ್ಟಿಯಲ್ಲಿ ಹೆಣ್ಣು ಸುಖದ ಸಾಧನೆ ಮಾತ್ರ. ತಮ್ಮಂತೆ ಅವಳಿಗೂ ಒಂದು ಆತ್ಮ, ಸ್ವಾತಂತ್ರ್ಯ, ಇಚ್ಛೆ, ಅನಿಚ್ಛೆಗಳಿವೆ ಎಂಬುದನ್ನು ಅವರು ಮರೆತಿದ್ದಾರೆ ನಮ್ಮನ್ನು ದಾಸಿಯರಂತೆ ನಡೆಸಿಕೊಳ್ಳಲು ಅಪೇಕ್ಷಿಸುತ್ತಾರೆ ವಿವಾಹದಂತೆ ಪ್ರೇಮವೂ ಒಂದು ಬಂಧನ. ಒಂದು ಬಂಧನದಲ್ಲಿ ಬಿದ್ದು ಬಳಲುತ್ತಿರುವ ನೀನು ಇಚ್ಛಾಪೂರ್ವಕವಾಗಿ ಇನ್ನೊಂದು ಬಂಧನದಲ್ಲಿ ಬೀಳಬೇಡ. ವಿವಾಹ ಬಂಧನ ಹೆಣ್ಣಿನ ದೇಹವನ್ನು ಮಾತ್ರ ಬಂಧಿಸುವುದು. ಪ್ರೇಮ ಬಂಧನ ಹಾಗಲ್ಲ ದೇಹ ಮನಸ್ಸುಗಳೆರಡನ್ನೂ ಬಿಗಿದು ಹೆಂಗಸನ್ನು ಪುರುಷನ ಗುಲಾಮಳನ್ನಾಗಿ ಮಾಡುವುದು. ಮದುವೆಯಾದವಳಿಗಿರುವ ಅಲ್ಪ ಪರಿಮಿತಿಯ ಅಧಿಕಾರ ಸ್ವಾತಂತ್ರ್ಯಗಳೂ

ಒಲಿದು ಬರುವ ಹೆಣ್ಣಿಗಿರುವುದಿಲ್ಲ. ಮದುವೆಯಾಗಿ ಬಂದಾಗಲೇ ನಾನು ತಿಳಿದುಕೊಂಡೆ, ಆ ಅವಿವೇಕಿ ಗಂಡನೊಡನೆ ನೀನುಸುಖವಾಗಿ ಬಾಳುವುದಿಲ್ಲ ವೆಂದು ನನ್ನ ಸರೀಕ್ಷೆ ನಿಜವಾಯಿತು ನೀನು ಮನೆಯಲ್ಲಿ ಅನುಭವಿಸುತ್ತಿ ರುವ ಕಿರುಕುಳ ನನಗೆ ತಿಳಿದಿದೆ ಆದರೂ ಹೇಳುತ್ತೇನೆ ನೀನು ಮನೆ ಬಿಟ್ಟು ಬಂದರೆ ನಿನ್ನ ಕಷ್ಟ ಒಂದಕ್ಕೆ ಹತ್ತಾಗಿ ಹೆಚ್ಚುತ್ತದೆ ಸಮಾಜ ನಿನ್ನನ್ನು ದೂರಮಾಡುತ್ತದೆ- ನಂಟರಿಷ್ಟರು ದೂರಮಾಡುತ್ತಾರೆ ಜನರ ಇಷ್ಟೊಂದು ಉಪೇಕ್ಷೆಯನ್ನು ತಡೆಯುವ ಶಕ್ತಿ ನಿನಗಿಲ್ಲ ಜೋಷಿಯಲ್ಲಿ ನಿನ್ನ ಪ್ರೇಮ ಈ ತ್ಯಾಗಕ್ಕೆ ಅರ್ಹವೂ ಅಲ್ಲ"

"ನಾನು ಮನೆ ಬಿಟ್ಟು ಬಂದರೂ ಸ್ವತಂತ್ರಳಾಗಿರುತ್ತೇನೆ. ಇತರರ ಅಧೀನಳಾಗಿರುವುದು ನನಗಿಷ್ಟವಿಲ್ಲ"

"ಮನೆಯಲ್ಲಿದ್ದುಕೊಂಡೇ ನೀನು ಸ್ವತಂತ್ರಳಾಗಿರಬಹುದು ಮಂಗೇಶ ಅವಿವೇಕಿಯಾದರೂ ಇದುವರೆಗೆ ನಿನ್ನ ಇಷ್ಟಕ್ಕೆ ವಿರೋಧವಾಗಿ ನಡೆದಿಲ್ಲ. ಪುರುಷರೆಲ್ಲರೂ ಪಶುಗಳೇ ಎಂದ ಮೇಲೆ ಪಶುಕ್ರಿಯೆ ಅವರಿಗೆ ಸಹಜ ನೀನು ಯಾರೊಡನಿದ್ದರೂ ಆ ತೊಂದರೆ ತಪ್ಪಿದ್ದಲ್ಲ ಅವರು ಎಂಥಹವರೇ ಆಗಲಿ ಗಂಡ, ತಾಯಿ ಮನೆಯಲ್ಲಿದ್ದರೆ ನಿನ್ನ ಬಾಳುವೆ ಎಷ್ಟೋ ಸುಲಭವಾಗುವುದು. ಒಂದುವೇಳೆ ಜೋಷಿ ನಿನಗೆ ಆಶ್ರಯ ಕೊಟ್ಟರೂ ಮುಂದೆ ಅವರ ಮನಸ್ಸು ಯಾವ ರೀತಿ ತಿರುಗುವುದೆಂದು ಹೇಳುವುದು ಸಾಧ್ಯವಿಲ್ಲ ನಿನಗೆ ಹೆಚ್ಚು ದಿನದಿಂದ ಅವರ ಪರಿಚಯವಿರಬಹುದು ಆದರೆ ಕಳೆದ ಕೆಲವು ತಿಂಗಳಿಂದ ನಾನವರನ್ನು ಚನ್ನಾಗಿ ಅರ್ಥಮಾಡಿಕೊಂಡಿದ್ದೇನೆ. ಅವರ ಮನಸ್ಸು ಸಮುದ್ರದ ಅಲೆಗಳಷ್ಟೇ ಚಂಚಲ. ಅವರು ಅಪೇಕ್ಷಿಸುವುದು ಹೆಣ್ಣಿನ ಸಹವಾಸವಲ್ಲ, ಸಾಮೀಪ್ಯ ಮಾತ್ರ. ಅವರ ಮನಸ್ಸು ಸಂಪೂರ್ಣವಾಗಿ ಪತ್ರಿಕೋದ್ಯಮದಲ್ಲಿ ಆಸಕ್ತವಾಗಿದೆ 'ವಿಶ್ವಮಿತ್ರ'ದ ಅಭ್ಯುದಯ ಸಾಧನೆಯೇ ತಮ್ಮ ಜೀವನದ ಧ್ಯೇಯವೆಂದು ಅವರು ಭಾವಿಸಿದ್ದಾರೆ ಕೆಲಸದಲ್ಲಿ ಬೇಸರವಾದಾಗ ಮನಸ್ಸಿನ ವಿಶ್ರಾಂತಿ ವಿಹಾರಗಳಿಗಾಗಿ ನಮ್ಮನ್ನು ಉಪಯೋಗಿಸಿ ಕೊಳ್ಳುತ್ತಿದ್ದಾರೆ ಹಾಗಿಲ್ಲದಿದ್ದರೆ ನಿನ್ನಂತಹ ರೂಪವತಿ ತನಗಾಗಿ ಬಿಡಾರದಲ್ಲಿ ಕಾದು ಕುಳಿತಿರುವಾಗ ಕೆಳಗೆ ಅಚ್ಚುಕೂಟದಲ್ಲಿ ರಾತ್ರಿ ಇಷ್ಟು ಹೊತ್ತು ಕಳೆಯುತ್ತಿದ್ದರೇ? ಜೋಷಿ ಎಂತಹ ಮನುಷ್ಯರೆಂಬುದನ್ನು

ನೀನು ಇದರಿಂದಲೇ ತಿಳಿದುಕೊಳ್ಳಬಹುದು."

"ಹಾಗಾದರೆ ನಾನೇನುಮಾಡಬೇಕೆಂದು ನಿನ್ನ ಸಲಹೆ?"

ಲತಾಂಗಿ ತನ್ನ ಅಂತರಂಗದಲ್ಲಿ ಮನಸ್ಸಾಕ್ಷಿಗೆ ಹಾಕಿದ ಈ ಪ್ರಶ್ನೆಯನ್ನೇ ಗೆಳತಿಯ ಮುಂದಿಟ್ಟಳು ಪದ್ಮಾ ಉತ್ತರಕೊಟ್ಟಳು.

"ಕವಿಗಳು, ಕಲಾವಿದರು, ಚಿತ್ರಕಾರರು ತಮ್ಮ ಉದ್ಯಮಕ್ಕೆ ಬೇಕಾದ ಪ್ರತಿಭೆ ಪ್ರಚೋದನೆಗಳನ್ನು ಹೆಣ್ಣಿನಿಂದ ಪಡೆಯುವರೆಂದು ಎಲ್ಲಿಯೋ ಓದಿದ ನೆನಪಿದೆ ಜೋಷಿ ನಿನ್ನನ್ನು ಅಪೇಕ್ಷಿಸುತ್ತಿರುವುದು ಆ ರೀತಿಯಲ್ಲಿ ಎಂದು ನನ್ನ ಸಂದೇಹ ನೀನು ಅವರ ಬಲೆಯಲ್ಲಿ ಬೀಳದೆ ಅವರ ಆಸಕ್ತಿಯನ್ನು ನಿನ್ನ ಲಾಭಕ್ಕಾಗಿ ಉಪಯೋಗಿಸಿಕೊಳ್ಳಲು ಪ್ರಯತ್ನಿಸು ನೀನು ಅವರನ್ನು ದೂರವಾಗಿಡುವುದು ಈ ದೃಷ್ಟಿಯಿಂದ ಹೆಚ್ಚು ಪ್ರಯೋಜನಕರ ಪತ್ರಿಕೋದ್ಯಮ ನಿನ್ನ ವೃತ್ತಿ. ವೃತ್ತಿಬಾಂಧವರಲ್ಲಿ ಸೌಹಾರ್ದದಿಂದಿರುವುದು ಅವಶ್ಯಕ ಆದರೆ ಸ್ನೇಹದ ಸೀಮೆಯನ್ನು ದಾಟಿ ಅವರಲ್ಲಿ ಪ್ರೇಮಸಂಬಂಧ ಬೆಳಸಿದರೆ ನಿನ್ನ ಅಭ್ಯುದಯಕ್ಕೆ ನೀನೇ ಅಡಚಣೆ ತಂದು ಹಾಕಿಕೊಳ್ಳುವೆ ವೃತ್ತಿಶಿಕ್ಷಣ ಪಡೆದು ಕೆಲಸಕ್ಕೆ ಹೋಗುವ ಹುಡುಗಿಯರಿಗೆ ನಾನು ಓದುತ್ತಿದ್ದ ಕಾನ್ವೆಂಟಿನ ಅಧ್ಯಾಪಕರು ಕೊಡುತ್ತಿದ್ದ ಬುದ್ಧಿವಾದವಿದು—ಪ್ರೇಮ-ವೃತ್ತಿಗಳಿಗೆ ಪ್ರತ್ಯೇಕ ಕ್ಷೇತ್ರಗಳನ್ನು ಆರಿಸಿಕೊಳ್ಳಿರಿ. ಎರಡನ್ನೂ ಬೆರಸುವುದು ಅನರ್ಥಕಾರಿ ನಿನಗೊಬ್ಬ ಪ್ರಿಯನು ಬೇಕಾಗಿದ್ದರೆ ನಿನ್ನ ವೃತ್ತಿಕ್ಷೇತ್ರದಿಂದ ದೂರವಾಗಿ ಅವನನ್ನು ಹುಡುಕು. ಕಛೇರಿಯಲ್ಲಿ ಸಹೋದ್ಯೋಗಿಗಳ ಸಂಗಡ, ಅವನು ಒಡೆಯನಾಗಲಿ, ನಿನ್ನಂತೆ ನೌಕರನಾಗಲಿ ಸಂಬಂಧ ಬೆಳೆಸಬೇಡ ಅದರಿಂದ ನಿನ್ನಂತೆ ನಿನ್ನ ಪ್ರಿಯನ ಪತನವನ್ನೂ ತ್ವರಿತಗೊಳಿಸಿದಂತಾಗುವುದು ಇದು ನನ್ನ ಅನುಭವ ಮಾತು"

"ಪರಿಮಳ ಸೋಪ್ ಫ್ಯಾಕ್ಟರಿಯ ಮಾಲೀಕರಿಗೂ ಈ ಮಾತು ಅನ್ವಯಿಸುವುದೇ?"

ಈ ಕುಚೋದ್ಯದ ಪ್ರಶ್ನೆಯನ್ನು ಲತಾ ಸರಳ ಕಂಠದಿಂದ ನಗುತ್ತಾ ಕೇಳಿದಳು.

"ಏಕೆ ಅನ್ವಯಿಸುವುದಿಲ್ಲ. ನಾನು ಅಪೇಕ್ಷಿಸಿದ್ದರೆ ಫ್ಯಾಕ್ಟರಿಯ

ಮಾಲಿಕರನ್ನು ಎಂದೋ ಬಲಿಗೆ ಹಾಕಿಕೊಳ್ಳುತ್ತಿದ್ದೆ. ಆದರೆ ಆದರಿಂದ ನನಗೇ ತೊಂದರೆಯೆಂದೂ, ಆ ಮೇಲೆ ನಾನು ಅಲ್ಲಿ ಕೆಲಸಮಾಡುವುದು ಸಾಧ್ಯ ವಲ್ಲವೆಂದೂ ಭಾವಿಸಿ ಸುಮ್ಮನಾದೆ ನೀನು ಮೈಸೂರಿಗೆ ಹೋಗಿದ್ದಾಗ ನಿನ್ನ ಗಂಡ ಕೂಡಾ ಒಂದು ಕೈ ನೋಡಿದ. ಒಳ್ಳೆತನದಲ್ಲಿ ಬುದ್ಧಿ ಕಲಿಸಿದೆ."

ಪದ್ಮಳ ಮಾತಿನ ಹಿಂದಿದ್ದ ಕುಚೇಷ್ಟೆ ಲತಾಂಗಿಗೆ ಅರ್ಥವಾಯಿತು· ಮಂಗೇಶನ ಆ ವಿಫಲ ಸಾಹಸವನ್ನು ಪದ್ಮ ಹಿಂದೆ ಯಾವಾಗಲೂ ಗೆಳತಿಗೆ ತಿಳಿಸಿರಲಿಲ್ಲ ತನಗೆ ಅಪ್ರಿಯನಾದ ಪತಿ ಮತ್ತೊಬ್ಬಳ ಪ್ರಿಯನಾದರೆ, ಅಥವಾ ಆಗದಿದ್ದರೆ ತನಗೇನು ? ಪದ್ಮಳ ಮಾತಿನ ಅನ್ವಯವನ್ನು ಉಪೇಕ್ಷಿಸಿ ಅವಳು ಹೊರಡಲು ಎದ್ದಳು

ಪದ್ಮಾ ಕೈಹಿಡಿದು ಕುಳ್ಳಿರಿಸಿ "ಏನು ಅವಸರ ? ನಿಧಾನವಾಗಿ ಹೋದ ರಾಯಿತು ಮನೆಯಲ್ಲಿ ಇದ್ದೇ ಇದೆ—ಗಂಡನ ಸಂಗಡ ಮೌನ, ತಾಯಿಯ ಸಂಗಡ ಕದನ ಕಾಫಿ ಬರುತ್ತದೆ ಕುಡಿದು ಹೋಗು" ಎಂದಳು

ಬಹಳ ಹೊತ್ತು ಇಬ್ಬರೂ ಮಾತಾಡುತ್ತಿದ್ದು ಎಂಟು ಗಂಟೆಗೆ ಲತಾ ಮನೆಗೆ ಹಿಂದಿರುಗಿದಳು

— ೨ —

ಅವಕಾಶ ದೊರೆತು ಒಬ್ಬನೇ ಇದ್ದಾಗ ಲತಾಂಗಿ ಜೋಷಿಯನ್ನು ಕೇಳಿದಳು :

"ಕವಿಗಳು, ಕಲಾವಿದರು, ಚಿತ್ರಕಾರರು ತಮ್ಮ ಉದ್ಯಮಕ್ಕೆ ಬೇಕಾದ ಪ್ರತಿಭೆ ಪ್ರಚೋದನೆಗಳನ್ನು ಸ್ತ್ರೀಯರಿಂದ ಪಡೆಯುವರೆಂದು ಎಲ್ಲಿಯೋ ಓದಿದೆ ಈ ವಿಚಾರದಲ್ಲಿ ನಿಮ್ಮ ಅಭಿಪ್ರಾಯವೇನು ?"

"ಸಾಕ್ರೆಟಿಸನು ಮೊದಲುಗೊಂಡು ಅನೇಕರು ಈ ಮಾತು ಹೇಳಿ ದ್ದಾರೆ ಭಾರತೀಯ ಯೋಗಶಾಸ್ತ್ರಗಳಲ್ಲಿ ಈ ಮಾತು ಮೇಲಿಂದ ಮೇಲೆ ಬರುತ್ತದೆ ಎಲ್ಲಿ ನೀನಿದನ್ನು ಓದಿದ್ದು ?"

"ಯಾವುದೋ ಕಾದಂಬರಿಯಲ್ಲಿ ಹೆಸರು ಮರೆತಿದ್ದೇನೆ."

ಯಥಾರ್ಥವನ್ನು ಮುಚ್ಚಿಡಲು ಲತಾ ಸುಳ್ಳು ಹೇಳಿದಳು. ಪದ್ಮಳ ಮನೆಯಲ್ಲಿ ನಡೆದ ಮಾತುಗಳನ್ನು ಹೊರಪಡಿಸಲಿಲ್ಲ

" ಸ್ತ್ರೀಯರು ಶಕ್ತಿ ರೂಪಿಣಿಯರು, ಜಗದ್ಧಾತ್ರಿಯಾದ ಆದಿಶಕ್ತಿಯ ಅಂಶ, ಪ್ರತಿಯೊಬ್ಬ ಹೆಣ್ಣಿನಲ್ಲಿಯೂ ಇದೆಯೆಂಬುದು ನಮ್ಮ ಪ್ರಾಚೀನಾರ್ಯರ ಮತ ಹೆಂಗಸು ತಾಯಿಯಾಗಿ, ಪತ್ನಿಯಾಗಿ, ಪ್ರಿಯೆಯಾಗಿ ಎಲ್ಲ ಅವಸ್ಥೆಗಳಲ್ಲಿಯೂ ಪುರುಷನ ಪ್ರತಿಭೆಯನ್ನು ಪ್ರಚೋದಿಸಬಲ್ಲಳು. ಕಲಾವಿದರು, ಸಂಗೀತಗಾರರು, ಚಿತ್ರಕಾರರು ಹೆಣ್ಣಿನ ಈ ಶಕ್ತಿಯನ್ನು ಅರಿತಿದ್ದಾರೆ ಹೆಣ್ಣು ಸಮೀಪದಲ್ಲಿದ್ದಾಗ ಕಲಾವಿದನ ಪ್ರತಿಭೆ ನವನವೋನ್ಮೇಷಶಾಲಿನಿಯಾಗಿ ಬೆಳೆಯುತ್ತದೆ ಶಕ್ತಿ ರೂಪಿಣಿಯಾದ ಸುಂದರಿಯೊಬ್ಬಳ ಪ್ರಚೋದನೆಯಿಲ್ಲದಿದ್ದರೆ ಜಗತ್ತಿನಲ್ಲಿ ಕಾವ್ಯ, ಚಿತ್ರ, ಶಿಲ್ಪ ಮುಂತಾದ ಎಲ್ಲ ಕ್ಷೇತ್ರಗಳ ಬಹುತೇಕ ಕಲಾಕೃತಿಗಳು ರಚಿತವಾಗುತ್ತಲೇ ಇರಲಿಲ್ಲ"

" ಹಾಗಾದರೆ ಕಲಾವಿದರು ಹೆಣ್ಣಿನ ಸಾಮೀಪ್ಯವನ್ನು ಬಯಸುವುದು ತಮ್ಮ ಸ್ವಾರ್ಥಕ್ಕಾಗಿ ?"

" ಕಲಾವಿದನ ಬಯಕೆಯಲ್ಲಿ ಸ್ವಾರ್ಥಕ್ಕಿಂತ ತ್ಯಾಗ ಹೆಚ್ಚಿಗಿರುತ್ತದೆ ಲತಾ. ಕಲ್ಕತ್ತೆಯ ಕಾಳೀಘಾಟಿನ ಜಗತ್ತಾರಿಣಿಯ ಮಂದಿರದಲ್ಲಿ ವಿಖ್ಯಾತ ಚಿತ್ರಕಾರನೊಬ್ಬನು ಚಿತ್ರಿಸಿದ ಕಾಳೀಮಾತೆಯ ಚಿತ್ರ ನೋಡಿದಾಗ ಶಕ್ತಿ ಪೂಜೆಯ ಹಿಂದಿರುವ ಈ ತತ್ವ ನನಗೆ ಹೊಳೆಯಿತು ಜಡ ವಸ್ತುವಿನಲ್ಲಿ ಚೈತನ್ಯ ತುಂಬಬಲ್ಲ ಪರಾಶಕ್ತಿ ಹೆಣ್ಣು ಎಂಬುದನ್ನು ನಮ್ಮ ಹಿರಿಯರು ಕಾಳಿಯ ಚಿತ್ರದಲ್ಲಿ ಸೂಚಿಸಿದ್ದಾರೆ ಜಗತ್ತಿನ ಸೃಷ್ಟಿಯಂತೆ ಕಲಾಸೃಷ್ಟಿಯೂ ಶಕ್ತಿ ರೂಪಿಣಿಯಾದ ಪ್ರಕೃತಿಯ ಕಾರ್ಯ. ಕಲಾವಿದನು ಅಪೇಕ್ಷಿಸುವುದು ಹೆಣ್ಣಿನ ಸಾಮೀಪ್ಯವನ್ನು ಮಾತ್ರವಲ್ಲ, ಸಾರೂಪ್ಯ ಸಾನಂದಗಳನ್ನು ಅದರಿಂದ ಅವನ ಒಳಗಣ್ಣು ತೀಕ್ಷ್ಣವಾಗಿ ಸಾಮಾನ್ಯಗಳಲ್ಲಿ ಸೌಂದ್ಯರ್ಯವನ್ನು ರೂಪಿಸಬಲ್ಲ ಪರಾದೃಷ್ಟಿ ಪಡೆಯುತ್ತದೆ ಕಲಾವಿದನು ಹೆಣ್ಣನ್ನು ತನ್ನ ಸುಖಕ್ಕಾಗಿ ಬಯಸುವುದಿಲ್ಲ ಜಗತ್ತಿನ ಮೋಕ್ಷ ಆನಂದಗಳಿಗಾಗಿ ಬಯಸುತ್ತಾನೆ. ಅದರಲ್ಲಿ ಸ್ವಾರ್ಥವೇನು ಬಂತು ?"

" ಸಾರೂಪ್ಯ ಸಾನಂದವೆಂದರೇನು ?"

" ಚೈತನ್ಯರೂಪವಾದ ಸತ್ ತಾನೆಂದು ತಿಳಿಯುವುದು ಸಾರೂಪ್ಯ.

ಅದರಿಂದ ಉಂಟಾಗುವ ಆನಂದದ ಅನುಭವವೇ ಸಾನಂದ ಯೌಗಿಕ ಪರಿಭಾಷೆಯಲ್ಲಿ ಇದಕ್ಕೆ ಸಂಯಮವೆಂದು ಹೇಳುತ್ತಾರೆ ಸಂಯಮ ಪಡೆದವನು ಸಂಯಮಿ "

"ಸಂಯಮಕ್ಕೆ ವೈರಾಗ್ಯ ಅವಶ್ಯಕವೆಂದು ಕೇಳಿದ್ದೇನೆ ಅಂದಮೇಲೆ ಸ್ತ್ರೀ ಸಾಂನಿಧ್ಯ ಸಂಯಮಕ್ಕೆ ಅಂತರಾಯವಲ್ಲವೆ ?"

"ಸೌಂದರ್ಯವು ಮಾಯೆ ಸೌಂದರ್ಯದ ನಿಧಿ ಸ್ತ್ರೀ ರೂಪ. ಸ್ತ್ರೀ ರೂಪವಾದ ಮಾಯೆಯಿಂದ ಬಿಡುಗಡೆ ಹೊಂದುವುದು ಸಾಮಾನ್ಯ ಮಾನವನಿಗೆ ಸಾಧ್ಯವಲ್ಲದ್ದರಿಂದ ಅಂತಹ ಸಾಮಾನ್ಯರಿಗಾಗಿ ವೈರಾಗ್ಯವನ್ನು ಬೋಧಿಸುತ್ತಾರೆ ಆದರೆ ವೈರಾಗ್ಯನಿಧಿಯಾದ ಶಂಕರನು ನಾರೀದ್ವೇಷಿಯಲ್ಲ. ಗೌರಿಗೆ ಅರ್ಧಾಂಗವನ್ನು ಕೊಟ್ಟು ಗಂಗೆಯನ್ನು ತಲೆಯಲ್ಲಿ ಧರಿಸಿ ನಿಜವಾದ ಸಂಯಮದ ಆದರ್ಶವನ್ನು ಸ್ಥಾಪಿಸಿದ ಪರಮ ಗುರು ಮಾಯೆಯ ತಾಮಸ ಕಳೆಯನ್ನು ತುಳಿಯುವವರು ಅದರ ರಜೋಂಶಕ್ಕೆ ದೇಹವನ್ನು ಧಾರೆಯೆರೆದು ಸಾತ್ವಿಕ ಕಳೆಯನ್ನು ಮಸ್ತಕದಲ್ಲಿ ಧರಿಸಬೇಕು ಕಲಾಸೃಷ್ಟಿಯ ಮಾರ್ಗದಲ್ಲಿ ನಡೆಯುವ ಪ್ರತಿಯೊಬ್ಬ ಮಾನವನೂ ಹೆಚ್ಚು ಅಥವಾ ಕಡಿಮೆ ಪ್ರಮಾಣದಲ್ಲಿ, ಈ ಆದರ್ಶವನ್ನು ಅನುಸರಿಸಿ ಸಂಯಮಿಯಾಗುವುದು ಅನಿವಾರ್ಯ ಈ ಮಾರ್ಗದಲ್ಲಿ ಅವನ ಸಾಧನೆ ಯಾವ ಪ್ರಮಾಣದಲ್ಲಿ ಸಿದ್ಧಿಸುವುದೋ ಅವನ ಕಲಾ ಸೃಷ್ಟಿಯೂ ಆ ಪ್ರಮಾಣದಲ್ಲಿ ಯಶಸ್ವಿಯಾಗುವುದು ಈಚೆಗೆ 'ವಿಶ್ವಮಿತ್ರ'ದಲ್ಲಿ ಪ್ರಕಟವಾದ ನನ್ನ ಅಗ್ರ ಲೇಖನಗಳು ಹೆಚ್ಚುಹೆಚ್ಚಿಗೆ ಜನಪ್ರಿಯವಾಗಿ ಪತ್ರಿಕೆಯ ಪ್ರಚಾರ ಹೆಚ್ಚಿದ್ದರೆ ನಿನ್ನ ಸಾಂನಿಧ್ಯದಿಂದ ನನ್ನ ಪ್ರತಿಭೆಗೆ ದೊರೆತ ನವ ಚೈತನ್ಯವೇ ಅದರ ಕಾರಣ."

ಜೋಷಿಯ ಈ ತತ್ವ ಪ್ರತಿಪಾದನೆ ಸ್ತ್ರೀ ಪುರುಷರ ಮಧ್ಯೆ ನಡೆಯುವ ಎಲ್ಲ ಸಂಭಾಷಣೆಗಳಂತೆ ವೈಯಕ್ತಿಕ ಸ್ವರದಲ್ಲಿ ಕೊನೆಗೊಂಡದ್ದನ್ನು ಕಂಡು ಲತಾಂಗಿ ಲಜ್ಜಿತೆಯಾದಳು. ಕೆನ್ನೆಗಳು ಕೆಂಪೇರಿದವು ತುಟಿಗಳು ಸ್ಫುರಿಸಿದವು ದೃಷ್ಟಿ ತಗ್ಗಿತು ಸೌಹಾರ್ದದ ಮೆಲು ದನಿಯಿಂದ, ಕೇಳಿದಳು "ಹಾಗಾದರೆ ಒಲಿದು ಬಂದ ನನ್ನನ್ನು ನೀವೇಕೆ ನಿರಾಕರಿಸಿದಿರಿ, ಸ್ವಾಮಿ ?"

ಜೋಷಿ ಪ್ರಶ್ನೆಯಿಂದ ವಿಚಲಿತನಾಗಲಿಲ್ಲ. ಪ್ರಶ್ನಕಾರಳ ಮೇಲೆ ಸ್ಥಿರ ಗಂಭೀರವಾದ ತೀಕ್ಷ್ಣ ದೃಷ್ಟಿಯನ್ನು ಬೀರಿ ಸಹಜ ಕಂಠದಿಂದ ಉತ್ತರ

ಕೊಟ್ಟ.

"ಶಂಕರನು ಮಾಯೆಗೆ ಅರ್ಧಾಂಗವನ್ನು ಕೊಡುತ್ತಾನೆ. ಮಸ್ತಕದಲ್ಲಿ ಧರಿಸುತ್ತಾನೆ ಆದರೆ ಮಾಯೆಗೆ ಅಧೀನನಾಗುವುದಿಲ್ಲ ಮಾಯಾತೀತನಾದ ಅವನ ಮುಂದೆ ಮಾಯಾರೂಪಿಣಿಯಾದ ಶಕ್ತಿ ಪ್ರಕೃತಿಯಂತೆ ನಲಿಯುತ್ತಾ ಜಗತ್ತಿನ ಸೃಷ್ಟಿ, ಪರಿಹಾರ, ವಿಲಯ, ಸ್ಥಿತಿ ಮತ್ತು ಅನುಗ್ರಹವೆಂಬ ಪಂಚಕೃತ್ಯಗಳಿಗೆ ಸಹಾಯಕಳಾಗುತ್ತಾಳೆ ಉಪಾಧಿರಹಿತನೂ ಸರ್ವ ವ್ಯಾಪಿಯೂ, ಸರ್ವೇಶ್ವರನೂ ಆದ ಶಂಕರನು ವಿಶ್ವ ಸೃಷ್ಟಿಯಲ್ಲಿ ಮಾಡುವ ಈ ಕಾರ್ಯವನ್ನೇ ಉಪಾಧಿಸಹಿತನಾದ ಕಲಾಕಾರನು ತಾನು ಆರಿಸಿಕೊಂಡ ಅಲ್ಪ ಕ್ಷೇತ್ರದಲ್ಲಿ ಮಾಡಿ ಕಲಾವಂತನಾಗುತ್ತಾನೆ ಅನುಭವದಿಂದ ಅರಿಯಬೇಕಾದ ಗಹನ ವಿಚಾರಗಳಿವು, ಲತಾ ಅವುಗಳನ್ನು ವಿವರಿಸುವುದರಲ್ಲಿ ನನ್ನ ಪ್ರಯತ್ನ ನಿನಗೆ ಒಂದೇಸಾರಿಗೆ ಅರ್ಥವಾಗಲಾರದು. ಆ ವಿಚಾರವನ್ನೇ ನೀನು ಮೇಲಿಂದ ಮೇಲೆ ಚಿಂತಿಸುತ್ತಿದ್ದರೆ ಒಂದು ದಿನ ಅರ್ಥವಾಗುವುದು"

"ಪುರುಷರಿಂದ ಪುರುಷರಿಗಾಗಿ ರಚಿತವಾದ ಈ ತತ್ವಶಾಸ್ತ್ರ ಸ್ತ್ರೀಯರಾದ ನಮಗೆ ತಿಳಿಯುವುದು ಹೇಗೆ?"

ಲತಾಂಗಿಯ ಮಾತಲ್ಲಿ ಬೇಸರ ಉಪೇಕ್ಷೆಗಳೆರಡೂ ಇದ್ದವು ಜೋಷಿ ಅದನ್ನು ಗಮನಿಸಿದರೂ ಗಮನಿಸದವನಂತೆ ಉತ್ತರ ಕೊಟ್ಟ

"ಸ್ತ್ರೀ ಪುರುಷ ಭೇದ ಕೇವಲ ದೈಹಿಕವಾದದ್ದು, ಲತಾ ನಿನ್ನ ದೇಹದಲ್ಲಿ ನೆಲೆಸಿದ ಜ್ಞಾತೃ ರೂಪವಾದ ಚೈತನ್ಯ ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ. ನಮ್ಮ ಉಪನಿಷತ್ತುಗಳು ಅದನ್ನು 'ತತ್ ಸತ್' ಎಂದು ನಿರ್ದೇಶಿಸಿವೆ. ಆ ಪರಾವಸ್ತುವನ್ನು ಕುರಿತ ಶಾಸ್ತ್ರವೇ ತತ್ವಶಾಸ್ತ್ರ. ಪ್ರಧಾನವಾಗಿ ಪುರುಷರು ಆ ಶಾಸ್ತ್ರವನ್ನು ಪ್ರತಿಪಾದಿಸಿದ ಮಾತ್ರಕ್ಕೆ ಅದು ಸ್ತ್ರೀಯರಿಗೆ ಅನ್ವಯಿಸುವುದಿಲ್ಲವೆಂದು ಹೇಳುವುದು ಅವಿವೇಕದ ವಾದ ಜ್ಞಾನಾರ್ಜನೆಗೆ ಸ್ತ್ರೀ ಪುರುಷರ ಭೇದವಿಲ್ಲ."

ಜೋಷಿ ಮಾತು ಮುಗಿಸಿದ ಮೇಲೆ ಲತಾಂಗಿ ಹಾಸ್ಯ ಧ್ವನಿಯಿಂದ "ಮಹಿಳಾ ಉಪನ್ಯಾಸಕರಂತೆ ನೀವೇಕೆ ಗಾರ್ಗಿ ಮೈತ್ರೇಯಿಯರ ನಿದರ್ಶನ ಕೊಡಲಿಲ್ಲ?" ಎಂದು ಕೇಳಿದಳು.

ಲತಾಂಗಿಯ ಪ್ರಶ್ನೆಯಿಂದ ಜೋಷಿಯ ವಾದಸರಣಿ ಬೇರೆ ಕಡೆ ತಿರುಗಿತು. ಅವನು ನುಡಿದನು

"ಬರಿಯ ನಿದರ್ಶನದಿಂದ ಏನಾದಹಾಗಾಯಿತು ? ನಾವು ಪಾಠಶಾಲೆಗಳಲ್ಲಿ ಸ್ತ್ರೀಯರಿಗೆ ಕಲಿಸುತ್ತಿರುವ ವಿದ್ಯೆ ಗಾರ್ಗಿ ಮೈತ್ರೇಯಿಯರನ್ನು ಸೃಷ್ಟಿಸುವುದಿರಲಿ, ಮಹಿಳೆಯರನ್ನು ಉದ್ಯಮಶೀಲರಾದ ನಾಗರಿಕರನ್ನಾಗಿ ಮಾಡಲು ಕೂಡಾ ಶಕ್ತವಾಗಿಲ್ಲ ದಾದಿ, ಉಪಾಧ್ಯಾಯಿನಿ, ಟೈಪಿಸ್ಟ್ ಇಷ್ಟಕ್ಕಾಯಿತು ನಮ್ಮ ವಿದ್ಯಾವತಿಯರ ಮಹತ್ವಾಕಾಂಕ್ಷೆ ನಮ್ಮ ವಿದ್ಯಾವತಿಯರಲ್ಲಿ ಎಷ್ಟು ಮಂದಿ ಪ್ರತಿಭಾಶಾಲಿನಿಯರಾದ ಲೇಖಕಿಯರು, ಕವಯಿತ್ರಿಯರು, ನ್ಯಾಯವಾದಿಗಳು, ಸ್ವತಂತ್ರ ಉದ್ಯಮಗಳನ್ನು ನಡೆಸಬಲ್ಲವರು ಇದ್ದಾರೆ ? ಸ್ತ್ರೀ ವಿದ್ಯಾಭ್ಯಾಸಕ್ಕೆ ಸಾಕಾದಷ್ಟು ಅವಕಾಶ ಪ್ರೋತ್ಸಾಹಗಳಿಲ್ಲವೆಂಬುದು ಎಂದಿಗೂ ಇದರ ಕಾರಣವಲ್ಲ ಮಹಿಳಾಭ್ಯುದಯಕ್ಕಾಗಿ ಅರ್ಧಶತಮಾನ ಪರಿಶ್ರಮಿಸಿದ ಮೇಲೂ ನಮ್ಮಲ್ಲಿ ಒಬ್ಬ ಸರೋಜಿನಿ, ಒಬ್ಬ ಕಮಲಾದೇವಿ ಒಬ್ಬ ವಿಜಯಲಕ್ಷ್ಮಿ ಮಾತ್ರವೇ ಅವತರಿಸಿರುವರೆಂದರೆ ಅದು ದೊಡ್ಡ ಲೋಪವಲ್ಲವೇ ? ವಿದ್ಯಾಭ್ಯಾಸ ಆಧುನಿಕವಾದರೂ ಸಮಾಜದ ಕಟ್ಟುಪಾಡುಗಳು ಹಿಂದಿನ ಸಂಪ್ರದಾಯಬದ್ಧವಾದ ಮೌಢ್ಯದ ಮಾರ್ಗದಲ್ಲಿ ನಡೆಯುತ್ತಿರುವುದೇ ಈ ಪರಿಸ್ಥಿತಿಯ ಕಾರಣ ಶಾಸನ ರೀತ್ಯಾ ಸ್ತ್ರೀಯು ಸ್ವತಂತ್ರಳಾದರೂ ಸಮಾಜದ ದಾಸ್ಯಶೃಂಖಲೆ ಅವಳ ಕೈ ಕಾಲುಗಳನ್ನು ಬಂಧಿಸಿದೆ, ಪುರುಷನು ಸ್ತ್ರೀಯನ್ನು ತನ್ನ ಸುಖ ಸಾಧನವಾಗಿ ದುರುಪಯೋಗಪಡಿಸಿಕೊಳ್ಳಲು ಸಹಾಯಕವಾಗಿದೆ ಶಾಸನಗಳನ್ನು ಮಾಡಿ ನಾವು ವೇಶ್ಯಾಗೃಹಗಳನ್ನು ಮುಚ್ಚಿದೆವು ಆದರೆ ವಿವಾಹ, ಸಂಪ್ರದಾಯಗಳ ನೆರಳಲ್ಲಿ ಮತಧರ್ಮಗಳ ಆಶ್ರಯದಲ್ಲಿ ನಡೆಯುತ್ತಿರುವ ದಾಸ್ಯದ ವ್ಯಭಿಚಾರವನ್ನು ತಡೆಯಲು ಶಕ್ತರಾಗಿರುವೆವೆ ? ನಾಡಿನ ಅರ್ಧ ಜನಾಂಗವಾದ ಸ್ತ್ರೀಯರು ಮೌಢ್ಯ, ಸಂಪ್ರದಾಯ ಮತ್ತು ಆರ್ಥಿಕ ದಾಸ್ಯದಲ್ಲಿ ತೊಳಲುತ್ತಿರುವವರೆಗೆ ನಾವು ಗಳಿಸುವ ಸ್ವಾತಂತ್ರ್ಯ ಪೂರ್ಣ ಸ್ವಾತಂತ್ರ್ಯವಲ್ಲ. ಸ್ವಾತಂತ್ರ್ಯದಿಂದ ದೊರಕುವ ಪ್ರಯೋಜನ ಪಡೆಯಲು ನಾವು ಶಕ್ತರಾಗುವುದಿಲ್ಲ. ವಿದ್ಯಾಭ್ಯಾಸ, ವಾಣಿಜ್ಯ, ಕೈಗಾರಿಕೆ ಇತ್ಯಾದಿ ವಿಚಾರಗಳಲ್ಲಿ ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಪೌರ್ವಾತ್ಯರಾಷ್ಟ್ರಗಳು ಹಿಂದುಳಿದಿರಲು ಪೌರ್ವಾತ್ಯ ಸ್ತ್ರೀಯರ ದಾಸ್ಯ

ಜೀವನವೇ ಕಾರಣವೆಂದೇಕೆ ಹೇಳಬಾರದು ? ಧಾರ್ಮಿಕ ಮೂಢಭಕ್ತಿಯಿಂದ ಹೆಣ್ಣನ್ನು ಅಂತಃಪುರ ವಾಸಿನಿಯರಾಗಿ ಮಾಡಿರುವ ರಾಷ್ಟ್ರಗಳು ಈವಿಚಾರದಲ್ಲಿ ಹಚ್ಚು ಅಪರಾಧಿಗಳು. ಈ ಸಂಪ್ರದಾಯವನ್ನು ಮುರಿಯು ಸ್ತ್ರೀಯರಿಗೆ ಸಮಾಜ ದಲ್ಲಿ ಸಮಾನಸ್ಥಾನ ಕೊಟ್ಟಿರುವ ಜಪಾನ್, ತುರ್ಕಿ, ಈ ಪೂರ್ವ ರಾಷ್ಟ್ರಗಳ ಅಭ್ಯುದಯವನ್ನು ನೋಡಿದ ಮೇಲಾದರೂ ಭಾರತೀಯರು ಎಚ್ಚೆತ್ತುಕೊಳ್ಳ ದಿರುವುದು ವಿಷಾದಕರ "

"ಪ್ರತಿಭೆಯ ಉದಯವನ್ನು ಕುರಿತು ನಾನು ಕೇಳಿದ ಪ್ರಶ್ನೆ ನಮ್ಮ ಮಾತುಗಳನ್ನು ಎಲ್ಲಿಗೆ ನೆಳಯಿತು ?''

"ಸರಿಯಾದ ಸ್ಥಳಕ್ಕೇ ಕರತಂದಿದೆ ಲತಾ ಸಮಾಜದ ಈ ವಿಷ ಚಕ್ರದಲ್ಲಿ ಬೆಳದ ಇಂತಹ ಸ್ತ್ರೀಯರಿಂದ ಪುರುಷರಿಗೆ ಎಂತಹ ಪ್ರತಿಭೆ ದೊರ ಕೀತು ನೀನೇ ಯೋಚಿಸು ?''

ಅಷ್ಟು ಹೊತ್ತಿಗೆ ಅಚ್ಚುಕೂಟದಿಂದ ಅಂದಿನ ಅಗ್ರ ಲೇಖನದ ಪ್ರೂಫು ಗಳನ್ನು ತೆಗೆದುಕೊಂಡು ಅಟೆಂಡರ್ ಒಳಗೆ ಬಂದ ಪಕ್ಕದ ಹೋಟಲಿಂದ ಎರಡು ಪ್ಲೇಟ್ ಹಲ್ವಾ, ಎರಡು ಮಸಾಲ್ ದೋಸೆ ಮತ್ತು ಕಾಪಿ ತರು ವಂತೆ ಹೇಳಿ ಜೋಷಿ ಲತಾಂಗಿಯ ಕಡೆ ತಿರುಗಿ "ಈ ವಿಷಯಗಳನ್ನು ನೀನು ಪದ್ಮಳ ಸಂಗಡ ಯಾವಾಗಲಾದರೂ ಪ್ರಸ್ತಾಪಿಸಿದೆಯಾ ?" ಎಂದು ಪ್ರಶ್ನಿಸಿದ

''ಪದ್ಮಳ ಆಸಕ್ತಿ ಈ ವಿಚಾರಗಳಿಗಿಂತ ವಿಲಾಸ ವಿಹಾರಗಳಲ್ಲಿ ಹೆಚ್ಚಿ ಗಿರುತ್ತದೆ."

"ಅದೇ ನಿನಗೂ ಅವಳಿಗೂ ಇರುವ ಅಂತರ ಪದ್ಮಾ ತನ್ನ ವಿದ್ಯಾ ಸಂಸ್ಕೃತಿಗಳನ್ನು ಸುಖಸಾಧನವಾಗಿ ತಿಳಿದಿದ್ದಾಳೆ ವಿಲಾಸ ವಿನೋದಗಳು ಅವಳ ಜೀವನದ ಮುಖ್ಯ ಧ್ಯೇಯ ಅವಳ ಬುದ್ಧಿಶಕ್ತಿ ಹರಿತವಾಗಿದ್ದರೂ ಅದಕ್ಕಿಂತ ಹೆಚ್ಚಿನ ವಿಚಾರಗಳ ಕಡೆಗೆ ತಿರುಗುವುದಿಲ್ಲ ಬಣ್ಣದ ಪತಂಗ ದಂತೆ ಹೂವಿಂದ ಹೂವಿಗೆ ಹಾರಿ ನಲಿಯುವುದೇ ಜೀವನದ ಸಾರ್ಥಕತೆ ಯೆಂದು ಅವಳು ತಿಳಿದಿದ್ದಾಳೆ ಉದ್ಯೋಗ ಅವಳಿಗೆ ಅಭ್ಯುದಯದ ಸಾಧನವಲ್ಲ. ವಿಹಾರಕ್ಕೆ ದೊರಕಿದ ಮತ್ತೊಂದು ಅವಕಾಶ ಕಛೇರಿಯ ಕೆಲಸಗಳನ್ನು ಒಂದು ದಿನವಾದರೂ ಅವಳು ಆಸಕ್ತಿಯಿಂದ ಮಾಡಿರುವ ಳೆಂದು ನಾನು ಹೇಳಲಾರೆ. ವಿದ್ಯಾವತಿಯರಾಗಿ ನೌಕರಿ ಹುಡುಕಿಕೊಂಡು

ಬರುವ ಯುವತಿಯರ ಕಾರ್ಯಾಸಕ್ತಿ ಉತ್ಸಾಹಗಳಿಗೆ ಪದ್ಮಾ ನಿದರ್ಶನ."

"ನೀವು ಹೇಳುವ ಲೋಪಗಳು ನನ್ನಲ್ಲಿಲ್ಲವೇ ?"

"ಇದ್ದಿದ್ದರೆ ಪತ್ರಿಕಾ ಕಚೇರಿಯಲ್ಲಿ ನೀನು ಇದುವರೆಗೆ ಕೆಲಸ ಮಾಡುವುದು ಸಾಧ್ಯವಿರಲಿಲ್ಲ ಲತಾ ಪತ್ರಿಕೋದ್ಯಮಕ್ಕೆ ಬರುವ ಎಲ್ಲ ಯುವಕರಲ್ಲಿರುವ ದೋಷಗಳು ಕೆಲವು ನಿನ್ನಲ್ಲಿಯೂ ಇವೆ ಆದರೆ ನಿನ್ನ ಉತ್ಸಾಹ ಕಾರ್ಯಾಸಕ್ತಿಯಿಂದ ಆ ದೋಷಗಳು ಮರೆಯಾಗಿವೆ ಕೆಲವು ವರ್ಷಗಳ ಅನುಭವದಿಂದ ನೀನು ಶಕ್ತಳಾದ ಪತ್ರಿಕೋದ್ಯಮಿಯಾಗಬಹುದು ಕಛೇರಿಯಲ್ಲಿ ಕೆಲಸಮಾಡುವ ಅನೇಕರ ವಿಚಾರದಲ್ಲಿ ನಾನೀ ಮಾತುಗಳನ್ನು ಹೇಳಲಾರೆ"

"ನನ್ನಮೇಲಿನ ಅಭಿಮಾನದಿಂದ ನೀವು ಈ ರೀತಿ ಹೇಳುತ್ತಿದ್ದೀರಿ"—ಲತಾ ಲಜ್ಜೆಯಿಂದ ನುಡಿದಳು

"ಪದ್ಮಳಲ್ಲಿ ನನಗೆ ಅಭಿಮಾನವಿದ್ದರೂ ಅವಳ ದೋಷಗಳನ್ನು ಹೇಳಿದೆನಲ್ಲವೇ ? ಈಚೆಗೆ ನೀನು ಕೊಟ್ಟ ಕೆಲವು ವರದಿಗಳು ನಿಜವಾಗಿ ಚೆನ್ನಾಗಿವೆ ಮದ್ರಾಸಿನಲ್ಲಿ ನಡೆಯುವ ರಾಜಕೀಯ ಸರ್ವಪಕ್ಷ ಪರಿಷತ್ತಿಗೆ ನಿನ್ನನ್ನು ವಿಶ್ವಮಿತ್ರ ಪ್ರತಿನಿಧಿಯಾಗಿ ಕಳುಹಿಸಲು ಯೋಚಿಸುತ್ತಿದ್ದೇನೆ"

ಪರಿಷತ್ತು ಡಿಸೆಂಬರ್ ಮೂರನೆಯ ವಾರ ಒಂದುವಾರ ಮಾತ್ರ ಅಂತರ ಉಳಿದಿತ್ತು ಲತಾ ಹೇಳಿದಳು

"ಮದ್ರಾಸಲ್ಲಿ ನನ್ನ ಕಾಲೇಜ್ ಗೆಳತಿಯೊಬ್ಬಳಿದ್ದಾಳೆ ಚಂಪಕಮಾಲಿನಿ ಎಂತ ಅವಳ ಹೆಸರು ಅವಳ ಗಂಡ ಮದ್ರಾಸಲ್ಲಿ ವ್ಯಾಪಾರಿ ಸಂಸ್ಥೆಯೊಂದರ ಮ್ಯಾನೇಜರ್ ಹೋದರೆ ಅವಳ ಮನೆಯಲ್ಲಿ ಇಳಿದುಕೊಳ್ಳಬಹುದು''

"ನೀನೊಬ್ಬಳೇ ಹೋಗುವುದರಿಂದ ತಿಳಿದವರ ಮನೆಯಲ್ಲಿ ಉಳಿದುಕೊಳ್ಳುವುದು ಒಳ್ಳೆಯದು ನಾಳೆ ನಿನ್ನ ಗೆಳತಿಗೆ ಕಾಗದ ಬರಿ ನಾನು ಕೂಡ ಪರಿಷತ್ತಿನ ಕಾರ್ಯದರ್ಶಿಗೆ ಬರೆಯುತ್ತೇನೆ"

"ನೀವು ಪರಿಷತ್ತಿಗೆ ಬರುವುದಿಲ್ಲವೆ ?"

"ಪತ್ರಿಕೆಯ ಮಾಲೀಕರು ಈವಾರ ಬೆಂಗಳೂರಿಗೆ ಬರುತ್ತಾರೆ. ಅವರ ಸಂಗಡ ಡಿಲ್ಲಿಗೆ ಹೋಗಬೇಕಾಗಬಹುದು ನ್ಯೂಸ್‌ಪ್ರಿಂಟ್ ಪರಿಸ್ಥಿತಿ ದಿನದಿನಕ್ಕೆ ಕೆಡುತ್ತಿದೆ ಕೈಯಲ್ಲಿ ನಾಲ್ಕಾರು ತಿಂಗಳ ಕಾಗದ ದಾಸ್ತಾ

ನಿಲ್ಲದಿದ್ದರೆ ಪತ್ರಿಕೆ ನಡೆಸುವುದು ಕಷ್ಟ. ಕಂಟ್ರೋಲ್ ಅಧಿಕಾರಿಗಳನ್ನು ಕಂಡು ಆಮದು ಪರ್ಮಿಟ್ಟಿಗೆ ಏರ್ಪಡಿಸಬೇಕು"

ಅಷ್ಟುಹೊತ್ತಿಗೆ ಅಟೆಂಡರ್ ಮಾಣಿಯೊಬ್ಬನ ಕೈಯಲ್ಲಿ ಉಪಹಾರ ತೆಗೆಸಿಕೊಂಡು ಬಂದ ರುಚಿಯಾದ ಹಲ್ವಾ ದೋಸೆ ತಿನ್ನುತ್ತಿದ್ದಂತೆ ಲತಾಂಗಿಯ ಮದ್ರಾಸ್ ಪ್ರವಾಸದ ವಿವರಗಳು ನಿರ್ಧರಿಸಲ್ಪಟ್ಟವು

— ೩ —

ಪದ್ಮಾ ಈವಿಚಾರ ಕೇಳಿದಾಗ "ಮದ್ರಾಸಿಗೆ ಹೋಗಿ ನೀನೇನು ಮಾಡಬೇಕು ಲತಾ ?" ಎಂದಳು

"ಪರಿಷತ್ತಿನಲ್ಲಿ ಏನು ನಡೆಯುತ್ತದೆ ಎಂಬುದನ್ನು ಪತ್ರಿಕೆಗೆ ಬರೆದು ಕಳುಹಿಸುವುದು"

ಲತಾ ಉತ್ತರ ಕೊಟ್ಟಳು

"ಏಕೆ ? ಮದ್ರಾಸಲ್ಲಿ ನಿಮ್ಮ ಪ್ರತಿನಿಧಿಯಿಲ್ಲವೇ ?"

"ಕನ್ನಡ ಪತ್ರಿಕೆಯಾದ್ದರಿಂದ ವಿಶೇಷ ಪ್ರತಿನಿಧಿಯನ್ನು ಕಳುಹಿಸಲು ಜೋಷಿ ಯೋಚಿಸಿದ್ದಾರೆ"

"ಅವರ ಯೋಚನೆ ಏನಾದರೂ ಇರಲಿ, ನಾಲ್ಕುದಿನ ಸ್ವತಂತ್ರವಾಗಿ ಹೊರಗಿದ್ದು ಬರುವ ಅವಕಾಶ ದೊರಕಿದಂತಾಯಿತು ಮನೆಯಲ್ಲಿ ತಾಯಿ ಮತ್ತು ಗಂಡನ ಕಾಟ ತಪ್ಪಿ ಕೆಲವು ದಿನಗಳಾದರೂ ಮನಸ್ಸಿಗೆ ಶಾಂತಿ ಸಿಕ್ಕುವುದು"

ಲತಾಂಗಿ ಮದ್ರಾಸಲ್ಲಿ ತಾನು ಉಳಿಯಲು ಮಾಡಿಕೊಂಡ ಏರ್ಪಾಡನ್ನು ತಿಳಿಸಿದಾಗ "ಅದೇಕೆ ಹಾಗೆ ಮಾಡುವೆ ? ಪ್ರತಿನಿಧಿಗಳ ಬಿಡಾರದಲ್ಲೇ ಉಳಿದುಕೊಂಡರೆ ನಾಲ್ಕಾರು ಜನರನ್ನು ಭೇಟಿಮಾಡುವ ಅವಕಾಶವಿರುವುದಿಲ್ಲವೇ ?" ಎಂದಳು

"ಅದಕ್ಕಿಂತ ಗೆಳತಿಯ ಮನೆಯಲ್ಲಿರುವುದು ಅನುಕೂಲವಲ್ಲವೇ ? ಬೇಕಾದಾಗ ಅಧಿವೇಶನಕ್ಕೆ ಹೋಗಬಹುದು ಇಲ್ಲವೇ ಮನೆಯಲ್ಲಿರ

ಬಹುದು "

"ಗೆಳತಿಯ ಮನೆಯಲ್ಲಿ ವಯಸ್ಸು ರೂಪಗಳಲ್ಲಿ ನಿನಗೆ ತಕ್ಕ ಗೆಳೆಯನೊಬ್ಬನು ಸಿಕ್ಕಲಿ ಎಂದು ನನ್ನ ಅಪೇಕ್ಷೆ"

ಪದ್ಮಾ ಹಾಸ್ಯಕ್ಕಾಗಿ ಹೇಳಿದ ಈ ಮಾತು ವಾಸ್ತವರೂಪ ತಾಳುವುದೆಂದು ಲತಾಂಗಿಯಾಗಲಿ, ಗೊತ್ತಾದ ದಿನ ಅವಳನ್ನು ಮದ್ರಾಸಿಗೆ ಕಳುಹಿಸಲು ರೈಲ್ವೆ ನಿಲ್ದಾಣಕ್ಕೆ ಬಂದಿದ್ದ ಜೋಷಿಯಾಗಲಿ ಅರಿತಿದ್ದರೆ ಭವಿಷ್ಯವನ್ನು ತಮ್ಮ ಇಚ್ಛಾನುಸಾರವಾಗಿ ಬದಲಾಯಿಸಲು ಪ್ರಯತ್ನಿಸುತ್ತಿದ್ದರೇ ಎಂಬುದನ್ನು ಖಚಿತವಾಗಿ ಹೇಳುವುದು ಯಾರಿಗೂ ಸಾಧ್ಯವಲ್ಲ. ಮನಸ್ಸಿಗೆ ಅತೀತವಾದ ಆತ್ಮಶಕ್ತಿ ಇಂತಹ ಸಂದರ್ಭಗಳಲ್ಲಿ ಮನಶ್ಶಾಸ್ತ್ರದ ನಿಯಮ ನಿಬಂಧನೆಗಳನ್ನು ಅತಿಕ್ರಮಿಸಿ ಉಚ್ಛೃಂಖಲತೆಯಿಂದ ನಡೆಯುವುದೆಂಬುದು ತಜ್ಞರ ಅಭಿಪ್ರಾಯ ಆತ್ಮಶಕ್ತಿಯ ಈ ಸ್ವಾತಂತ್ರ್ಯಕ್ಕೆ ಕರ್ಮವಿಪಾಕದ ತೆರೆ ಅಡಚಣೆಯಾಗದಿದ್ದರೆ ಮಾನವನು ತನ್ನ ಭವಿಷ್ಯವನ್ನು ತಾನೇ ಇಚ್ಛಾನುಸಾರ ರೂಪಿಸಿಕೊಳ್ಳಲು ಶಕ್ತನಾಗುತಿದ್ದನು !

ಮಗಳ ವಿಚಾರದಲ್ಲಿ ಉಪೇಕ್ಷೆ ಮತ್ತು ಅಸೂಯೆಯ ಭಾವನೆಗಳನ್ನು ಬೆಳೆಸುತ್ತಿದ್ದ ರತ್ನಮ್ಮನಾಗಲಿ, ಪತ್ನಿಯ ಹೃದಯ ರಹಸ್ಯವನ್ನು ಅರಿಯಲಾರದೆ ನಿರಾಶೆಯಿಂದ ಜಡನಾಗಿದ್ದ ಮಂಗೇಶನಾಗಲಿ ಲತಾಂಗಿಯ ಮದ್ರಾಸ್ ಪ್ರವಾಸಕ್ಕೆ ಅಡ್ಡಿಬರಲಿಲ್ಲ ''ಮದ್ರಾಸು ತಲಪಿದಮೇಲೆ ಕಾಗದ ಬರಿ" ಎಂದು ಮಾತ್ರ ಮಂಗೇಶ ಹೆಂಡತಿಗೆ ಹೇಳಿದ

ಮದ್ರಾಸನ್ನು ತಲಪಿದಾಗ ಲತಾಂಗಿಯ ಮಾನಸಿಕ ಪರಿಸ್ಥಿತಿ ಏನಾಗಿತ್ತೆಂಬುದನ್ನು ವಾಚಕರು ಇದರಿಂದ ಸ್ವಲ್ಪಮಟ್ಟಿಗೆ ಅರಿತುಕೊಳ್ಳಬಹುದು. ಪತಿಯಮೇಲಿನ ವಿದ್ವೇಷಾಗ್ನಿ ತಾಯಿ ರತ್ನಮ್ಮನ ಆಜ್ಯಾಹುತಿಯಿಂದ ಪ್ರಜ್ವಲಿತವಾಗಿತ್ತು ಜೋಷಿಯ ಸಂಬಂಧವಾದ ಆಕರ್ಷಣೆ ಆದಿನ ರಾತ್ರಿ "ವಿಶ್ವಮಿತ್ರ" ಕಛೇರಿಯ ವಾಸಗೃಹದಲ್ಲಿ ನಡೆದ ಘಟನೆಯಿಂದ ವಿಕರ್ಷಣೆಯ ರೂಪತಾಳಿತ್ತು ತಾನು ಎಂತಹ ಅಸಾಮಾನ್ಯ ರೂಪವತಿಯೇ ಆಗಿರಲಿ ತನ್ನ ಪ್ರೇಮಾರಾಧನೆ ಯಾರಿಗೂ ಬೇಡದ ವಸ್ತುವೆಂದು ಲತಾಂಗಿ ಭಾವಿಸ ತೊಡಗಿದ್ದಳು. ಮಾನವ ಸಹಜವಾದ ಅಸಂತೃಪ್ತಿಕಾಮನೆಗಳ ತುಯ್ದಾಟದಿಂದ ಅವಳ ಅಂತರಂಗ ಬಿರುಗಾಳಿಗೆ ಸಿಕ್ಕಿದ ಸಣ್ಣ ನಾವೆಯಂತೆ

ಪ್ರಕ್ಷುಬ್ಧವಾಗಿತ್ತು ಈ ಪರಿಸ್ಥಿತಿಯಲ್ಲಿ ಅವಳಿಗೆ ರಮೇಶನ ಪರಿಚಯ ವಾಯಿತು

ಸ್ತ್ರೀಣಾಂಚ ಚಿತ್ತಂ ಪುರುಷಸ್ಯ ಭಾಗ್ಯಂ ಎಂಬ ಕವಿವಾಕ್ಯ ರಮೇಶನ ವಿಚಾರದಲ್ಲಿ ಅನಿರೀಕ್ಷಿತ ರೀತಿಯಿಂದ ಅಸಾಮಾನ್ಯ ಅರ್ಥದಲ್ಲಿ ಫಲಿಸಿತು

— ೪ —

ಮದ್ರಾಸಿಂದ ಬೆಂಗಳೂರಿಗೆ ಹಿಂದಿರುಗುತ್ತಿದ್ದಂತೆ ಲತಾಂಗಿ ತನ್ನ ಜೀವಿತದ ಈ ವಿಸ್ಮಯಕರ ಘಟನೆಗಳನ್ನು ಒಂದೊಂದಾಗಿ ನೆನೆಸಿಕೊಂಡು ಚಿಂತಿಸ ತೊಡಗಿದಳು ಒಂದು ವಾರದ ಹಿಂದೆ ಮದ್ರಾಸಿಗೆ ಹೊರಟಾಗ ಹೀಗಾಗುವುದೆಂದು ಯಾರು ತಿಳಿದಿದ್ದರು ? ತನ್ನ ನಿರೀಕ್ಷೆಯಂತೆ ಚಂಪಕ ಮದ್ರಾಸಲ್ಲಿದ್ದಿದ್ದರೆ, ಸಾವಿತ್ರಮ್ಮ ಇನ್ನಷ್ಟು ಎಚ್ಚರಿಕೆ ತೆಗೆದುಕೊಂಡಿದ್ದಿದ್ದರೆ, ರಮೇಶ ಅತಿಕಾಮಿಯಲ್ಲದ ಸಾಮಾನ್ಯ ಮನುಷ್ಯನಾಗಿದ್ದರೆ, ಇವೆಲ್ಲಕ್ಕಿಂತ ಮುಖ್ಯವಾಗಿ ಪರಿಷತ್ತಿಗೆ ಹೋದ ತಾನು ಎಲ್ಲ ಪ್ರತಿನಿಧಿಗಳಂತೆ ಗೊತ್ತಾಗಿದ್ದ ಬಿಡಾರದಲ್ಲಿ ಉಳಿದುಕೊಂಡಿದ್ದಿದ್ದರೆ ಈ ಅನರ್ಥವೊಂದೂ ನಡೆಯುತ್ತಿರಲಿಲ್ಲ ಸತಿಯಾಗಿಯೇ ಬೆಂಗಳೂರಿಗೆ ಹಿಂದಿರುಗುತ್ತಿದ್ದೆ

ಪತನದ ದಾರಿ ಎಷ್ಟೊಂದು ಸುಲಭ ! ಎಷ್ಟೊಂದು ಸರಳ ! ಸಾಮಾನ್ಯ ಅಥವಾ ಸಹಜವೆಂದು ಕಂಡುಬರುವ ಅತ್ಯಲ್ಪ ವಿಚಾರಗಳೂ ಹೆಣ್ಣಿನ ಮೇಲೆ ಎಂತಹ ದೀರ್ಘ ಅನಿಷ್ಟಕಾರಕ ಪರಿಣಾಮುವನ್ನುಂಟುಮಾಡಬಲ್ಲವು

* * * *

ರೈಲು ಚಲಿಸುತ್ತಿದ್ದಂತೆ ಚಕ್ರಗಳ ಶಬ್ದ "ಕಟಾಕಟ್ ! ಕಟಾಕಟ್ ! ಕುಲಟೆ ಕುಲಟೆ ಕುಲಟೆ" ಎಂದು ತನ್ನನ್ನು ಧಿಕ್ಕರಿಸಿ ಕೂಗುತ್ತಿದೆಯೆಂದು ಲತಾಂಗಿ ಭಾವಿಸಿದಳು. "ನಾನೀಗ ಕುಲಟೆ ! ಕುಲಟೆ ! ರಮೇಶನ ಸಂಪರ್ಕದಿಂದ ಕಲುಷಿತವಾದ ಈ ದೇಹವನ್ನು ಹೊತ್ತು ಜೋಷಿಯ ಮುಂದೆ ಹೇಗೆ ನಿಲ್ಲುವುದು ?.. ಅಥವಾ ಜೋಷಿ ನನಗೇನಾಗಬೇಕು ? ಪತಿಯೇ,

ಸೋದರನೇ, ಬಂಧುವೇ ? ಒಂದು ದಿನ ಅವನೂ ನನ್ನನ್ನು ಅಪೇಕ್ಷಿಸಿದನು ನಾನು ನಿರಾಕರಿಸಿದೆ ಆ ಮೇಲೆ ಮತ್ತೊಂದು ದಿನ ನಾನು ಜೋಷಿ ನನ್ನು ಅಪೇಕ್ಷಿಸಿದೆ ಜೋಷಿ ನಿರಾಕರಿಸಿದನು ಮುಯ್ಯಿಗೆ ಮುಯ್ಯಿ ತೀರಿ ದಂತಾಯಿತು ಇಷ್ಟಕ್ಕಾಗಿ ನಾನೇಕೆ ಚಿಂತಿಸಬೇಕು ? ವೇಶ್ಯೆಯ ಹೊಟ್ಟೆ ಯಲ್ಲಿ ಹುಟ್ಟಿದ ನಾನು ವೇಶ್ಯೆಯಾಗುವುದು ಸಹಜ ರಕ್ತದ ಕರೆಗೆ ಕಿವಿ ಗೊಡದಿರುವುದು, ಜನ್ಮಸಿದ್ಧವಾದ ನಿಜಸ್ವರೂಪದ ಆಕರ್ಷಣೆಯಿಂದ ದೂರ ವಾಗಿರುವುದು ಯಾರಿಗೆ ಸಾಧ್ಯ ?

ಚಕ್ರಗಳ ಶಬ್ದ ! ಕಟಾಕಟ್ ! ಕಟಾಕಟ್ ! ಕುಲಟೆ ! **ಕುಲಟೆ ! ಕುಲಟೆ** !! ಎಂದು ಕೂಗಿ ದೀರ್ಘ ಶ್ರಮದಿಂದ ಆಯಾಸಗೊಂಡಂತೆ ಸುಯ್ದು ಅರಚಿ, ಕಿರಚಿ, ಕೊನೆಗೆ ಸುಮ್ಮನಾಯಿತು ಮಾರ್ಗ ಮಧ್ಯದ ದೊಡ್ಡ ಸ್ಟೇಷನ್ನೊಂದರಲ್ಲಿ ಗಾಡಿ ನಿಂತಿತು ಮಧ್ಯಮ ವಯಸ್ಸಿನ ಇಬ್ಬರು ಹೆಂಗಸರೂ ನಾಲ್ಕಾರುಮಂದಿ ಮಕ್ಕಳೂ ಗಾಡಿಯನ್ನೇರಿದರು ಮಹಿಳಾ ಪ್ರವಾಸಿಗಳಿಗೆ ಸಹಜವಾದ ಮಾತುಕಥೆಗಳಲ್ಲಿ, ಮಕ್ಕಳ ತಿನಸು, ವಿನೋದ, ವಿಹಾರಗಳಲ್ಲಿ ಲತಾಂಗಿಯ ಚಿಂತಾಸೂತ್ರ ಹರಿಯಿತು ಕಲ್ಪನೆಯ ಗೋಪುರ ಉರುಳಿತು.

ಬೆಂಗಳೂರಿನ ಸಮೀಪಕ್ಕೆ ಬಂದಾಗ ಲತಾಂಗಿ ಪಾರ್ಶ್ವದಲ್ಲಿದ್ದ ಪೆಟ್ಟಿಗೆ ಯನ್ನು ತೆರೆದು ರಮೇಶನು ಉಡುಗೊರೆಯಾಗಿ ಕೊಟ್ಟಿದ್ದ ಸೀರೆ ಮತ್ತು ಕಿನ್‌ಕಾಬ್ ಚೋಲಿಯನ್ನು ಹೊರಗೆ ತೆಗೆದಳು. ಬಾತ್ ರೂಮಿಗೆ ಹೋಗಿ ಮುಖ ತೊಳೆದು ಅವುಗಳನ್ನು ಧರಿಸಿದಳು.

* * * *

ರೈಲು ಬೆಂಗಳೂರು ಸ್ಟೇಷನ್ನಿನಲ್ಲಿ ನಿಂತಾಗ ಕೆಳಗಿಳಿದ ಲತಾಂಗಿ ಪತ್ರಿಕಾ ಪ್ರತಿನಿಧಿಯಾಗಿ ಮದ್ರಾಸಿಗೆ ಹೋದ ವಿದ್ಯಾವತಿ ತರುಣಿಯಾಗಿರ ಲಿಲ್ಲ ವಿಖ್ಯಾತಿ ಪಡೆದ ಚಲನಚಿತ್ರ ತಾರೆಯೋ, ರಾಜಾಶ್ರಯದಲ್ಲಿರುವ ಗಣಿಕೆಯೋ ಎಂಬಂತೆ ಕಾಣುತ್ತಿದ್ದಳು

ಲೀಲಾಧರ ಜೋಷಿಯೋ, ಪದ್ಮಾ ಆನಂದಪುತ್ರಿಯೋ ಆಗ ಅವಳನ್ನು ಪ್ರಶ್ನಿಸಿದ್ದರೆ ಮುಕ್ತಕಂಠಳಾಗಿ ಸಂಕೋಚವಿಲ್ಲದೆ ಉತ್ತರ ಕೊಡುತ್ತಿದ್ದಳು.

"ಇದುವರೆಗೆ ನಾನು ಬಂಧನದಲ್ಲಿದ್ದೆ ನಾನಾಗಿ ರಚಿಸಿಕೊಂಡ ಗೂಡಲ್ಲಿ ಬಂದಿಯಾಗಿ ಗಾಡನಿದ್ರೆ ಮಾಡುತ್ತಿದ್ದೆ ಬಂಧನದ ಅವಧಿ ಮುಗಿಯಿತು ಗೂಡನ್ನು ಹರಿದು ಹೊರಗೆ ಬಂದೆ ನಾನೀಗ ಬಹುವರ್ಣದ ಪತಂಗ ಹೂವಿಂದ ಹೂವಿಗೆ ಹಾರಿ ಮಧುವನ್ನು ಹೀರುವ ಚಿಟ್ಟೆ ಕಾಮನ ಬಿಲ್ಲಲ್ಲಿ ಕಾಣುವ ಎಲ್ಲ ಬಣ್ಣಗಳೂ ನನ್ನಲ್ಲಿವೆ ಈಗ ನಾನು ಅಸತಿ, ಅಸಂತೃಪ್ತೆ, ಅನುಪೇಕ್ಷಿತೆ, ಅಭಿಸಾರಿಕೆ"—ಎಂದು

